ಕನ್ನಡ

# ಸಾಹಿತ್ಯ ಪರಿಷತ್ ಪತ್ರಿಕೆ

ಜೂನ್ ೧೯೪೬ JUNE 1946

...ಟ ೩೧ Vol. 31

...ಕೆ ೨ Issue 2





Quarterly

JOURNAL OF THE KANNADA LITERARY ACADEMY

KANNADA SAHITYA PARISHAT

BANGALORE CITY

ವಾರ್ಷಿಕ ಚಂದಾ ರೂ. ೪ ★ Annual Subscrip... .. Rs. 4

# ಪರಿಷತ್ಪತ್ರಿಕೆಗಳ ಸಂಪಾದಕ ಮಂಡಲಿ, ೧೯೪೬

---



---

---

QUARTERLY JOURNAL
OF THE
KANNADA LITERARY ACADEMY, BANGALORE

Vol. 31] JUNE 1946 [No. 2

## CONTENTS IN BRIEF

5. KANNAḌA NĀṬAKADA HAḶAME

—*By M. Govinda Pai*

[The Antiquity of Kannaḍa Drama: That dramatic literature in Kannaḍa must have existed from the 9-10th centuries onwards is the thesis of this article. The author has culled from many sources the evidences in support of his view.]

6. SUKUMĀRA ÇARITEYALLI KAṆḌU BARUVA ONDU SHATPADA

—*By T. S. Shama Rao*

[A *shatpada* from *Sukumara carite*: A stanza in the *shatpada* metre occuring in the work '*Sukumara carite*' of 1068 A.D. by the poet S'āntinātha is quoted in this article. This is a rare and important find. No such stanza, in strict conformity with the definition of it by the metrician Nāgavarma, was so far available.]

7. BOOK REVIEWS AND CRITICISM

(i) Agni-hamsa (By K. V. P.)
—*By A. N. Srinivasaiengar*

(ii) Mēghanāda (By B. H. Sridhara)
—*By A. N. S.*

(iii) Nasuku (By Naregal Prahlada Rao)
—*By A. N. S.*

(iv) Ranjana (By Vasudeva Bhupalam)
—*By A. N. Srinivasaiengar*

(v) Prēma-Kās'mīra (By K. V. P.)
—*By A. N. S.*

(vi) The Heritage of Karnātaka (By Prof. R. S. Mugali)
—*By S. Srikantha Sastry*

(vii) Praçīnā Sāhitya (Tr. by the late Prof. T. S. Venkannaiya)
—*By M. Rama Rao*

(viii) Dhwaja-Rakshaṇe (By P. T. Narasimhachar)
—*By K. Narasimha murthy*

(viii) Gaḷaganātha (A collection of essays)
—*By C. K. Venkataramaiya*

8. LIST OF SELECT ARTICLES FROM ORIENTAL JOURNALS

# ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ

## ವ್ಯಯ - ಜ್ಯೇಷ್ಠ

ಸಂಪುಟ ೩೧ ] ಜೂನ್ ೧೯೪೬ [ ಸಂಚಿಕೆ ೨

## ವಿಷಯಸೂಚಿಕೆ

## “ ಎನಿತ್ತೆನಿತ್ತಂಬುಜಪತ್ರನೇತ್ರೆಯಾ . . . ”

ಶಬ್ದಮಣಿದರ್ಪಣದಲ್ಲಿ ಕೇಶಿರಾಜನು ಸ್ವಾರಸ್ಯವುಳ್ಳ ಹಲವು ಪದ್ಯಗಳನ್ನೂ ತುಣುಕುಗಳನ್ನೂ ಉದಾಹರಿಸಿರುವನಷ್ಟೆ. ೧೭೮ನೆಯ ಸೂತ್ರದ ಕೆಳಗೆ ಬಂದಿರುವ ಒಂದು ಪದ್ಯವು ಅನೇಕ ಕಾರಣಗಳಿಂದ ಗಮನವನ್ನು ಸೆಳೆಯುತ್ತದೆ. ಸಾಹಿತ್ಯ ಪರಿಷತ್ತಿನ ಮುದ್ರಣದಲ್ಲಿ (ಪು. ೧೦೪) ಅದು ಹೀಗಿದೆ :

ವಂಶಸ್ಥಂ॥ ಎನಿತ್ತೆನಿತ್ತಂಬುಜಪತ್ರನೇತ್ರೆಯಾ ।
ಘನಸ್ತನಂಗಳ್ ಬಳೆಗುಂ ಕಿರಾತೆಯಾ ॥
ಅನಿತ್ತನಿತ್ತಂ ವನದೊಳ್ ವನೇಚರಂ ।
ತನತ್ತು ಬಿಲ್ಲಾನದನಂತೆ ಕೀಸುವಂ ॥

ಪದ್ಯವು ಶೃಂಗಾರಪರವೆಂಬುದೇನೋ ಸ್ಪಷ್ಟವಾಗಿದೆ. ಆದರೆ ಅರ್ಥವಷ್ಟೂ ಖಚಿತವಾಗಿ ನಿಸ್ಸಂದೇಹವಾಗಿ ಮೇಲುನೋಟಕ್ಕೆ ಹೊಳೆಯುವುದು ಕಷ್ಟ; ಕೊನೆಯ ಪಾದದ ಪಾಠದಲ್ಲಿಯೇ ತೊಡಕಿದೆ. ಇದನ್ನು ಬಿಡಿಸಬೇಕೆಂಬ ಆಸಕ್ತಿಯ ಜೊತೆಗೆ, ಇದು ಯಾರ ಯಾವ ಕೃತಿಯಿಂದ ಎತ್ತಿಕೊಂಡದ್ದೆಂಬುದನ್ನು ತಿಳಿಯುವ ಅಪೇಕ್ಷೆಯೂ ಹುಟ್ಟುತ್ತದೆ. ಅಲ್ಲದೆ, ಕನ್ನಡ ಕಾವ್ಯಗಳಲ್ಲಿ ಅಪೂರ್ವವಾದ ವಂಶಸ್ಥವೃತ್ತದ ಪ್ರಯೋಗವೂ, “ಬಿಲ್ಲಾನ್” ಎಂಬ ಪೂರ್ವದ ಹಳಗನ್ನಡದ ಛಾಯೆಯುಳ್ಳ ರೂಪವೂ ಈ ಪದ್ಯದ ಪ್ರಾಚೀನತೆಗೆ ಪೋಷಕವಾಗಿ ಕುತೂಹಲವನ್ನು ಬಲಪಡಿಸುತ್ತವೆ.

ಈ ಪದ್ಯವನ್ನೊಳಕೊಂಡಿದ್ದ ಕಾವ್ಯವು ಈಗ ದೊರೆಯುವುದಿಲ್ಲವೆಂಬುದೇನೋ ವಿಷಾದದ ಸಂಗತಿ. ಆದರೆ ಇಷ್ಟರಿಂದ ನಾವು ನಿರಾಶೆಪಡಬೇಕಾಗಿಲ್ಲ. ಹಿಂದಿನಿಂದಲೂ ಕನ್ನಡದ ಲಾಕ್ಷಣಿಕರ ದೃಷ್ಟಿ ಇದರ ಮೇಲೆ ಬಿದ್ದಿದೆ. ಇದು ಮೊದಲು ಕಾಣಿಸಿಕೊಳ್ಳುವುದು ಎರಡನೆಯ ನಾಗವರ್ಮನ (ಕಾಲ : ಕ್ರಿ.ಶ. ಸು. ೧೧೪೫) ಕಾವ್ಯಾವಲೋಕನದಲ್ಲಿ. ಅನಿತು, ಇನಿತು, ಎನಿತು ಎಂಬ ಪರಿಮಾಣವಾಚಕಗಳಿಗೆ ಅನಿತ್ತು, ಇನಿತ್ತು, ಎನಿತ್ತು ಎಂಬ ದ್ವಿತ್ವ ಸಹಿತವಾದ ಪ್ರಯೋಗವೂ ಉಂಟೆಂದು ತೋರಿಸಲು ಈ ಪದ್ಯವನ್ನು ಅವನು ಉದಾಹರಿಸುತ್ತಾನೆ (೭ನೆಯ ಸೂತ್ರದ ಕೆಳಗೆ: ಪದ್ಯ ೩೯). ಅವನ ಭಾಷಾಭೂಷಣದಲ್ಲಿ ಇದಕ್ಕೆ ಸಂವಾದಿಯ ಸೂತ್ರದ (೧೮೧) ಕೆಳಗೆ ಬಂದಿರುವುದು[1] ಮಾತ್ರವಲ್ಲದೆ, ಸ್ವರವು ಪರವಾದಾಗ ದ್ವಿತೀಯಾವಿಭಕ್ತಿಪ್ರತ್ಯಯದ ಸ್ವರವು ವಿಕಲ್ಪವಾಗಿ ದೀರ್ಘವಾಗುವುದೂ ಉಂಟೆಂಬುದಕ್ಕೆ ನಿದರ್ಶನವಾಗಿ[2] ಇನ್ನೂ ಹಿಂದೆಯೇ (ಸೂ. ೬೮ರ ಕೆಳಗೆ) ಈ ಪದ್ಯ

---

[1] ಈ ದ್ವಿತ್ವ ವಿಚಾರವು ಕಾವ್ಯಾವಲೋಕನ ಭಾಷಾಭೂಷಣಗಳೆರಡರಲ್ಲೂ ಸೂತ್ರದೊಳಗೇ ಸೇರಿಲ್ಲ; ಸೂತ್ರದ ಕೆಳಗೆ ವೃತ್ತಿಪ್ರಯೋಗಗಳಲ್ಲಿ ಹೆಚ್ಚಿನ ಹೇಳಿಕೆಯಾಗಿ ಬರುತ್ತದೆ.

[2] ಪೂರ್ವದ ಹಳಗನ್ನಡದಲ್ಲಿ -ಆನ್ ಎಂಬ ದೀರ್ಘರೂಪವು ಸ್ವರಾದಿ ಪದಗಳು ಪರವಾದಾಗ ಮಾತ್ರವೇ ಅಲ್ಲದೆ ಎಲ್ಲ ಸಂದರ್ಭಗಳಲ್ಲೂ ಕಾಣಿಸಿಕೊಳ್ಳುತ್ತದೆ. ಉದಾ.—ಪ್ರಾಸಾದಾನ್ತರಮಾನ್ ವಿಚಿತ್ರಕನಕಪ್ರಜ್ವಲ್ಯದಿನ್ ಮಿಕ್ಕುದಾನ್ (ಶ್ರವಣಬೆಳ್ಗೊಳ, ೨೭), ನೋನ್ತೆಯ್ದಿದೊರ್ ಸಿದ್ಧಿಯಾನ್ (ಶ್ರವಣಬೆಳ್ಗೊಳ, ೨೨). ಹಳಗನ್ನಡದ ವ್ಯಾಕರಣಕಾರರು “ಬಿಲ್ಲಾನದಂ” ಎಂಬಂಥ ಪ್ರಯೋಗಗಳನ್ನು ಮಾತ್ರ, ಅದೂ ವೈಕಲ್ಪಿಕವಾಗಿ, ಅಂಗೀಕರಿಸುತ್ತಾರೆ. ಇದರ ವಿವೇಚನೆ ಕವಿರಾಜಮಾರ್ಗದಲ್ಲಿಯೇ ಮೊದಲಾಗಿದೆ (೨. ೧೫–೧೮ ನೋಡಿ).

ಬಂದು – ಅಂತೂ ಒಂದೇ ಗ್ರಂಥದಲ್ಲಿ ಎರಡು ಕಡೆ ಸಿಕ್ಕುತ್ತದೆ.[3] ಬಳಿಕ ಕೇಶಿರಾಜನ ಸರದಿ (ಕಾಲ: ಕ್ರಿ.ಶ. ಸು. ೧೨೬೦). ಭಾಷಾಭೂಷಣದ ೬೮ನೆಯ ಸೂತ್ರಕ್ಕೆ ಸಂವಾದಿಯಾದದ್ದು ಶಬ್ದಮಣಿದರ್ಪಣದ ೧೧೮ನೆಯ ಸೂತ್ರ. ವಾಚಕರಿಗೆ ಪ್ರಸ್ತುತ ಪದ್ಯದ ಮೊದಲ ಪರಿಚಯವು ಸಾಮಾನ್ಯವಾಗಿ ಆಗುವುದು ಇಲ್ಲಿಯೇ. ಈಚೆಗೆ ಬಂದ ಭಟ್ಟಾಕಳಂಕನೂ (ಕಾಲ: ಕ್ರಿ.ಶ. ೧೬೦೪) ಕೇಶಿರಾಜನನ್ನೇ ಅನುಸರಿಸಿ, ಶಬ್ದಾನುಶಾಸನದ ೨೫೬ನೆಯ ಸೂತ್ರದ ಕೆಳಗೆ ಇದನ್ನು ಉದಾಹರಿಸುತ್ತಾನೆ.[4] ಈ ಪದ್ಯವು ವಿದ್ವತ್ಪ್ರಿಯವೆಂಬುದಕ್ಕೆ ಇಷ್ಟೇ ಸಾಕ್ಷಿ ಸಾಕು; ಆದರೆ ಇನ್ನೂ ಒಂದು ಉಂಟು. ಈ ಸಲ ಆಕರಗ್ರಂಥ ವ್ಯಾಕರಣವಲ್ಲವೆಂಬುದೊಂದೇ ವಿಶೇಷ. ಅಭಿನವವಾದಿ ವಿದ್ಯಾನಂದನು (ಕಾಲ: ಕ್ರಿ.ಶ. ೧೫೩೩) ಕಾವ್ಯಸಾರವೆಂಬ ಪದ್ಯಸಂಕಲನದಲ್ಲಿ ಶಬರವರ್ಣನೆಯ ಪ್ರಸಂಗದಲ್ಲಿ ಇದನ್ನು ಉದ್ಧರಿಸಿದ್ದಾನೆ (ಪದ್ಯ ೧೮೯೧). ಅಂತೂ ಹೀಗೆ ಬೇರೆ ಬೇರೆ ಆರು ಕಡೆಗಳಲ್ಲಿ ಎತ್ತಿಕೊಟ್ಟಿರುವ ಕನ್ನಡಪದ್ಯಗಳು ಅಪೂರ್ವ.

ಇಷ್ಟೊಂದು ಕಡೆ ಈ ಪದ್ಯ ದೊರೆಯುವುದರಿಂದ, ಸಹಜವಾಗಿ ಇದರಲ್ಲಿ ಅನೇಕ ಪಾಠಭೇದಗಳೂ ಉಂಟಾಗಿವೆ. ಅವುಗಳ ವಿಮರ್ಶೆಗೆ ತೊಡಗುವ ಮೊದಲು ಪದ್ಯದ ಆಶಯವೇನೆಂಬುದನ್ನು ಪರಿಷ್ಕಾರಮಾಡಿಕೊಳ್ಳುವುದು ಆಗತ್ಯ. ಅರಣ್ಯವಾಸಿಗಳಾಗಿ ಬಿಲ್ಲಿನ ಬೇಟೆಯಿಂದ ಜೀವನ ನಡಸುವ ಬೇಡರಿಗೆ ಸಂಬಂಧಿಸಿದ ಒಂದು ಸಂಗತಿಯನ್ನು ಇಲ್ಲಿ ಕವಿ ಚಮತ್ಕಾರವಾಗಿ ಚಿತ್ರಿಸಿದ್ದಾನೆ. ಚೆಲುವೆಯಾದ ಬೇಡಿತಿಯ ಯೌವನವು ವರ್ಧಿಸಿದ ಹಾಗೆಲ್ಲ ಅವಳಲ್ಲಿ ಬೇಡನು ಅತ್ಯಾಸಕ್ತನಾಗಿ ದುರ್ಬಲನಾಗುತ್ತಾನೆ. ಮೊದಲು ಲೀಲಾಜಾಲವಾಗಿ ಅವನು ಬಾಗಿಸುತ್ತಿದ್ದ ಬಿಲ್ಲು ಈಗ ಅವನ ಅಳವಿಗೆ ಮೀರುತ್ತದೆ. ಅದನ್ನು ಆಗಿಂದಾಗ ಕೆತ್ತಿ ತೆಳ್ಳತೆಳ್ಳಗೆ ಮಾಡಿಕೊಂಡ ಹೊರತು ಅವನು ಉಪಯೋಗಿಸಲಾರನು. ಹೀಗೆ, ಬೇಡಿತಿಯ ಎದೆ ಎಷ್ಟೆಷ್ಟು ತುಂಬಿಕೊಳ್ಳುವುದೋ ಅಷ್ಟಷ್ಟೂ ತನ್ನ ಬಿಲ್ಲನ್ನು ಬೇಡನು ಹೆರೆಹೆರೆದು ತೆಳುವಾಗಿಸುತ್ತಾನೆ ಎಂಬುದೇ ಇಲ್ಲಿಯ ಅರ್ಥ ಚಮತ್ಕಾರ.

ಈ ಬಗೆಯ ಭಾವ ಭರತಖಂಡದ ಪ್ರಾಚೀನ ಸಾಹಿತ್ಯದಲ್ಲಿ ಅಪೂರ್ವವೇನೂ ಅಲ್ಲ. ಹಾಲ (ಅಥವಾ ಶಾಲಿವಾಹನ) ನಿಂದ (ಕಾಲ: ಕ್ರಿ.ಶ. ೫ನೆಯ ಶತಮಾನ ?) ಸಂಕಲಿತವಾದ ಗಾಥಾಸಪ್ತಶತಿಯಲ್ಲಿ ದೊರೆಯುವ ಎರಡು (ಪ್ರಾಕೃತ) ಪದ್ಯಗಳು ಮೇಲಿನ ನಮ್ಮ ವಿವರಣೆಗೆ ಪರಿಪೋಷಕವಾಗುತ್ತವೆ. ಬೇಡನು ಬಿಲ್ಲನ್ನು ಕೆತ್ತಿ ಬೀಳಿಸಿದ ತೆಳುಹೆರೆಗಳು ತನ್ನ ತರುಣಿಯಲ್ಲಿ ಅವನಿಗಿರುವ ಅಮಿತಾಸಕ್ತಿಯ ನಿದರ್ಶನವಾಗಿ, ಅವಳ ಸೌಭಾಗ್ಯಾತಿಶಯದ ಪ್ರತೀಕವಾಗಿ ಕವಿಯ ಕಣ್ಣಿಗೆ ತೋರುತ್ತವೆ. ಈ ಎರಡು ಪದ್ಯಗಳೂ ಶಾಲಿವಾಹನನೇ ಬರೆದುವಂತೆ.

(೧) ಅಜ್ಜ ಕಇಮೋ ವಿ ದಿಅಹೋ ವಾಹವಹೂ ರೂವಜೊವ್ವಣುಮ್ಮತ್ತಾ।
ಸೋಹಗ್ಗಂ ಧಣುರುಂಪಚ್ಛಲೇಣ ರಚ್ಛಾಸು ವಿಕ್ಕಿರಇ॥ (೨. ೧೯)

[3] ಸ್ವರವು ಪರವಾದಾಗ ದ್ವಿತೀಯೆಯ ಸ್ವರಕ್ಕೆ ದೀರ್ಘವನ್ನು ಅಂಗೀಕರಿಸುವ ಸೂತ್ರ ಕಾವ್ಯಾವಲೋಕನದಲ್ಲಿಯೂ ಉಂಟು (೩೧); ಆದರೆ ಉದಾಹರಣೆ ಬೇರೆಯಾಗಿದೆ. "ಪುರಾತನೋಕ್ತಿಗಳೊಳಂತದಲ್ಲಿ ಯಥೇಷ್ಟಂ" ಎಂದು ನಾಗವರ್ಮನು ಸೂತ್ರದಲ್ಲಿಯೇ ಹೇಳಿದ್ದಾನೆ.

[4] ಅನಿತು, ಇನಿತು, ಎನಿತು ಎಂಬುವಕ್ಕೆ ವಿಶಿಷ್ಟವಾಗಿ ದ್ವಿತ್ವವನ್ನು ವಿಧಿಸುವ ಸೂತ್ರ ಶಬ್ದಮಣಿದರ್ಪಣದಲ್ಲಿಲ್ಲ; ಶಬ್ದಾನುಶಾಸನದಲ್ಲಿಯೂ ಇಲ್ಲ. ಆದಕಾರಣ ನಮ್ಮ ಪದ್ಯ ಇವೆರಡು ಗ್ರಂಥಗಳಲ್ಲೂ ಮತ್ತೊಮ್ಮೆ ಬರಲು ಅವಕಾಶವಿರಲಿಲ್ಲ.

[ಅದ್ಯ ಕತಮೋऽಪಿ ದಿವಸೋ ವ್ಯಾಧವಧೂ ರೂಪಯೌವನೋನ್ಮತ್ತಾ ।
ಸೌಭಾಗ್ಯಂ ಧನುಸ್ತಷ್ಟತ್ವಕ್‌ಛಲೇನ ರಥ್ಯಾಸು ವಿಕಿರತಿ ॥

ಎನಿತನೆ ದಿನವೊ ತಾನಿಂದಿಗೆ– ಬೇಡಿತಿ
ರೂಪಯೌವನದಿಂದ ಸೊಕ್ಕಿ,
ಬಿಲ್ಲ ಹೆರೆಯ ನೆವದಿಂದ ಸೌಭಾಗ್ಯವ
ಬೀದಿಬೀದಿಯಲಿ ಬೀರುವಳು.]

(೨) ಉಕ್ಖಿಪ್ಪಇ ಮಂಡಲಿಮಾರುಏಣ ಗೇಹಂಗಣಾಹಿ ವಾಹೀಏ।
ಸೋಹಗ್ಗಧಅವಡಾಅ ವ್ವ ಉವಹ ಧನುರುಂಪರಿಂಛೋಲೀ॥ (೨. ೨೦)

[ಉತ್ಕ್ಷಿಪ್ಯತೇ ಮಂಡಲೀಮಾರುತೇನ ಗೇಹಾಂಗಣಾದ್ವ್ಯಾಧಸ್ತ್ರಿಯಾಃ।
ಸೌಭಾಗ್ಯಧ್ವಜಪತಾಕೇವ ಪಶ್ಯತ ಧನುಃಸೂಕ್ಷ್ಮತ್ವಕ್‌ಪಂಕ್ತಿಃ॥

ನೋಡಿ: ಸುಟ್ಟುರಿಗಾಳಿ ಬೇಡವೆಣ್ಣಿನ ಹಟ್ಟಿ-
ಯಂಗಳದಿಂದೆತ್ತುತಿಹುದು
ಬಿಲ್ಲಿನ ತೆಳುಹೆರೆ ಸಾಲನು ಮೇಲಕೆ
ಸೌಭಾಗ್ಯಧ್ವಜದಂಡದಂತೆ.]

ಇನ್ನು ನಮ್ಮ ಪದ್ಯದ ಪಾಠಶೋಧನೆಗೆ ಗಮನಕೊಡಬಹುದು. ಇದಕ್ಕಾಗಿ ಉಪಯೋಗಿಸಿಕೊಂಡಿರುವ ಆಕರಗಳನ್ನೂ ಅವುಗಳಿಗೆ ಕೊಟ್ಟಿರುವ ಸಂಕೇತಗಳನ್ನೂ ಕೆಳಗಿನ ಪಟ್ಟಿಯಲ್ಲಿ ಗುರುತಿಸಿದೆ.

ಕಾವ್ಯಾ 1 — ಕಾವ್ಯಾವಲೋಕನ: ರಾ. ನರಸಿಂಹಾಚಾರ್ಯರ ಮುದ್ರಣ (ಬೆಂಗಳೂರು, ಕ್ರಿ.ಶ. ೧೯೦೩)

ಕಾವ್ಯಾ 2 — ,, : ಎಚ್. ಆರ್. ರಂಗಸ್ವಾಮಿ ಅಯ್ಯಂಗಾರರ ಮುದ್ರಣ (ಮೈಸೂರು ಓರಿಯೆಂಟಲ್ ಲೈಬ್ರರಿ, ಕ್ರಿ.ಶ. ೧೯೩೩)

ಕಾವ್ಯಾ 3 — ,, : ಶಿ. ಶಿ. ಬಸವನಾಳ ಮತ್ತು ಕೇಪು ಶಂಕರ ನಾರಾಯಣ ಅವರ ಮುದ್ರಣ (ಧಾರವಾಡ, ಕ್ರಿ.ಶ. ೧೯೩೩)

ಭಾಷಾ 1 — ಭಾಷಾಭೂಷಣ: ಲ್ಯೂಯಿ ರೈಸರ ಮುದ್ರಣ (ಬೆಂಗಳೂರು, ಕ್ರಿ.ಶ. ೧೮೮೪)

ಭಾಷಾ 2 ಕ — ,, : ರಾ. ನರಸಿಂಹಾಚಾರ್ಯರ ಮುದ್ರಣ (ಬೆಂಗಳೂರು, ಕ್ರಿ.ಶ. ೧೯೦೩) – ೬೮ನೆಯ ಸೂತ್ರದ ಕೆಳಗೆ

ಭಾಷಾ 2 ಖ — ,, : ,, –೧೮೧ನೆಯ ಸೂತ್ರದ ಕೆಳಗೆ[5]

ಶಬ್ದ 1 — ಶಬ್ದಮಣಿದರ್ಪಣ: ಎಫ್. ಕಿಟ್ಟೆಲರ ಮೊದಲನೆಯ ಮುದ್ರಣ (ಮಂಗಳೂರು, ಕ್ರಿ.ಶ. ೧೮೭೨)

ಶಬ್ದ 2 — ,, : ,, ಮೂರನೆಯ ಮುದ್ರಣ (ಪಂ. ಮಂಗೇಶರಾಯರು ಪರಿಷ್ಕರಿಸಿದ್ದು: ಮಂಗಳೂರು, ಕ್ರಿ.ಶ. ೧೯೨೦)

ಶಬ್ದ 3 — ,, : ಕ. ಸಾ. ಪರಿಷತ್ತಿನ ಮುದ್ರಣ (ಬೆಂಗಳೂರು, ಕ್ರಿ.ಶ. ೧೯೨೦)

ಶಬ್ದ 4 — ,, : ಲಿಂಗಣಾರಾಧ್ಯವೃತ್ತಿಯೊಡನೆ ಎ. ವೆಂಕಟರಾವ್ ಮತ್ತು ಎಚ್. ಶೇಷಯ್ಯಂಗಾರ್ ಮುದ್ರಿಸಿದ್ದು (ಮದರಾಸು, ಕ್ರಿ.ಶ. ೧೯೩೯)

ಶಬ್ದಾನು 1 — ಶಬ್ದಾನುಶಾಸನ: ಲ್ಯೂಯಿ ರೈಸರ ಮುದ್ರಣ (ಬೆಂಗಳೂರು, ಕ್ರಿ.ಶ. ೧೮೯೦)

ಶಬ್ದಾನು 2 — ,, : ರಾ. ನರಸಿಂಹಾಚಾರ್ಯರ ಮುದ್ರಣ (ಬೆಂಗಳೂರು, ಕ್ರಿ.ಶ. ೧೯೨೩)

ಕಾವ್ಯಾಸಾ — ಕಾವ್ಯಸಾರ: ಎಸ್. ಜಿ. ನರಸಿಂಹಾಚಾರ್ ಮತ್ತು ಮ. ಆ. ರಾಮಾನುಜೈಯಂಗಾರ್ ಅವರ ಮುದ್ರಣ (ಮೈಸೂರು, ೧೮೯೮)

ಈ ಮುದ್ರಣಗಳಲ್ಲಿ ಸಂಪಾದಕರು ಉಲ್ಲೇಖಿಸಿರುವ ಪಾಠಾಂತರಗಳನ್ನು ಆಯಾ ಗ್ರಂಥದ ಸಂಕೇತದ ಮುಂದೆ "–ಪಾ" ಎಂದು ಬರೆದು ಗುರುತಿಸಲಾಗಿದೆ.[6] ಉದಾ.– ಕಾವ್ಯಾ 3 – ಪಾ, ಭಾಷಾ 2 ಖ – ಪಾ, ಇತ್ಯಾದಿ.

ನಮ್ಮ ಪದ್ಯದ ಮೊದಲ ಮೂರು ಪಾದಗಳಲ್ಲಿ ಲೇಖಕರ ಪ್ರಮಾದಗಳಿಂದೋ ಅಚ್ಚಿನ ತಪ್ಪುಗಳಿಂದೋ ನಿಸ್ಸಂದೇಹವಾಗಿ ತೋರುವ ಎರಡು ಮೂರು ಪಾಠಾಂತರಗಳನ್ನು ಇಲ್ಲಿ ಗಣನೆಗೆ ತೆಗೆದುಕೊಂಡಿಲ್ಲ; ಅವನ್ನು ಉಲ್ಲೇಖಿಸುವುದೂ ಅನಾವಶ್ಯಕ. ಎರಡನೆಯ ಪಾದದ "ಬಳಿಗುಂ" ಎಂಬುದಕ್ಕೆ ಬಳಿಯಳ್- (ಭಾಷಾ 1), ಬಳಿಗಳ್ (ಶಬ್ದ 4 – ಪಾ), ಬಳಿಯಲ್ (ಶಬ್ದಾನು 1.2) ಎಂಬ ಪಾಠಾಂತರಗಳುಂಟು. ಇವೂ ಪ್ರಮಾದಜನ್ಯಗಳೆಂದೇ

---

[5] ಬಿ. ಎಲ್. ರೈಸರು ಮುದ್ರಿಸಿರುವ ಭಾಷಾಭೂಷಣದಲ್ಲಿ ಈ ಎರಡನೆಯ ಸಲ ನಮ್ಮ ಪದ್ಯ ಉದಾಹೃತವಾಗಿಲ್ಲ. ಪರಿಶಿಷ್ಟದಲ್ಲಿ ಮಾತ್ರ—"L. & B. *add the quotation given under sūtra 69.*" ಎಂದು ತಿಳಿಸಿದ್ದಾರೆ; ಪಾಠಾಂತರಗಳೇನನ್ನೂ ಸೂಚಿಸಿಲ್ಲ. ರೈಸರ ಮುದ್ರಣದಲ್ಲಿ ಈ ಸೂತ್ರದ ಸಂಖ್ಯೆ ೧೮೭; ರಾ. ನರಸಿಂಹಾಚಾರ್ಯರ ಮುದ್ರಣದಲ್ಲಿರುವಂತೆ ೧೮೧ ಅಲ್ಲ.

[6] ಆಯಾ ಸಂಪಾದಕರು ಉಪಯೋಗಿಸಿಕೊಂಡು ಗುರುತಿಸಿರುವ ಮೂಲಮಾತೃಕೆಗಳ ಪಾಠಭೇದಗಳನ್ನು ಮಾತ್ರ ಇಲ್ಲಿ ಕೊಟ್ಟಿದ್ದೇವೆ. ಅಚ್ಚಿನ ಪುಸ್ತಕಗಳಲ್ಲಿ ಉಂಟೆಂದು ಅವರು ಉದ್ಧರಿಸಿರುವ ಪಾಠಭೇದಗಳನ್ನು, ಅವು ನಮ್ಮ ಪಟ್ಟಿಯಲ್ಲಾಗಲೆ ಸ್ವಸ್ಥಳದಲ್ಲಿ ಸೇರಿರುವುದರಿಂದ, ಮತ್ತೆ ಉಲ್ಲೇಖಿಸಿಲ್ಲ.

ಧೈರ್ಯವಾಗಿ ಹೇಳಿ ಕೈಬಿಡಬಹುದು. ನಿಜವಾದ ಕ್ಲೇಶವಿರುವುದು ನಾಲ್ಕನೆಯ ಪಾದದಲ್ಲಿ. ಅಲ್ಲಿ ದೊರೆಯುವ ಪಾಠವೈಪುಲ್ಯ ಬೆರಗು ತರುವಂಥದು:

ತನತ್ತು[7] ಬಿಲ್ಲಾನದನಂತೆ ಕೀಸುವಂ

(೧) ನನ್ತು (ಕಾವ್ಯಾ 1); ನಂತು (ಕಾವ್ಯಾ 2.3, ಭಾಷಾ 1); ನಂತೆ (ಕಾವ್ಯಾ 3 – ಪಾ, ಭಾಷಾ 2 ಖ, ಶಬ್ದ 2.3.4); ನೆಂತು (ಶಬ್ದಾನು 1.2); ನೆಂತೆ (ಶಬ್ದಾನು 2 – ಪಾ); ನೆತ್ತು (ಶಬ್ದ 1); ನೆತ್ತೆ (ಕಾವ್ಯಸಾ); ನೊತ್ತಿ (ಭಾಷಾ 2 ಖ); ನೇಕೆ.[8]

(೨) ಕೀಸುಗುಂ (ಕಾವ್ಯಾ 1.2.3, ಭಾಷಾ 1.2 ಕ); ಕೀಸುವಂ (ಕಾವ್ಯಾ 1–ಪಾ, ಕಾವ್ಯಾ 2 – ಪಾ, ಕಾವ್ಯಾ 3 – ಪಾ, ಭಾಷಾ 2 ಖ – ಪಾ, ಶಬ್ದ 1.2.3.4, ಶಬ್ದಾನು 1.2, ಕಾವ್ಯಸಾ); ಕೆತ್ತುಗುಂ (ಭಾಷಾ 2 ಖ), ಕೆತ್ತುವಂ (ಭಾಷಾ 2 ಖ – ಪಾ).

ಈ ಪಾಠಾಂತರಗಳ ಪಟ್ಟಿಯಲ್ಲಿ ಎರಡನೆಯದನ್ನು ಮೊದಲು ತೆಗೆದುಕೊಳ್ಳೋಣ. "ಕೀಸು", "ಕೆತ್ತು" ಈ ಎರಡು ಧಾತುಗಳಲ್ಲಿ ಮೂಲಪಾಠಕ್ಕೆ ಸೇರಿದ್ದು ಯಾವುದೆಂದು ನಿರ್ಣಯಿಸುವುದು ಸುಲಭ. "ಕೀಸು" ಎಂದರೆ "ತೆಳ್ಳಗೆ ಮಾಡು, ಹೆರೆ" ಎಂದು ಅರ್ಥ.[9] ಈ ಧಾತುವಿನ ಪ್ರಾಚುರ್ಯ ಕಡಮೆಯಾದಾಗ, ಇದಕ್ಕೆ ಬಲುಮಟ್ಟಿಗೆ ಸಮಾನಾರ್ಥಕವಾಗಿ ಇಂದಿಗೂ ಬಳಕೆಯಲ್ಲಿರುವ "ಕೆತ್ತು" ಎಂಬುದು ಇದರ ಸ್ಥಾನವನ್ನು ಒಂದೆರಡು ಮಾತೃಕೆಗಳಲ್ಲಿ ಆಕ್ರಮಿಸಿದಂತೆ ತೋರುತ್ತದೆ. ಇನ್ನು, "ಕೀಸುಗುಂ," "ಕೀಸುವಂ" – ಎಂಬೆರಡಕ್ಕೂ ಒಂದೇ ಅರ್ಥವಾದರೂ, ಪದ್ಯದ ಎರಡನೆಯ ಪಾದದಲ್ಲಿರುವ "ಬಳೆಗುಂ" ಎಂಬುದಕ್ಕೆ ಸಮತೂಕವಾಗಿ ನಿಲ್ಲುವ "ಕೀಸುಗುಂ" ಎಂಬುದೇ ಪ್ರಾಕ್ತನವೆಂದು ಊಹಿಸಬಹುದು.

ಮೊದಲನೆಯ ಪಟ್ಟಿಯಲ್ಲಿ, ಎಲ್ಲ ಪದಗಳಿಗೂ "ಅದನ್" ಎಂಬ ಹಿಂದಿನ ಪದದ ಅಂತ್ಯದ ನಕಾರವು ಅಂಟಿಕೊಂಡಿದೆಯಷ್ಟೆ. ಅದನ್ನು ತೆಗೆದರೆ ನಿಲ್ಲುವವು: ಅಂತು (ಅನ್ತು) – ಅಂತೆ – ಎಂತು – ಎಂತೆ – ಎತ್ತು – ಎತ್ತೆ – ಒತ್ತಿ – ಏಕೆ ; ಈ ಪಾಠಭೇದಗಳ ಸಂತೆಯಲ್ಲಿ ಯಾವುದು ಸರಿ? "ಏಕೆ" ಎಂಬುದನ್ನು ಬಿಟ್ಟರೆ, ಮಿಕ್ಕವುಗಳಿಗೆಲ್ಲ ರೂಪದಲ್ಲಿ ಅಲ್ಪಭೇದ ಮಾತ್ರ; ಯಾವುದೊಂದನ್ನಾದರೂ ಮೂಲರೂಪವೆಂದು ಅಂಗೀಕರಿಸಿ, ಉಳಿದುವು ಅದರ "ಅಪಪಾಠ"ಗಳೆಂದು ಹೆಚ್ಚು ಶ್ರಮವಿಲ್ಲದೆ ವಾದ ಮಾಡಬಹುದು. ಆದಕಾರಣ, ಗ್ರಂಥಸಂಪಾದನಶಾಸ್ತ್ರದ ನಿಯಮವೊಂದನ್ನು ಇಲ್ಲಿಗೆ ಅನ್ವಯಿಸಲು

---

[7] ತನಿತ್ತು (ಕಾವ್ಯಾ 3 – ಪಾ); ಇದು ಲೇಖಕನ ಪ್ರಮಾದದಿಂದ ಉಂಟಾದ ಅಪಪಾಠವೆಂದು ಎದ್ದು ಕಾಣಿಸುತ್ತದೆ. ತನತ್ತು = ತನ್ನದು.

[8] ನನ್ನ ವಶದಲ್ಲಿರುವ ಶಬ್ದಮಣಿದರ್ಪಣದ ಓಲೆಗರಿಯ ಪ್ರತಿಯೊಂದರಲ್ಲಿ ಇದು ಗೋಚರವಾಗುತ್ತದೆ. ಈ ಪ್ರತಿಯಲ್ಲಿ "ತನತ್ತು ಬಿಲ್ಲಾನದನೇಕೆ ಕೀಸುವಂ" ಎಂಬ ಭಾಗ ಮಾತ್ರ ಉಂಟು; ಪದ್ಯದ ಮಿಕ್ಕ ಮೂರು ಪಾದಗಳು ಇಲ್ಲಿ ಉದ್ಧೃತವಾಗಿಲ್ಲವೆಂಬುದು ಗಮನಾರ್ಹವಾದ ಅಂಶ. ಶಬ್ದಮಣಿದರ್ಪಣದ ಬೇರೆ ಬೇರೆ ಮಾತೃಕೆಗಳಲ್ಲಿ ಹುಡುಕಿದರೆ ಇನ್ನೂ ಪಾಠಾಂತರಗಳು ದೊರೆಯಬಹುದು!

[9] "ಕೀಸು – ಕೃಶೀಕರಣೇ" (ಶಬ್ದಮಣಿದರ್ಪಣ: ಧಾತುಪಾಠ). "ಕೀಸುಳಿ" ಎಂಬ ಉಪಕರಣದ ಹೆಸರನ್ನೂ ಇಲ್ಲಿ ನೆನಪಿಗೆ ತಂದುಕೊಳ್ಳಬಹುದು.

ಅವಕಾಶ ಕಡಮೆ. ಹೆಚ್ಚು ಪ್ರಾಮಾಣಿಕವಾದ ಮಾತೃಕೆಯ ಅಥವಾ ಮಾತೃಕೆಗಳ ಗುಂಪಿನ ಪಾಠವನ್ನು ಸ್ವೀಕರಿಸೋಣ ಎನ್ನುವ ಹಾಗೂ ಇಲ್ಲ. ಶಬ್ದಮಣಿದರ್ಪಣವೇ ಮೊದಲಾದ ಈಚಿನ ಕೃತಿಗಳನ್ನು ಬಿಟ್ಟರೂ ಕಾವ್ಯಾವಲೋಕನ ಭಾಷಾಭೂಷಣಗಳ ಕೈಬರೆಹದ ಮಾತೃಕೆಗಳಿಗೇ ಏಕಕಂಠತೆಯಿಲ್ಲ.[10] ಅಲ್ಲದೆ, ಕಾಲದ ದೃಷ್ಟಿಯಿಂದ ಇನಕ್ಕೂ ಮೂಲಪದ್ಯಕ್ಕೂ ಅನೇಕ ಶತಮಾನಗಳ ಅಂತರವುಂಟು. ಆದಕಾರಣ, ಅರ್ಥ ಸಾಮಂಜಸ್ಯವನ್ನೇ ಮುಖ್ಯಾಧಾರವಾಗಿಟ್ಟುಕೊಂಡು ಮೂಲಪಾಠವನ್ನು ನಿರ್ಣಯಿಸ ಬೇಕಾಗಿದೆ.

ಈ ಪಾಠಾಂತರಗಳಲ್ಲಿ, "ಎತ್ತು," "ಎಂತೆ" ಎಂಬುವನ್ನು ವಾಕ್ಯದಲ್ಲಿ ಅನ್ವಯ ಮಾಡುವುದೇ ಶಕ್ಯವಿಲ್ಲ; ಇವು ಪ್ರಮಾದಜನ್ಯಗಳೇ ಸರಿ. ಆಗಲೇ ವಿವರಿಸಿರುವಂತೆ ಪದ್ಯದ ಆಶಯವನ್ನು ನೆನಪುಮಾಡಿಕೊಂಡಲ್ಲಿ, "ಎಂತು," "ಏಕೆ" ಎಂಬ ಪ್ರಶ್ನಾರ್ಥ ಗಳಿಗೂ ಇಲ್ಲಿ ಸ್ಥಾನವಿಲ್ಲ. ಇನ್ನುಳಿದವು "ಅಂತು," "ಅಂತೆ," "ಎತ್ತೆ," "ಒತ್ತಿ" ಎಂಬ ಪ್ರತಿಸ್ಪರ್ಧಿಗಳು. "ಅನಿತನಿತ್ತಂ ವನದೊಳ್ ವನೇಚರಂ . . ." ಎಂದು ಆಗಲೇ ಪರಿಮಾಣವಾಚಕವು ಬಂದಿರುವಾಗ ಅಂತು (ಅಥವಾ ಅಂತೆ) ಎಂಬ ರೀತಿವಾಚಿಯಾದ ಪದವು ಕೇವಲ ಪಾದಪೂರಕವಾಗಿ ನಿಲ್ಲುತ್ತದೆ. ಮೂಲ ಪದವೇನೆಂಬುದು ಸರಿಯಾಗಿ ಗೊತ್ತಾಗದೆ, ನಿರರ್ಥಕವಾದರೂ ಚಿಂತೆಯಿಲ್ಲ, ಅಪಾರ್ಥಕವಾಗದಿದ್ದರೆ ಸಾಕೆಂದು ಈ ಪದಗಳಿಗೆ ಹಲವು ಮಾತೃಕೆಗಳಲ್ಲಿ ಎಡೆ ದೊರೆತಂತೆ ತೋರುತ್ತದೆ. "ಎತ್ತೆ" ಎಂಬುದ ಕ್ಕೇನೋ ಸಂಭಾವ್ಯತೆಯಿಲ್ಲದಿಲ್ಲ. ಅದನ್ನು ಅಂಗೀಕರಿಸಿದರೆ, ವನೇಚರನು ಎಷ್ಟು ದುರ್ಬಲನಾದನೆಂದರೆ, ತನ್ನ ಬಿಲ್ಲನ್ನು ಬಾಗಿಸುವುದಿರಲಿ, ಅದನ್ನು ಎತ್ತುವ ಸಲುವಾಗಿ ಕೂಡ ಕೆತ್ತಬೇಕಾಯಿತು ಎಂಬ ಅರ್ಥ ಹೊರಡುತ್ತದೆ. ಆದರ ಹಿಂದೆಯೇ, ಬಿಲ್ಲನ್ನು ಎತ್ತುವುದಕ್ಕೇ ಆಗದವನಿಗೆ ಅದನ್ನು ಕೆತ್ತಲು ಹೇಗೆ ಸಾಧ್ಯವಾಯಿತು ಎಂಬ ಪ್ರಶ್ನೆಯೂ ಹುಟ್ಟುತ್ತದೆ. ಇದಕ್ಕೆ ಹೇಗೋ ಸಮಾಧಾನ ಹೇಳಬಹುದು. ಇನ್ನೂ ಪ್ರಬಲವಾದ ಆಕ್ಷೇಪಣೆಯೇನೆಂದರೆ, ಪದ್ಯದಲ್ಲಿ ಸೂಚ್ಯವಾಗಿರಬೇಕಾದ ಅಂಶವು ಇಲ್ಲಿ ವಾಚ್ಯವೇ ಆಗಿಬಿಟ್ಟು ಕವಿಗೆ ಇಲ್ಲಿ ಪರಮೋದ್ದೇಶವಾಗಿರುವ ಚಮತ್ಕಾರ ಕೆಲಮಟ್ಟಿಗಾದರೂ ಕಡಿಮೆ ಯಾಗುತ್ತದೆ. ಇದನ್ನೆಲ್ಲ ಪರಿಭಾವಿಸಿದರೆ, "ಒತ್ತಿ" ಎಂಬ ಪದವೇ ಇಲ್ಲಿಗೆ ಸಮುಚಿತ ವೆಂದು ಮನವರಿಕೆಯಾಗದಿರದು. " . . . ಅಷ್ಟಷ್ಟೂ ತನ್ನ ಆ ಬಿಲ್ಲನ್ನು (ಬಿಲ್ಲಾನ್ ಅದನ್) ಬೇಡನು [ಇನ್ನೂ ಇನ್ನೂ ತೆಳುವಾಗುವಂತೆ] ಒತ್ತಿ ಹೆರೆಯುವನು" – ಇಲ್ಲಿ "ಒತ್ತಿ" ಎಂಬುದಕ್ಕೆ ಪದಪ್ರಯೋಜನ ಯಥೇಚ್ಛವಾಗಿ ಉಂಟಲ್ಲವೆ? ಕವಿಯ ಆಶಯ ಇಲ್ಲಿ ವ್ಯಂಗ್ಯವಾಗಿಯೇ ಉಳಿಯುವುದರಿಂದ ಪದ್ಯದ ಸೊಗಸು ಎಳ್ಳಷ್ಟೂ ಕುಗ್ಗುವುದಿಲ್ಲ.

ಅಂತೂ ಈ ವಿಚಾರದ ಫಲಿತಾಂಶವಾಗಿ ನಮ್ಮ ಪದ್ಯದ ಮೂಲಪಾಠವನ್ನು ಹೀಗೆ ನಿರ್ದೇಶಿಸಬಹುದು:

---

[10] ಇನ್ನೊಂದು ವಿಷಯ. ನಾವು ಈ ಲೇಖನಕ್ಕಾಗಿ ಉಪಯೋಗಿಸಿಕೊಂಡಿರುವ ಹಲವು ಅಚ್ಚಿನ ಪುಸ್ತಕಗಳಲ್ಲಿ ಸಂಪಾದಕರು ಪಾಠಾಂತರಗಳನ್ನು ನಿರ್ದೇಶಿಸಿಲ್ಲ; ಹಾಗೆ ನಿರ್ದೇಶಿಸಿರುವವರಲ್ಲಿ ಕೂಡ ಒಬ್ಬಿಬ್ಬರನ್ನು ಬಿಟ್ಟರೆ, ಉಳಿದವರು ಯಾವ ಮಾತೃಕೆಯ ಪಾಠ ಯಾವುದು ಎಂಬುದನ್ನು ಸ್ಫುಟಪಡಿಸಿಲ್ಲ. ಆದಕಾರಣ, ಈ ಚರ್ಚೆಗೆ ಆಧಾರವಾಗಿರುವ ಮೂಲಮಾತೃಕೆಗಳು ಇಂಥಿಂಥವು: ಇವುಗಳಲ್ಲಿ ದೊರೆಯುವ ಪಾಠಗಳು ಇಂಥಿಂಥವು ಎಂಬುದನ್ನು ನಿಷ್ಕರ್ಷೆಯಾಗಿ ಹೇಳಲು ಸಾಧ್ಯವಿಲ್ಲವಾಗಿದೆ.

ಎನಿತ್ತೆನಿತ್ತಂಬುಜಪತ್ರನೇತ್ರೆಯಾ
ಘನಸ್ತನಂಗಳ್ ಬಳೆಗುಂ ಕಿರಾತೆಯಾ।
ಅನಿತ್ತನಿತ್ತಂ ವನದೊಳ್ ವನೇಚರಂ
ತನತ್ತು ಬಿಲ್ಲಾನದನೊತ್ತಿ ಕೀಸುಗುಂ॥

(ಭಾಷಾ 2) ರಲ್ಲಿ ೬೮ನೆಯ ಸೂತ್ರದ ಕೆಳಗೆ ಉದಾಹರಿಸಿರುವ ಪಾಠವೇ ಇದು.

ಇದು ಯಾರ ಪದ್ಯ? ಯಾವ ಕಾವ್ಯದ್ದು? – ಕಾವ್ಯಾವಲೋಕನದಲ್ಲಿ ಇದಕ್ಕೆ ಉತ್ತರ ಸಿಕ್ಕುವುದಿಲ್ಲ. ಅಲ್ಲಿ ಉದಾಹರಿಸಿರುವ ಪದ್ಯಗಳಿಗೆ ಆಕರವನ್ನು ಹೇಳುವುದು ನಾಗವರ್ಮನ ಪದ್ಧತಿಯಲ್ಲ. ಭಾಷಾಭೂಷಣದಲ್ಲಿಯೂ ಇದೇ ಅವನ ಸಾಮಾನ್ಯ ಪದ್ಧತಿ; ಅಲ್ಲವೆ ಅದರಲ್ಲಿ ಪದ್ಯಗಳನ್ನು ಅವನು ಉದಾಹರಿಸಿರುವುದೇ ಬಲುಕಡಮೆ. ಆದರೆ, ವಾಚಕರ ಸುದೈವದಿಂದ, ಭಾಷಾಭೂಷಣದ ೬೮ನೆಯ ಸೂತ್ರದ ಕೆಳಗೆ, "ದ್ವಿತೀಯಾಂತಸ್ಯ ಪದಸ್ಯ ಸ್ವರೇ ಪರೇ ವಾ ದೀರ್ಘೋ ಭವತಿ" ಎಂಬ ವೃತ್ತಿವಾಕ್ಯವಾದ ಬಳಿಕ ಈ ಮಾತುಗಳು ಬಂದಿವೆ:

"ಹರಿಪಾಲಪ್ರಯೋಗಃ – ಕಲ್ಲಾನೇಱಿದಂ, ಕಲ್ಲನೇಱಿದಂ; ಭಿಲ್ಲಾನೇಱಿಸಿದಂ, ಬಿಲ್ಲನೇಱಿಸಿದಂ. ತಥಾ ಗುಣವರ್ಮಕವಿಪ್ರಯೋಗಃ –

ಎನಿತ್ತೆನಿತ್ತಂಬುಜ . . . "

ಇದರಿಂದ ಈ ಪದ್ಯ ಮೊದಲನೆಯ[11] ಗುಣವರ್ಮನದೆಂದು ಸ್ಪಷ್ಟವಾಗುತ್ತದೆ.[12] "ಒಂದು ಪ್ರತಿಯಲ್ಲಿ ಹರಿಪಾಲಪ್ರಯೋಗಃ – ಎಂಬುದೂ, ತಥಾ ಗುಣವರ್ಮಕವಿ ಪ್ರಯೋಗಃ – ಎಂಬುದೂ ಅದರ ಕೆಳಗೆ ಕೊಟ್ಟಿರುವ ಉದಾಹರಣ ಪದ್ಯವೂ ಇಲ್ಲ" ಎಂದು ಗ್ರಂಥ ಸಂಪಾದಕರಾದ ರಾ. ನರಸಿಂಹಾಚಾರ್ಯರು ಅಡಿಟಿಪ್ಪಣಿಯಲ್ಲಿ ಹೇಳಿದ್ದಾರೆ. ಎಂದರೆ ಈ ಪರಿಷ್ಕರಣಕ್ಕಾಗಿ ಅವರು ಉಪಯೋಗಿಸಿದ ಮೂರು ಮಾತೃಕೆಗಳಲ್ಲಿ ಒಂದರ ಬೆಂಬಲ ಈ ಪದ್ಯವು ಗುಣವರ್ಮಕೃತವೆಂಬ ಹೇಳಿಕೆಗೆ ಇಲ್ಲವೆಂದಾಯಿತು. ಆದರೆ, ಇದೇ ಸೂತ್ರದ ಮೇಲಿನ ಕನ್ನಡ ಟೀಕೆಯಲ್ಲಿ "ಇದರ್ಕೆ ಗುಣವರ್ಮನ ಪ್ರಯೋಗಂ – (ವೃ. ನೋ.)"[13] ಎಂಬ ಭಾಗವಿರುವುದರಿಂದ, ಈ ಗ್ರಂಥದ ಪ್ರಾಚೀನ ಟೀಕಾಕಾರನು ಉಪಯೋಗಿಸಿದ

---

[11] ನಮ್ಮ ಗುಣವರ್ಮನು ಕ್ರಿ.ಶ. ಸು. ೯೦೦ರಲ್ಲಿದ್ದ ಮೊದಲನೆಯ ಗುಣವರ್ಮನೆಂಬುದನ್ನು ರಾ. ನರಸಿಂಹಾಚಾರ್ಯರು ಕವಿಚರಿತೆಯಲ್ಲಿ (I, ಪು. ೨೪–೨೬) ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ; ಆ ವಿಚಾರಕ್ಕೆ ಮತ್ತೆ ಕೈಹಾಕುವುದು ಅನಾವಶ್ಯಕ.

[12] ರೈಸರು ಭಾಷಾಭೂಷಣದ ತಮ್ಮ ಪರಿಷ್ಕರಣಕ್ಕಾಗಿ ಉಪಯೋಗಿಸಿಕೊಂಡು A ಎಂದು ಸಂಕೇತಿಸಿರುವ ಮಾತೃಕೆಯಲ್ಲಿ "ತಥಾ ಗುಣವರ್ಮ್ಮಕವೇರ್ಭುವನೈಕವೀರಸ್ಯ ಪ್ರಯೋಗಃ" ಎಂದು ಇದ್ದಂತೆ ಗೊತ್ತಾಗುತ್ತದೆ. (ಪು. ೨೬ ಮತ್ತು ಪರಿಶಿಷ್ಟ ೧ ನೋಡಿ); ಇದನ್ನೇ ಅವರು ಮೂಲಪಾಠವಾಗಿ ಅಂಗೀಕರಿಸಿದ್ದಾರೆ. ಆದರೆ ರಾ. ನರಸಿಂಹಾಚಾರ್ಯರ ಪರಿಷ್ಕರಣದಲ್ಲಿ "ಭುವನೈಕವೀರಸ್ಯ" ಎಂಬುದು ಪಾಠಾಂತರಗಳಲ್ಲಿ ಕೂಡ ಬಂದಿಲ್ಲ. "ನಾಗವರ್ಮನು ಹೇಳುವುದನ್ನು ನೋಡಿದರೆ ಇವನಿಗೆ ಭುವನೈಕವೀರ ಎಂಬ ಬಿರುದೂ ಇದ್ದಂತೆ ತಿಳಿಯುತ್ತದೆ" ಎಂದು ಕವಿಚರಿತೆಯಲ್ಲಿ ಗುಣವರ್ಮನ ಪ್ರಸ್ತಾವದಲ್ಲಿ (I, ಪು. ೨೪) ಅವರೇ ಹೇಳಿ, ಇಲ್ಲೇಕೆ ಬಿಟ್ಟರೋ! ತಮ್ಮ ಪರಿಷ್ಕರಣಕ್ಕಾಗಿ ಅವರು ಉಪಯೋಗಿಸಿಕೊಂಡ ಯಾವ ಮಾತೃಕೆಯಲ್ಲೂ ಈ ಭಾಗವಿರಲಿಲ್ಲವೇನೋ.

[13] ಇಲ್ಲಿ (ವೃ. ನೋ.) ಎಂದರೆ ವೃತ್ತಿಯನ್ನು ನೋಡಿ ಎಂದು ಅರ್ಥ. ಟೀಕಾಕಾರನೂ ಪದ್ಯವನ್ನು ಉದಾಹರಿಸಿದ್ದನೆ, ಇಲ್ಲವೇ ವೃತ್ತಿಯ ಕಡೆಗೆ ಬೆರಳು ತೋರಿಸಿ ಮುಗಿಸಿದ್ದನೆ ಎಂಬುದು ಸ್ಫುಟವಾಗಿ ಗೊತ್ತಾಗುವುದಿಲ್ಲ.

ಮಾತೃಕೆಯಲ್ಲಿ ಕೂಡ ಈ ಪದ್ಯವು ಗುಣವರ್ಮಕೃತವೆಂದೇ ಉಕ್ತವಾಗಿದ್ದಿತೆಂದು ನಂಬಬಹುದು. ಭಾಷಾಭೂಷಣದ ೧೮೧ನೆಯ ಸೂತ್ರದ ಕೆಳಗೆ ಮತ್ತೆ ಇದು ಬಂದಿದೆಯಷ್ಟೆ; ಅಲ್ಲಾಗಲಿ ಕೇಶಿರಾಜ ಭಟ್ಟಾಕಳಂಕರ ಗ್ರಂಥಗಳಲ್ಲಾಗಲಿ ಇದು ಯಾರದು, ಎಲ್ಲಿಯದು ಎಂಬುದನ್ನು ನಿರ್ದೇಶಿಸಿಲ್ಲ. ಕಾವ್ಯಸಾರದಲ್ಲಿ ಮಾತ್ರ ಈ ಪದ್ಯದ ಕೆಳಗೆ "ಹರಿವಂಶಂ" ಎಂದು ಆಕರ ಗ್ರಂಥದ ಹೆಸರು ಕೊಟ್ಟಿದೆ. ಭಾಷಾಭೂಷಣದ ಹೇಳಿಕೆಯನ್ನೂ ಕಾವ್ಯಸಾರದ ಹೇಳಿಕೆಯನ್ನೂ ಜೊತೆಗೂಡಿಸಿ ಇದು ಗುಣವರ್ಮನ ಹರಿವಂಶಕ್ಕೆ ಸೇರಿದ್ದೆಂದು ನಿರ್ಧರಿಸಿಬಿಡಬೇಕೆನ್ನಿಸುವುದು ಸಹಜ. ಆದರೆ ಇಲ್ಲಿ ತೊಡಕಿಲ್ಲದೆ ಇಲ್ಲ.

ಗುಣವರ್ಮನು ಹರಿವಂಶವನ್ನು ರಚಿಸಿದ್ದನೆಂಬುದಕ್ಕೆ ಅಬಾಧಿತವಾದ ಪ್ರಮಾಣವೇನೋ ಉಂಟು. ಶಬ್ದಮಣಿದರ್ಪಣದಲ್ಲಿ "ಎನಿತ್ತೆನಿತ್ತಂಬುಜ . . ." ಎಂಬೀ ಪದ್ಯದ ಕೆಳಗೆಯೇ, "ಪೋಲ್ ಪರಮಾದಲ್ಲಿಯುಂ ದೀರ್ಘಮುಂಟು – ಈಂದ ಪುಲಿಯಾಪೋಲಿರ್ದ ಳೆಂದು ಗುಣವರ್ಮನ ಹರಿವಂಶಪ್ರಯೋಗಂ"[14] ಎಂದು ಸ್ಪಷ್ಟವಾಗಿ ಹೇಳಿದೆ. ಇತ್ತ ಅಭಿನವವಾದಿವಿದ್ಯಾನಂದನು ತನ್ನ ಸಂಕಲನದಲ್ಲಿ ಉದ್ಧರಿಸಿರುವ ಅನೇಕ ಪದ್ಯಗಳಿಗೆ ಆಕರಗಳನ್ನು ಸೂಚಿಸಿದ್ದಾನೆ. ಅವುಗಳಲ್ಲಿ ೩೦ಕ್ಕಿಂತ ಹೆಚ್ಚು ಸಂಖ್ಯೆಯ ಪದ್ಯಗಳು ಇದೇ ಗುಣವರ್ಮನ ಶೂದ್ರಕ ಕಾವ್ಯದಿಂದ ತೆಗೆದವೆಂದು ಅವನು ನಿರ್ದೇಶಿಸುತ್ತಾನೆ. ಆದರೆ ಹರಿವಂಶದ್ದೆಂದು ಅವನು ಉದ್ಧರಿಸಿರುವುದು ಇದೊಂದೇ ಪದ್ಯ. ಶೂದ್ರಕದಿಂದ ಹಲವಾರು ಪದ್ಯಗಳನ್ನು ಆರಿಸಿಕೊಂಡಿರುವ ವಿದ್ಯಾನಂದನಿಗೆ ಹರಿವಂಶ ಕಾವ್ಯದ ಪ್ರತ್ಯಕ್ಷಪರಿಚಯವಿದ್ದ ಪಕ್ಷದಲ್ಲಿ, ಅವನು ಅದರಿಂದ ಒಂದೇ ಪದ್ಯವನ್ನು ಎತ್ತಿಕೊಟ್ಟು ತೃಪ್ತಿಪಡುತ್ತಿದ್ದನೆ? ಹರಿವಂಶವನ್ನು ಅವನು ಕಣ್ಣಾರ ಕಂಡಿರಲಿಲ್ಲವೆಂಬ ಸಂದೇಹವೇನೋ ಪ್ರಬಲವಾಗಿಯೇ ಹುಟ್ಟುತ್ತದೆ. ಹೀಗಿರುವಾಗ, ಶಬ್ದಮಣಿದರ್ಪಣದಲ್ಲಿ ಪ್ರಸಕ್ತ ಪದ್ಯದ ಮುಂದೆ ಅಲ್ಪಾಂತರದಲ್ಲಿಯೇ "ಗುಣವರ್ಮನ ಹರಿವಂಶಪ್ರಯೋಗಂ" ಎಂಬ ಮಾತನ್ನು ಕಂಡು ಅದೇ ಕಾವ್ಯವೇ ಈ ಪದ್ಯಕ್ಕೂ ಆಕರವೆಂದು ಒಂದು ವೇಳೆ ಭ್ರಮೆಯಿಂದೇನಾದರೂ ವಿದ್ಯಾನಂದನು ಭಾವಿಸಿರಬಹುದೆ? ಇಲ್ಲವೇ, ಇದು ಗುಣವರ್ಮನ ಪದ್ಯವೆಂಬ ಭಾಷಾಭೂಷಣದ ಹೇಳಿಕೆಯನ್ನೂ, ತನಗೆ ಪರಿಚಿತವಾಗಿದ್ದ ಶೂದ್ರಕ ಕಾವ್ಯದಲ್ಲಿ ಇದರ ಅಭಾವವನ್ನೂ ಒಟ್ಟಿಗೆ ಗಮನಿಸಿ, ಗುಣವರ್ಮನ ಇನ್ನೊಂದು ಕೃತಿಯಾದ ಹರಿವಂಶದಿಂದ ಇದು ಬಂದಿರಬೇಕೆಂದು ಅವನು ಊಹಿಸಿರಬಹುದೆ? ಎರಡನೆಯ ಪಕ್ಷವೇ ಹೆಚ್ಚು ಸಂಭವ. ಅಂತೂ ಗುಣವರ್ಮನ ಕೃತಿ ಕಾಲಪುರುಷನ ಕೃಪೆಯಿಂದ ನಮಗೆ ದೊರೆತಲ್ಲದೆ ಕೊನೆಮಾತನ್ನು ಹೇಗೆತಾನೆ ಹೇಳಬಹುದು?

— ತೀ. ನಂ. ಶ್ರೀಕಂಠಯ್ಯ

[14] ಇಲ್ಲಿ ಪಾಠಾಂತರಗಳುಂಟು. ಅವನ್ನೆಲ್ಲಾ ಉಲ್ಲೇಖಿಸುವುದು ನಮಗೆ ಅಪ್ರಕೃತ.

## ಅರಿಕೇಸರಿಯೂ ಪಂಪನ ಯುಗವೂ

ಕನ್ನಡ ವಾಙ್ಮಯದಲ್ಲಿ ಆದಿಕವಿಯೆಂದು ಪ್ರಸಿದ್ಧನಾದ ಪಂಪನು ಆದಿಪುರಾಣ, ವಿಕ್ರಮಾರ್ಜುನವಿಜಯ ಅಥವಾ ಸಮಸ್ತ ಭಾರತ ಎಂಬ ಎರಡು ಕೃತಿಗಳನ್ನು ರಚಿಸಿ ಅಜರಾಮರನಾಗಿರುವನು. 'ಆದಿಪುರಾಣದ ಅಂತ್ಯಭಾಗದಲ್ಲಿಯ (ಆಶ್ವಾಸ ೧೬–೭೬/೭೭)—

"ಶಕವರುಷಮೆಂಟು ನೂಱ
ರ್ಕೆ ಕಡೆಯೊಳಱುವತ್ತುಮೂಱು ಸಂದಂದು ಜಗ ।
ತ್ತ್ರಕಟ ಪ್ಲವ ಸಂವತ್ಸರ
ದ ಕಾರ್ತಿಕಂ ಮುಪಮುಸೀಯೆ ನಂದೀಶ್ವರದೊಳ್ ॥

ಸಿತಪಕ್ಷದ ಪಂಚಮಿದಿನ
ಪತಿವಾರಂ ಶುಭದಮೂಲ ನಕ್ಷತ್ರದೊಳ-
ಸ್ಥಿತಮಾಗೆ ನೆಗೞ್ದುದೀ ಮ
ತ್ಕೃತಿ ಜಗದೊಳ್ ಪುದಿದು ಸಾಗರಾಂತಕ್ಷಿತಿಯಂ ॥"

ಎಂಬ ಪದ್ಯಗಳಿಂದ ಆ ಪುರಾಣವನ್ನು ಶಕ ೮೬೩, ಪ್ಲವ ಸಂವತ್ಸರದಲ್ಲಿ (ಕ್ರಿ.ಶ. ೯೪೧) ಬರೆದು ಮುಗಿಸಿದನೆಂದು ಗೊತ್ತಾಗುತ್ತದೆ. 'ದುಂದುಭಿಗಭೀರ ನಿನದಂ ದುಂದುಭಿ ಸಂವತ್ಸರೋದ್ಭವಂ' ಎಂಬ ಪದ್ಯಭಾಗದಿಂದ (ಆಶ್ವಾಸ ೧,೩೩) ಅವನು ದುಂದುಭಿ ಸಂವತ್ಸರದಲ್ಲಿ (ಕ್ರಿ.ಶ. ೯೦೨) ಹುಟ್ಟಿದನೆಂದು ತಿಳಿದು ಬರುತ್ತದೆ. ಅಂತು ೧೦ನೆಯ ಶತಮಾನದ ಪೂರ್ವ ಭಾಗದಲ್ಲಿ ಪಂಪಕವಿಯು ಬಾಳಿ ಬದುಕಿದನೆನ್ನಬಹುದು. ಈ ಕಾಲದ ಶಕ್ತಿ ವಿಶೇಷಗಳನ್ನು ತಿಳಿದುಕೊಳ್ಳಲಿಕ್ಕೆ ಆಗಿನ ರಾಜಕೀಯ ಧಾರ್ಮಿಕ ಮೊದಲಾದ ಪರಿಸ್ಥಿತಿಗಳನ್ನೂ ಪಂಪನ ಜೀವನ ಚರಿತ್ರೆಯನ್ನೂ ವಿಮರ್ಶಿಸುವದು ಅವಶ್ಯವಿದೆ.

ಕರ್ನಾಟಕದ ಇತಿಹಾಸದಲ್ಲಿ ಪಂಪನ ಯುಗವು ಒಳ್ಳೇ ವೈಭವಶಾಲಿಯಾದದ್ದು. ರಾಜಕಾರಣದಲ್ಲಿ ಕರ್ನಾಟಕ ಅರಸರು ಪರರಾಜರನ್ನು ಸೋಲಿಸಿ ತಮ್ಮ ಪ್ರಭುತ್ವವನ್ನು ಉತ್ತರ ದಕ್ಷಿಣ ಪೂರ್ವ ಹಿಂದುಸ್ಥಾನಗಳಲ್ಲಿ ನೆಲೆಗೊಳಿಸಿದ್ದರು. ಧಾರ್ಮಿಕ ಚಲನ ವಲನಗಳು ವೈದಿಕ ಮತ್ತು ಜೈನ ಧರ್ಮಗಳ ಪರಸ್ಪರ ಸಂಮರ್ದವನ್ನೂ ಅದರಲ್ಲಿ ವೈದಿಕ ಧರ್ಮದ ಶ್ರೇಷ್ಠತೆಯನ್ನೂ ಸೂಚಿಸುತ್ತವೆ. ಜನಜೀವನವು ಉದಾತ್ತವೂ ಲಲಿತಕಲೆಗಳಲ್ಲಿ ಅಭಿರುಚಿಯುಳ್ಳದ್ದೂ ಆಗಿತ್ತೆಂದು ಆ ಕಾಲದಲ್ಲಿ ನಿರ್ಮಿತವಾದ ಸಾಹಿತ್ಯಗ್ರಂಥಗಳಿಂದಲೂ ದೇವತಾ ಮೂರ್ತಿ ಮಂದಿರಗಳಿಂದಲೂ ಊಹಿಸಬಹುದಾಗಿದೆ. ಈ ಎಲ್ಲ ಅಂಶಗಳನ್ನು ಪಂಪನ ಸಮ ಸಾಮಯಿಕ ಪ್ರಮಾಣಗಳಿಂದ ಯಥಾವತ್ತಾಗಿ ವಿವರಿಸಿ ಆ ಕಾಲದ ಶಕ್ತಿ ವಿಶೇಷಗಳನ್ನು ಸಂಕ್ಷೇಪವಾಗಿ ತಿಳಿಸುವೆವು.

ಪಂಪನ ಪೋಷಕನು ಚಾಳುಕ್ಯಮನೆತನದ ೨ನೆಯ ಅರಿಕೇಸರಿಯೆಂದು ಅವನ ಗ್ರಂಥಗಳಿಂದ ಗೊತ್ತಾಗುತ್ತದೆ. ಈ ಮನೆತನದ ಮೂರು ಶಾಸನಗಳಲ್ಲಿ ಶಕ ೮೮೮ (ಕ್ರಿ.ಶ. ೯೬೬) ರಲ್ಲಿ ಹೊರಟ ಪರಭಣಿ ತಾಮ್ರಶಾಸನವು ೨ನೆಯ ಅರಿಕೇಸರಿಯ ಮೊಮ್ಮಗನಾದ ೩ನೆಯ ಅರಿಕೇಸರಿಯದು. ಈ ರಾಜನು ಯಶಸ್ತಿಲಕ ಚಂಪುವಿನ ಕರ್ತನಾದ ಸೋಮದೇವಸೂರಿಗೆ ಸಬ್ಬಿದೇಶ ಸಹಸ್ರಾಂತರ್ಗತ ರೇಪಾಕದ್ವಾದಶ

ಗ್ರಾಮಿಯಲ್ಲಿದ್ದ ಕುತ್ತುಂ ವೃತ್ತಿವನಿಕಟುಪುಲು ಗ್ರಾಮವನ್ನು ದಾನಮಾಡಿದನೆಂದು ಹೇಳಿದೆ. ಇದೂ ಇದರ ಸೀಮಾ ಗ್ರಾಮಗಳೂ ಕರೀಂ ನಗರ ಜಿಲ್ಹೆಯಲ್ಲಿವೆ. (ಪ್ರಬುದ್ಧ ಕರ್ನಾಟಕ ೧೫, ೧, ೬೬),[೧] ಇವನ ರಾಜಧಾನಿ ಲೆಂಬುಳವಾಟಕವಾಗಿತ್ತು. ಇವನು ರಾಷ್ಟ್ರಕೂಟ ೩ನೆಯ ಕೃಷ್ಣರಾಜನ ಮಹಾಸಾಮಂತನಾಗಿದ್ದನು. ೨ನೆಯ ಅರಿಕೇಸರಿಯ ವೇಮುಲವಾಡ ಶಾಸನದಲ್ಲಿ ಅದು 'ವೆಂಬುಳವಾಟಕಪತ್ತನ' ಎಂದು ನಿರ್ದೇಶಿಸಲ್ಪಟ್ಟಿದೆ. ಇವನ ಹಿಂದೆ ೪ನೆಯ ತಲೆಯವನಾದ ೧ನೆಯ ಅರಿಕೇಸರಿಯು ಕಲಿಂಗತ್ರಯದಿಂದ ಕೂಡಿದ ವೆಂಗಿ ದೇಶವನ್ನು ಸ್ವಬಾಹು ಬಲದಿಂದ ವಶಪಡಿಸಿಕೊಂಡು ರಾಜ್ಯಭಾರ ಮಾಡುತ್ತಿದ್ದನೆಂದು ವೇಮುಲವಾಡ – ಪರಭಣಿಶಾಸನಗಳಲ್ಲಿ ಬರೆದಿದೆ. ಕೊಲ್ಲಿಪಾರಾ ದಾನ ಪತ್ರವು ೧ನೆಯ ಅರಿಕೇಸರಿಯದು. ಇದರಲ್ಲಿ ರಾಜನು ಶ್ರೀ ಪರ್ವತದ ಉತ್ತರ ಭಾಗದಲ್ಲಿ ಏಲೇಶ್ವರದಲ್ಲಿ ವಾಸವಾಗಿದ್ದ ಮುಗ್ಧ ಶಿವಾಚಾರ್ಯನಿಗೆ ರಾಮುಡು ವಿಷಯದಲ್ಲಿದ್ದ ಊರಿಗೆ ಗ್ರಾಮವನ್ನು ವಿದ್ಯಾದಾನವಾಗಿ ಕೊಟ್ಟನೆಂದು ಬರೆದಿದೆ. 'ವಿಕ್ರಮಾರ್ಜುನವಿಜಯ' ದಲ್ಲಿಯೂ ಉಳಿದ ಎರಡು ಶಾಸನಗಳಲ್ಲಿಯೂ ಅರಿಕೇಸರಿಯ ವಂಶಾವಳಿಯು 'ಸಪಾದ ಲಕ್ಷಪತಿ' ಯಾದ ಯುದ್ಧಮಲ್ಲನಿಂದ ಆರಂಭವಾಗುತ್ತದೆ. ಇಲ್ಲಿ ಮಾತ್ರ ಸತ್ಯಾಶ್ರಯ ರಣವಿಕ್ರಮ, ಪೃಥ್ವೀಪತಿ ಮಹಾರಾಜ, ರಾಜಾದಿತ್ಯ ಪೃಥುವಿಕ್ರಮ, ಯುದ್ಧಮಲ್ಲವಿನಯಾದಿತ್ಯ ಎಂದು ಹಿಂದಿನ ನಾಲ್ಕು ತಲೆಗಳು ಕೊಡಲ್ಪಟ್ಟಿವೆ. ಈ ಯುದ್ಧಮಲ್ಲನು ಬೋದನದಲ್ಲಿ ಗಚ್ಚಿನ ತೈಲವಾಪಿಗಳನ್ನು ಕಟ್ಟಿಸಿ ಅಲ್ಲಿ ತನ್ನ ಮದ್ದಾನೆಗಳನ್ನು ಮೀಯಿಸುತ್ತಿದ್ದನೆಂದು ಎಲ್ಲ ಆಧಾರಗಳಿಂದ ತಿಳಿದುಬರುತ್ತದೆ. ಈ ಸಂಕ್ಷಿಪ್ತ ಭೂ ನಿರ್ದೇಶದಿಂದ ಅರಿಕೇಸರಿಯ ಮನೆತನದ ರಾಜ್ಯವು ಯಾವ ನಿಟ್ಟಿನಲ್ಲಿ ಇತ್ತೆಂಬುದು ಗೊತ್ತಾಗುತ್ತದೆ. ಪರಭಣಿ ಶಾಸನದ ವನಿಕಟುಪುಲು ಗ್ರಾಮದ ಸೀಮಾ ಗ್ರಾಮಗಳೂ ವೆಂಬುಲವಾಟವೂ ನಿಜಾಂ ಹೈದರಾಬಾದ ಪ್ರಾಂತದ ಕರೀಂ ನಗರ ಜಿಲ್ಹೆಯಲ್ಲಿರುತ್ತವೆ. ಬೋಧನವಾಪರೂ ಅದೇ ಪ್ರಾಂತದ ನಜೀಮಾಬಾದ ಜಿಲ್ಹೆಯಲ್ಲಿದೆ. ಶ್ರೀಪರ್ವತದ ಉತ್ತರ ದ್ವಾರದಲ್ಲಿದ್ದ ಏಲೇಶ್ವರವು

---

೧. ಸಬ್ಬಿ ಸಹಸ್ರವು ಶಕ ೯೩೮ (ಕ್ರಿ.ಶ. ೧೦೧೬) ರ ಜಗದೇಕಮಲ್ಲ ೨ನೆಯ ಜಯಸಿಂಹನ ದೌಲಾತಾಬಾದ ತಾಮ್ರಶಾಸನದಲ್ಲಿ (ಹೈದರಾಬಾದ ಆರ್ಕಿಯಾಲಾಜಿಕಲ್ ಸಿರೀಜ, ನಂ. ೨) ನಿರ್ದೇಶಿಸಲ್ಪಟ್ಟ ಸನ್ನಿ (ಸಬ್ಬಿ) ದೇಶವಾಗಿರಬೇಕು. ಅಲ್ಲಿ ದತ್ತವಾದ ಸಕರೇ ಗುಮ್ಮಲು ಎಂಬ ಗ್ರಾಮವು ಸನ್ನಿದೇಶದಲ್ಲಿದ್ದ ಆತ್ಕೂರು ೭೦ರಲ್ಲಿ ಸೇರಿತ್ತು, ('ಸನ್ನಿದೇಶಾಂತಃಪಾತಿ—ಆತ್ಕೂರು–ಸಪ್ತತಿ ಮಧ್ಯೇ') ರಾಯಚೂರಿನಿಂದ ಸುಮಾರು ೨೦ ಮೈಲಿನಲ್ಲಿ ಕೃಷ್ಣಾನದಿಯ ದಂಡೆಯ ಮೇಲಿದ್ದ ಆತ್ಕೂರು ಮೇಲ್ಕಂಡ ಅತ್ಕೂರಾಗಿರಬೇಕು. ಇದು ಸರಿಯಾಗಿದ್ದರೆ ಸಬ್ಬಿದೇಶವು ದಕ್ಷಿಣದಲ್ಲಿ ಕೃಷ್ಣಾನದಿಯವರೆಗೆ (ರಾಯಚೂರ ಹತ್ತರ) ಹಬ್ಬಿತ್ತೆಂದು ತಿಳಿಯಬೇಕಾಗುತ್ತದೆ.

ಪಂಪಕವಿಗೆ ೨ನೆಯ ಅರಿಕೇಸರಿಯು 'ಬಚ್ಚೆಸಾಸಿರ' ದಲ್ಲಿದ್ದ 'ಧರ್ಮಪುರ'ವನ್ನು 'ಸಾರ' ಎಂದು ಹೆಸರಿಟ್ಟು ಶಾಸನದಗ್ರಹಾರವಾಗಿ ಕೊಟ್ಟನೆಂದು ಹೇಳಿದೆ. (ವಿ.ವಿ. ೧೪, ೫೬), ವಿಕ್ರಮಾರ್ಜುನ ವಿಜಯದ ಸಂಪಾದಕರು ಬಚ್ಚೆ ಎಂಬುದಕ್ಕೆ ಜಚ್ಚೆ ಎಂಬ ಪಾಠಾಂತರವನ್ನು ತೋರಿಸಿದ್ದಾರೆ. 'ಬ' ಅಕ್ಷರವನ್ನು 'ಚ' ಯಾಗಿ ತಪ್ಪು ಓದುವದು ಹಳೆಯ ಶಾಸನಗಳಲ್ಲಿ ಸಂಭವವಿದೆ. ಅವೆರಡರ ರೂಪದಲ್ಲಿ ವ್ಯತ್ಯಾಸವು ಸೂಕ್ಷ್ಮಜ್ಞರಿಗಲ್ಲದೆ ಸಾಮಾನ್ಯವಾಗಿ ಗೊತ್ತಾಗುವದಿಲ್ಲ. ಜಚ್ಚೆಯೆಂಬುದನ್ನು ಜಬ್ಬಿ (ಸಬ್ಬಿಯರೂಪ) ಯೆಂದು ತಿಳಿಯಲು ಅವಕಾಶವುಂಟು. ಇದು ಸರಿಯಾಗಿದ್ದರೆ ಧರ್ಮಪುರವು ಸಬ್ಬಿದೇಶದಲ್ಲಿದ್ದಿರಬೇಕು. ಈ ಗ್ರಾಮವು ಧರ್ಮಪೊಳಲ್ (ಡಂಬಳ) ಆಗಲಾರದು. 'ಬೆಳ್ವೊಲನಾಡ ವತ್ಸೆಯನಾಡಧಿಕಾರಿ' ಎಂಬ ಕುಕುನೂರು ಶಾಸನದ ವತ್ಸೆಯ ನಾಡನ್ನು ಬಚ್ಚೆ (ಜಬ್ಬೆ) ನಾಡಿಗೆ ಸಮೀಕರಿಸುವದು (ಪ್ರ. ಕರ್ನಾಟಕ ಸಂ–೧೫–೧–೭೪ ಟಿಪ್ಪಣಿ ೨೦) ಸರಿಯಲ್ಲ. ಬೆಳ್ವಲ ನಾಡ ವತ್ಸೆಯ ನಾಡು ಎಂಬುದರಿಂದ ಎರಡನೆಯದು ಮೊದಲನೆಯದರಲ್ಲಿ ಸೇರಬೇಕಾಗುತ್ತದೆ. ಆದರೆ ಬೆಳ್ವಲ ೩೦೦ರಲ್ಲಿ 'ಬಚ್ಚೆ ೧೦೦೦ ಸೇರಲು ಶಕ್ಯವಿಲ್ಲ. ಈ ಬಚ್ಚೆನಾಡು ಸಬ್ಬಿಯೇ ಆಗಿರಬೇಕೆಂಬುದು ಅರಿಕೇಸರಿ ಪಂಪರ ವಾಸಸ್ಥಾನಗಳ ವಿವರಣೆಯಿಂದ ಹೆಚ್ಚು ಸಮಂಜಸವಾಗುತ್ತದೆ.

ಕ್ರಿ.ಶ. ೩ನೆಯ ಶತಮಾನದ ಪ್ರಾಕೃತ ಲಿಪಿಗಳಲ್ಲಿ 'ಸಿರಿಪವತ' ಎಂದು ಹೆಸರಾದ ನಾಗಾರ್ಜುನ ಕೊಂಡದ ಸಮೀಪದಲ್ಲಿ ನಲ್ಗೊಂಡ ಜಿಲ್ಹೆಯಲ್ಲಿದ್ದ ಏಲೇಶ್ವರವಾಗಿರಬೇಕು. ಅಲ್ಲಿ ಪ್ರಸಿದ್ಧವಾದ ಮುಕ್ಕುಂಟೇಶ್ವರನ ದೇವಾಲಯವಿತ್ತೆಂದೂ ಅದು ಶೈವಾಚಾರ್ಯರ ಬೀಡಾಗಿತ್ತೆಂದೂ ಅಲ್ಲಿಯ ಕುರುಹುಗಳಿಂದ ಊಹಿಸಬಹುದಾಗಿದೆ. (ಮದ್ರಾಸ ಎಪಿಗ್ರಾಫಿ ರಿಪೋರ್ಟ-೧೯೩೭-೩೮ ಪು. ೮೪). ಕೊಲ್ಲಿಪಾರಾ ತಾಮ್ರಶಾಸನದ ಪ್ರತಿ ಗ್ರಹೀತನಾದ ಮುಗ್ಧಶಿವನ ವಾಸಸ್ಥಾನವು ಏಲೇಶ್ವರವೆಂದು ಬರೆದಿರುವದರಿಂದ ಈ ದೇಶ ಭಾಗವು ೧ನೆಯ ಅರಿಕೇಸರಿಯ ರಾಜ್ಯಕ್ಕೆ ಸೇರಿತ್ತೆಂದು ತಿಳಿಯಬಹುದು. ರಾಮಡು ವಿಷಯ[1] ದಲ್ಲಿದ್ದ ಊರಿಗೆ ಗ್ರಾಮವು ಇದೇ ದೇಶದಲ್ಲಿದ್ದಿರಬೇಕು. ಶಕ ೬೧೪ರ ಚಾಳುಕ್ಯ ವಿನಯಾದಿತ್ಯನ ಒಂದು ತಾಮ್ರಶಾಸನದಲ್ಲಿ[2] ರಾಜನು ಕಲಿಂಗೇತಿ (ಕಲಿಂಗಪತಿ) ಯ ವಿಜ್ಞಾಪನೆಯ ಮೇರೆಗೆ 'ಎಂದ ಮದುವುಳ ಗ್ರಾಮಸ್ಯ ಮನ್ನಾರ್ದ್ಧಂ . . . . ಉರುವಿಗೆ ಗ್ರಾಮಸ್ಯ ಮನ್ನಾರ್ಥಂ' ಎಂದು ಉರುವಿಗೆ ಗ್ರಾಮದಲ್ಲಿ ಕೆಲವು ದತ್ತಿಗಳನ್ನು ಬಿಟ್ಟನೆಂದು ಹೇಳಿದೆ. ಕೊಲ್ಲಿಪಾರಾ ದಾನಪತ್ರದಲ್ಲಿ ಕೊಟ್ಟ ವಂಶಾವಳಿಯಿಂದ ಅರಿಕೇಸರಿಯು ಚಾಳುಕ್ಯ ವಿನಯಾದಿತ್ಯನ ಮಗನೆಂದು ತಿಳಿಯುವದರಿಂದ, ಕೆಳಗೆ ಕೊಟ್ಟ ಕಾರಣಗಳಿಂದ ಈ ವಿನಯಾದಿತ್ಯನು ಬಾದಾಮಿಯ ಮನೆತನದ ರಾಜನೇ ಆಗಿರಬೇಕಾದ್ದರಿಂದ, ಊರಿಗೆ, ಉರುವಿಗೆಗಳೆರಡೂ ಒಂದೇ ಗ್ರಾಮವಾಗಿರಬೇಕೆಂದೂ ಚಾಳುಕ್ಯ ರಾಜ್ಯವು ಕಳಿಂಗ ದೇಶದವರೆಗೆ ಹಬ್ಬಿರಬೇಕೆಂದೂ ಊಹಿಸಬಹುದಾಗಿದೆ. ಅಂತು ಅರಿಕೇಸರಿಯ ಮನೆತನದ ರಾಜ್ಯವು ನಜೀಮಾಬಾದ, ಕರೀಮ್ ನಗರ, ನಲ್ಗೊಂಡ, ರಾಯಚೂರು ಜಿಲ್ಹೆಗಳನ್ನೊಳ ಗೊಂಡಿರಬೇಕೆಂದು ಸ್ಪಷ್ಟವಾಗುತ್ತದೆ. ಇದರ ಪಶ್ಚಿಮಕ್ಕೆ ಸು. ಕ್ರಿ.ಶ. ೭೫೨ರ ಅವಧಿಯಲ್ಲಿ ರಾಷ್ಟ್ರಕೂಟ ದಂತಿದುರ್ಗನು ಔರಂಗಾಬಾದ, ನಾಸಿಕ, ಖಾನದೇಶ ಜಿಲ್ಹೆಗಳಲ್ಲಿ ಆಳುತ್ತಿದ್ದ ನೆಂದು ಅವನ ಶಕ ೬೭೩ರ ಏಲಾಪುರ ತಾಮ್ರಶಾಸನ[3]ದಿಂದ ತಿಳಿಯಬಹುದು. ಪೂರ್ವಕ್ಕೆ ಪೂರ್ವ ಚಾಳುಕ್ಯರೂ ಪೂರ್ವಗಂಗರೂ ನೆಲ್ಲೂರು, ಗುಂಟೂರು, ಕೃಷ್ಣಾ, ಗೋದಾವರೀ, ವಿಶಾಖಪಟ್ಟಣ ಜಿಲ್ಹೆಗಳಿಗೆ ಅಧಿಪತಿಗಳಾಗಿದ್ದರು. ಉತ್ತರದಲ್ಲಿ ಕಾನ್ಯಕುಬ್ಜದ ಗೂರ್ಜರರು ಪ್ರಬಲ ರಾಜರಾಗಿದ್ದರು. ದಕ್ಷಿಣದಲ್ಲಿ ಕಡಪಾ, ಕರ್ನೂಲ ಜಿಲ್ಹೆಗಳ ನಿಟ್ಟಿನಲ್ಲಿ ರೇನಾಣ್ಡು ಚೋಳರು ಮಧ್ಯವರ್ತಿಗಳಾಗಿ (Buffer state) ಆಳುತ್ತಿದ್ದರು. ಅವರ ಕೆಳಭಾಗದಲ್ಲಿ ಚಾಳುಕ್ಯರ 'ಪ್ರಕೃತ್ಯಮಿತ್ರ' ರಾದ ಪಲ್ಲವರಿದ್ದರು. ಹೀಗೆ ರಾಷ್ಟ್ರಕೂಟ, ಗೂರ್ಜರ, ಪೂರ್ವ ಚಾಳುಕ್ಯ, ಪೂರ್ವ ಗಂಗ ಮತ್ತು ಪಲ್ಲವ ಇವರ ಮಧ್ಯದಲ್ಲಿ ಬಾದಾಮಿಯ ಚಾಲುಕ್ಯ ಮನೆತನದ ಶಾಖೆಯೊಂದು ನೆಲಸಿತ್ತು. ಅದೇ ಅರಿಕೇಸರಿಯ ಮನೆತನವು. ಇದು ೨ನೆಯ ಪುಲಕೇಶಿಯ ದಿಗ್ವಿಜಯಾನಂತರ ಅಸ್ತಿತ್ವದಲ್ಲಿ ಬಂದಿರಬೇಕು. ಪುಲಿಕೇಶಿಯು ಪಶ್ಚಿಮ ದಿಂದ ಪೂರ್ವ ಕರಾವಳಿವರೆಗಿದ್ದ ದೇಶವನ್ನೆಲ್ಲ ಈ ದಿಗ್ವಿಜಯದಲ್ಲಿ (ಕ್ರಿ.ಶ. ೬೨೦-೩೧) ಸ್ವಾಧೀನ ಪಡಿಸಿಕೊಂಡಂತೆ ತೋರುತ್ತದೆ. ನೆಲ್ಲೂರು ಜಿಲ್ಹೆಯ ದರ್ಶಿಯಲ್ಲಿಯ ೧ನೆಯ ವಿಕ್ರಮಾದಿತ್ಯನ ಶಾಸನವೊಂದು ಪೂರ್ವದತ್ತವಾದ ಅಗ್ರಹಾರವನ್ನು ರಾಜನು ಪುನರುದ್ಧಾರ

---

೧. ಗಂಗ ೨ನೆಯ ರಾಜಮಲ್ಲನ ಕೆರೆಗೋಡು ರಂಗಾಪುರಂ ತಾಮ್ರಶಾಸನದಲ್ಲಿ ಎಜೆಗಂಗ-ವಲ್ಲಭ ಸೈನ್ಯಗಳ ಹೋರಾಟವು ರಾಜಾ ಜಾಮುಡುವಿನಲ್ಲಾಯಿತೆಂದು ಹೇಳಿದೆ.

೨. ಪ್ರೊ. ಕುಂದಣಗಾರರು ಇದನ್ನು ನನ್ನ ಕಡೆಗೆ ಓದಲಿಕ್ಕೆ ಕಳಿಸಿದ್ದರು. ಇದನ್ನು ಕೊಲ್ಲಾಪುರ ಶಾಸನವೆಂದು ಮುಂದೆ ಕರೆದಿದೆ.

೩. ಎಪಿ, ಇಂಡಿಕಾ, ಸಂಪುಟ ೨೫. ಪುಟ ೨೯.

ಮಾಡಿದಂತೆ ಹೇಳುತ್ತದೆ.೧ ಅವನ ತಲಮಂಚಿ ತಾಮ್ರಶಾಸನವೂ ಇದೇ ಭಾಗಕ್ಕೆ ಸಂಬಂಧಿಸಿದ್ದು, ದಿಗ್ವಿಜಯದಲ್ಲಿ ಗೆದ್ದ ದೇಶದ ಪೂರ್ವ ಭಾಗವನ್ನು ಪುಲಿಕೇಶಿಯು ತನ್ನ ತಮ್ಮನಾದ ಕುಬ್ಜವಿಷ್ಣುವರ್ಧನನಿಗೆ ಕೊಟ್ಟು ಪೂರ್ವ ಚಾಳುಕ್ಯ ಮನೆತನವನ್ನು ಸ್ಥಾಪಿಸಿದನು. 'ತ್ರೈರಾಜ್ಯಪಲ್ಲವ' ದಿಂದ ಅಂತರಿತವಾದ 'ಸ್ವಗುರುಶ್ರೀ' ಯನ್ನು ೧ನೆಯ ವಿಕ್ರಮಾದಿತ್ಯನು ಕೈವಶ ಮಾಡಿಕೊಂಡಮೇಲೆ ಚಾಳುಕ್ಯರಾಜ್ಯವು ಪೂರ್ವೋತ್ತರಗಳಲ್ಲಿ ವಿಸ್ತಾರ ಹೊಂದಿರಬೇಕು. ವಿನಯಾದಿತ್ಯನು, ಕೊಲ್ಲಾಪುರ ತಾಮ್ರಶಾಸನದಲ್ಲಿ ಹೇಳಿದಂತೆ ಕಲಿಂಗಪತಿಯ ವಿಜ್ಞಾಪನೆಯ ಮೇರೆಗೆ ದಾನ ಮಾಡಿದ ಉರುವಿಗೆ ಗ್ರಾಮವು ನಿಜಾಂ ಪ್ರಾಂತದ ಭಾಗದಲ್ಲಿ ಇದ್ದಿರಬೇಕೆಂದು ಊಹಿಸಲಾಗಿದೆ. ಇವನ ಆಧಿಪತ್ಯಕ್ಕೆ ತನ್ನ ಮೂಲರಾಜ್ಯ ಮತ್ತು ಪೂರ್ವ ಚಾಳುಕ್ಯರ ರಾಜ್ಯ ಇವುಗಳ ಮಧ್ಯಪ್ರದೇಶವೂ, ಸೇರಿರ ಬೇಕೆಂದು ತಿಳಿಯಬಹುದು. ಈ ಮಧ್ಯ ಪ್ರದೇಶವು ೧ನೆಯ ಅರಿಕೇಸರಿಯ ಮನೆತನದಲ್ಲಿ ಉಳಿಯಿತು. ಮೂಲರಾಜ್ಯಕ್ಕೆ ಹಿರಿಯ ಮಗನಾದ ವಿಜಯಾದಿತ್ಯನು ರಾಜನಾದನು. ಇದರಿಂದ ೧ನೆಯ ಅರಿಕೇಸರಿಯು ವಿನಯಾದಿತ್ಯನ ಚಿಕ್ಕಮಗನಾಗಿರಬೇಕೆಂದು ತಿಳಿಯ ಬಹುದು.

೧ನೆಯ ಅರಿಕೇಸರಿಯ ತಂದೆಯೂ ಮೂಲಪುರುಷನೂ ಆದ ವಿನಯಾದಿತ್ಯ ಯುದ್ಧಮಲ್ಲನು ೧ನೆಯ ವಿಕ್ರಮಾದಿತ್ಯನ ಮಗ ವಿನಯಾದಿತ್ಯನಾಗಿರಬೇಕೆಂದು ಕೆಳಗಿನ ಪ್ರಮಾಣಗಳಿಂದ ತಿಳಿಯಬಹುದು.

(೧) ವಿಕ್ರಮಾದಿತ್ಯನ ಮಗ ವಿನಯಾದಿತ್ಯನಿಗೂ ಈ ವಿನಯಾದಿತ್ಯನಿಗೂ 'ಯುದ್ಧಮಲ್ಲ' ಎಂಬ ಬಿರುದು ಇತ್ತು. (ಕೌಠೇಂ, ಮಿರಜಿ, ವೇಮುಲವಾಡ, ಪರಭಣಿ ಶಾಸನಗಳು.)

(೨) ಅರಿಕೇಸರಿಯ ತಂದೆಯಾದ ವಿನಯಾದಿತ್ಯನಿಗೆ ಶ್ರೀರಾಮ, ನೃಪಾಂಕುಶ ಮತ್ತು ರಾಜಾಶ್ರಯ ಎಂಬ ಬಿರುದುಗಳು ಇದ್ದವು (ಕೊಲ್ಲಿಪಾರಾ ದಾನ ಪತ್ರ). ೧ನೆಯ ವಿಕ್ರಮಾದಿತ್ಯನ ಮಗ ವಿನಯಾದಿತ್ಯನಿಗೂ 'ಶ್ರೀರಾಮತ್ವಾದ್ವಾಸುದೇವ ಇವ ನೃಪಾಂಕುಶ ತ್ವಾತ್ಪರಶುರಾಮ ಇವ ರಾಜಾಶ್ರಯತ್ವಾದ್ಭರತ ಇವ' ಎಂದು ಅವೇ ಬಿರುದುಗಳು ಕೊಡಲ್ಪಟ್ಟಿವೆ (ಜೆಜೂರಿ, ದಯ್ಯಮದಿನ್ನೆ ಶಾಸನಗಳು).

(೩) ಕೊಲ್ಲಿಪಾರಾ ಶಾಸನದಲ್ಲಿ ವಿನಯಾದಿತ್ಯನು 'ತುರುಷ್ಕಯವನ ಬರ್ಬರ ಕಾಶ್ಮೀರ ಕಾಂಭೋಜ ಮಗಧ ಮಾಳವ ಗಂಗ ಪಲ್ಲವ ಪಾಂಡ್ಯ ಪ್ರಭೃತಿ ನರಪತಿ ಸಸಂಭ್ರಮ ಸಮರ್ಚಿತ ಪಾದಪೀಠಃ' ಎಂದೂ ವೇಮುಲವಾಡ ಶಾಸನದಲ್ಲಿ 'ಸಮಸ್ತ ರಾಜೇಂದ್ರಕಿರೀಟಕೋಟಿಮಾಣಿಕ್ಯರಶ್ಮಿಪ್ರಕರಾರ್ಚ್ಚಿತಾಂಘ್ರಿಃ' ಎಂದೂ ವರ್ಣಿಸಲ್ಪಟ್ಟಿರು ವನು. ಜೆಜೂರಿ ಶಾಸನದ ವಿನಯಾದಿತ್ಯನಾದರೂ 'ಪಲ್ಲವ ಕಳಭ್ರ ಕೇರಳ ಹೈಹಯ ವಿಳ ಮಾಳವ ಚೋಳ ಪಾಂಡ್ಯಾದ್ಯಾಃ। ಯೇನಾಳುವ ಗಂಗಾದ್ಯೈರ್ಮ್ಮೌಲೈಸ್ಸಮ ಭೃತ್ಯತಾಂ ನೀತಾಃ' ॥ ಎಂದು ಹೊಗಳಲ್ಪಟ್ಟಿರುವನು.

(೪) 'ಭಗವನ್ನಾರಾಯಣವರವರಾಹ ಲಾಂಛನವಶೀಕೃತಾಶೇಷವಿಶ್ವಂಭರಾಚಕ್ರಃ' ಎಂದೂ 'ಸಕಲ ವಸುಮತೀವಲ್ಲಭ'ನೆಂದೂ ಕೊಲ್ಲಿಪಾರಾ ಶಾಸನದ ವಿನಯಾದಿತ್ಯ

---

೧. ಮದ್ರಾಸ ಎಪಿ. ರಿಪೋರ್ಟ ೧೯೩೩–೩೪. ಪು ೨೯.

ನಿಗೆ ಸಾರ್ವಭೌಮ ಪದ ಸೂಚಕ ವಿಶೇಷಣಗಳು ಕೊಡಲ್ಪಟ್ಟಿವೆ. ಮೂಲ ಮನೆತನದ, ವಿನಯಾದಿತ್ಯನೂ ಶಾಸನಗಳಲ್ಲಿ ಇದೇ ರೀತಿ ವರ್ಣಿಸಲ್ಪಟ್ಟಿದ್ದಾನೆ.

ಈ ವರ್ಣನೆಗಳು ಮಾಂಡಲಿಕ ರಾಜನಿಗೆ ಸರ್ವಥಾ ಹೊಂದುವದಿಲ್ಲ. ಆದ್ದರಿಂದ ಕೊಲ್ಲಿಪಾರಾ - ಜೆಜೂರಿ ಶಾಸನಗಳ ವಿನಯಾದಿತ್ಯನು ಒಬ್ಬನೇ ಆಗಿರಬೇಕೆಂದು ಸ್ಪಷ್ಟ ವಾಗುತ್ತದೆ. ಇವನ ಮಗನೇ ೧ನೆಯ ಅರಿಕೇಸರಿಯು. ಅವನಿಂದ ಮುಂದೆ ನಾಲ್ಕನೆಯ ತಲೆಯವನಾದ ೨ನೆಯ ಅರಿಕೇಸರಿಯು ಪಂಪಕವಿಯ ಪೋಷಕನು. ಅಂತು ಈ ಮನೆ ತನವು ಬಾದಾಮಿ ಚಾಲುಕ್ಯ ಮನೆತನದ ಸಾಕ್ಷಾತ್ ಶಾಖೆಯೆಂದು ನಿರ್ಧಾರವಾಗುತ್ತದೆ.

ಈ ವಿನಯಾದಿತ್ಯ ಯುದ್ಧಮಲ್ಲನು ೨ನೆಯ ಪುಲಕೇಶಿಯ ತಮ್ಮನಾದ ಲಾಟದ ಧಾರಾಶ್ರಯ ಜಯಸಿಂಹವರ್ಮನ ಮಗನಾಗಿರಬೇಕೆಂಬ ಊಹೆಯು ಸರಿಯಾಗಲಾರದು. ಇವನು ರಾಷ್ಟ್ರಕೂಟರ ಉಪಟಳವನ್ನು ತಾಳಲಾರದೆ ದೇಶ ಬಿಟ್ಟು ಬಂದು 'ಬೋಧನದಲ್ಲಿ ರಾಜ್ಯಸ್ಥಾಪನೆ ಮಾಡಿದನೆಂಬ ಯುಕ್ತಿಯು ಹೇಳಲ್ಪಟ್ಟಿದೆ. ('ನಾಡೋಜಪಂಪ' ನೋಡಿರಿ). ಈ ಯುದ್ಧಮಲ್ಲನ ತರುವಾಯ ಅವನ ತಮ್ಮನಾದ ಅವನಿಜನಾಶ್ರಯ ಪುಲಿಕೇಶಿ ರಾಜನು ಕ್ರಿ. ಶ. ೭೩೯ ರಲ್ಲಿ ಅಲ್ಲಿಯೇ ಆಳುತ್ತಿದ್ದನೆಂದು ನವಸಾರಿ ತಾಮ್ರ ಶಾಸನದಲ್ಲಿ ಹೇಳಿರುವದ ರಿಂದ ಯುದ್ಧಮಲ್ಲನು ಲಾಟವನ್ನು ಬಿಟ್ಟು ಬಂದು ರಾಜ್ಯಸ್ಥಾಪನೆಯನ್ನು ಮಾಡಿದನೆಂದು ತಿಳಿಯಲಿಕ್ಕೆ ಪ್ರಮಾಣಗಳಿಲ್ಲ. ಮತ್ತು ೮ನೆಯ ಶ.ದ ಆದಿಯಲ್ಲಿ ಬೋದನದಲ್ಲಿ ಬಂದು ನೆಲಸಲಿಕ್ಕೆ ಅವಕಾಶವಾದರೂ ಹೇಗೆ ಸಿಕ್ಕಿತೆಂದು ಹೇಳಲು ಬರುವಂತಿಲ್ಲ.

ಮೇಲೆ ಹೇಳಿದಂತೆ ಅರಿಕೇಸರಿಯಿಂದ ಈ ವಂಶವು ನಿಜಾಂ ಪ್ರಾಂತದ ಪೂರ್ವ ಭಾಗದಲ್ಲಿ[1] ಅಭಿವೃದ್ಧಿ ಹೊಂದಿತು. ನಾಲ್ಕೂ ಕಡೆಗೆ ಪ್ರಬಲವಾದ ರಾಜಮನೆತನಗಳಿದ್ದು ದರಿಂದ ಯುದ್ಧವಿಲ್ಲದೆ ಅಭಿವೃದ್ಧಿಗೆ ಅವಕಾಶವಿರಲಿಲ್ಲ. ಆದುದರಿಂದ ಈ ಮನೆತನದ ಪ್ರತಿಯೊಬ್ಬ ಅರಸನು ತನ್ನ ಕಾಲದ ರಾಜಕಾರಣದಲ್ಲಿ ಅಗ್ರಭಾಗವನ್ನು ವಹಿಸಿ ಒಂದಿ ಲ್ಲೊಂದು ಪಕ್ಷಕ್ಕೆ ಪರಿಣಾಮಕಾರಿಯಾದ ಸಹಾಯವನ್ನು ಕೊಟ್ಟು ಸಮಯ ಸಿಕ್ಕಂತೆ ರಾಜ್ಯವನ್ನು ಬೆಳೆಸುತ್ತ ತನ್ನ ಪ್ರತಿಷ್ಠೆಯನ್ನು ಕಾಯ್ದುಕೊಂಡಿದ್ದನು. ನೆರೆಹೊರೆಯವರಾದ ಪೂರ್ವ ಚಾಳುಕ್ಯರೊಡನೆ ಅವರ ಹೋರಾಟವು ಕಡೆಯವರೆಗೂ ನಡೆದಿತ್ತು. ರಾಷ್ಟ್ರಕೂಟ ರೊಡನೆ ಸಖ್ಯವನ್ನು ಬೆಳೆಸಿ ಕಡೆಗೆ ಅವರ ಮಾಂಡಲಿಕರಾಗಿ ವೆಂಗಿದೇಶದಲ್ಲಿ ತಮ್ಮ ರಾಜ್ಯ ವನ್ನು ಸ್ಥಿರಪಡಿಸಿಕೊಂಡಂತೆ ತೋರುತ್ತದೆ.

ಸ ಕಲಿಂಗ ತ್ರಯಿಾಂ ವೆಂಗೀಂ ಯೋಽವತಿಸ್ಮ ಪರಾಕ್ರಮಾತ್ ।

—ಪರಭಣಿ ತಾಮ್ರಶಾಸನ

ಬಲಾದ್ಗೃಹೀತಾಖಿಲ ವೆಂಗಿದೇಶಃ ಪಾತಿಸ್ಮ ಪೃಥಿವೀಮರಿಕೇಸರೀಶಃ ॥

—ವೇಮುಲವಾಡ ಶಾಸನ

---

೧. ಈ ಮನೆತನದ ರಾಜ್ಯವು ಪುಲಿಗೆಱೆಯ (ಪುಲಿಕರ=ಲಕ್ಷ್ಮೇಶ್ವರ) ನಿಟ್ಟಿನಲ್ಲಿತ್ತೆಂದು ಕೆಲವರು ಹೇಳುತ್ತಾರೆ. (*Bombay Gazeteer*, Vol. I, Part ?. p. 381; ಕವಿಚರಿತೆ ಭಾ ೧, ಪು ೩೦–೩೧; *Ep. Ind.* Vol. XIII, 328). ಇದು ತಪ್ಪು. ಪುಲಿಗೆಱೆನಾಡು ಚಾಲುಕ್ಯ ವಿನಯಾದಿತ್ಯ (*Ind. Ant.* VII, 112), ವಿಜಯಾದಿತ್ಯ, (*Ibid*), ರಾಷ್ಟ್ರಕೂಟ ೩ನೆಯ ಗೋವಿಂದ (*Ep. Ind.* VI, 166), ಅಮೋಘ ವರ್ಷನ ಮಾಂಡಲಿಕರು ಕುಪ್ಪೆಯ, ಬಂಕೆಯ (*Ep. Ind.* Vol. VII, 201, 212), ಕೃಷ್ಣನ ಮಾಂಡಲಿಕ ಇಂದಪಯ್ಯ (*Ibid*, XXI, 207), ೩ನೆಯ ಇಂದ್ರನ ಮಹಾಸಾಮಂತ ವೆಂಡೆಯರಸ (*Ind. Ant.* Vol. XII, 224), ೪ನೆಯ ಗೋವಿಂದ (*Ibid* 211), ೩ನೆಯ ಕೃಷ್ಣನ ಮಾಂಡಲಿಕ ಗಂಗ ಬೂತುಗ (*Ep. Ind.* Vol. VI, p. 53) ಇವರ ಆಡಳಿತಕ್ಕೆ ಕ್ರಿ. ಶ. ೭ನೆಯ ಶ.ದಿಂದ ೧೧ನೆಯ ಶ. ವರೆಗೆ ಒಳ ಪಟ್ಟಿತ್ತು. ಈ ಭಾಗಕ್ಕೆ ಅರಿಕೇಸರಿಯ ಸಂಬಂಧವು ಯಾವ ರೀತಿಯಿಂದಲೂ ಕಾಣಬರುವುದಿಲ್ಲ.

ನಿರುಪಮ ದೇವನ ರಾಜ್ಯದೊ
ಳರಿಕೇಸರಿ ವೆಂಗಿ ವಿಷಯಮುಮಂ ತ್ರಿಕಳಿಂಗಂ।
ಬೆರಸೊತ್ತಿ ಕೊಂಡು ಗರ್ವದೆ
ಬರೆಯಿಸಿದಂ ಪೆಸರನಖಿಳ ದಿಗ್ಭಿತ್ತಿಗಳೊಳ್॥

(ಪಂ. ಭಾ. ಆ. ೧-೨೦)

ಎಂದು ಅರಿಕೇಸರಿಯು ಕಲಿಂಗ ವೆಂಗಿದೇಶಗಳನ್ನಾಳುತ್ತಿದ್ದನೆಂದು ಬರೆದಿದೆ. ಈ ಕಾಲದಲ್ಲಿ ರಾಷ್ಟ್ರಕೂಟರು ಪ್ರಬಲ ಸಾರ್ವಭೌಮರಾಗಿದ್ದು ಅವರ ರಾಜನಾದ ೨ನೆಯ ಗೋವಿಂದನು ಯುವರಾಜನಾಗಿದ್ದಾಗಲೆ ವೆಂಗಿರಾಜ (೪ನೆಯ ವಿಷ್ಣುವರ್ಧನ) ನನ್ನು ಪಾದಾಕ್ರಾಂತನನ್ನಾಗಿ ಮಾಡಿದ್ದನೆಂದು ಕ್ರಿ.ಶ. ೭೭೦ರ ಅಲಾಸ ತಾಮ್ರಶಾಸನದಿಂದ ತಿಳಿಯುತ್ತದೆ. (ಶ್ರೀ ಗೋವಿಂದರಾಜೋ ಯುವರಾಜಃ ವೆಂಗಿಮಂಡಲೋ ಪರ್ಯಾಯಾತ ವಿಜಯಸ್ಕಂಧಾವಾರೇ ಕೋಶದಂಡಾತ್ಮ ಭೂಮಿಸಮರ್ಪಣೇನಾಗತೇ ವೆಂಗೀಶೇ-ಅಲಾಸಶಾಸನ). ಮುಂದೆ ಗೋವಿಂದನು ಈ ವೆಂಗಿ ಗಂಗ ಮೊದಲಾದ ರಾಜರ ಸಹಾಯದಿಂದ ತನ್ನ ತಮ್ಮನಾದ ಧ್ರುವನೊಡನೆ ಯುದ್ಧಮಾಡಿದನು. ಧ್ರುವನು ತನ್ನ ಅಣ್ಣನನ್ನು ಪಟ್ಟದಿಂದ ತಳ್ಳಿ, ಗಂಗ, ಪಲ್ಲವ, ವೆಂಗಿ ಮೊದಲಾದ ರಾಜರ ಮೇಲೆ ದಂಡೆತ್ತಿ ಹೋಗಿ ಅವರ ಸೊಕ್ಕನ್ನು ಮುರಿದನೆಂದು ಶಾಸನಗಳಿಂದ ತಿಳಿಯುತ್ತದೆ. (ಪೈಠಣ, ಬಡೋದಾ ತಾಮ್ರ ಶಾಸನಗಳು). ಗೋವಿಂದನ ಸಂಗಡಾಗಲಿ, ಧ್ರುವ ನಿರುಪಮನ ಸಂಗಡಾಗಲಿ ಹೋಗಿ ಅರಿಕೇಸರಿಯು ವೆಂಗಿ ರಾಜರನ್ನು ಸೋಲಿಸಿರಬೇಕು. ಹಾಗಿರದೆ ನಿರುಪಮ ದೇವನ ರಾಜ್ಯದಿಂದ ವೆಂಗಿ ವಿಷಯವನ್ನು ಕಿತ್ತಿಕೊಂಡನೆಂದು ತಿಳಿಯುವುದು ಸಂಭಾವ್ಯವಾಗಿ ತೋರುವದಿಲ್ಲ. ಮತ್ತು ಈಗ ಪೂರ್ವ ಚಾಳುಕ್ಯರಾಜರ ಅಧೀನದಲ್ಲಿದ್ದ ವೆಂಗಿದೇಶವು ರಾಷ್ಟ್ರಕೂಟರ ಆಳಿಕೆಗೊಳಪಟ್ಟಿತ್ತೆಂದು ನಿಶ್ಚಿತವಾದ ಪ್ರಮಾಣಗಳು ಹೇಳುವದಿಲ್ಲ. ಗೋವಿಂದ-ಧ್ರುವರು ವೆಂಗಿರಾಜನನ್ನು ಸೋಲಿಸಿದ್ದರೂ ಅವರು ಅವನಿಗೆ ಅವನ ದೇಶವನ್ನು ಮರಳಿ ಬಿಟ್ಟಿರಬೇಕು. ಇಲ್ಲದಿದ್ದರೆ ಅವಿಚ್ಛಿನ್ನವಾದ ಪೂರ್ವ ಚಾಲುಕ್ಯರ ಆಧಿಪತ್ಯವನ್ನು ತೋರಿಸುವ ಆ ಮನೆತನದ ಶಾಸನಗಳು ಅಲ್ಲಿ ದೊರೆಯಬಾರದಾಗಿತ್ತು.[೧] ಆದ್ದರಿಂದ 'ನಿರುಪಮ ದೇವನ ರಾಜ್ಯದೊಳ್' ಅಂದರೆ ನಿರುಪಮದೇವನ ಅರಸೊತ್ತಿಗೆಯಲ್ಲಿ ಎಂದರ್ಥ ಮಾಡಬಹುದು. ಅರಿಕೇಸರಿಯು ತನ್ನ ಅಕ್ಕಪಕ್ಕಗಳಲ್ಲಿದ್ದ ರಾಷ್ಟ್ರಕೂಟ ಚಾಲುಕ್ಯ ಉಭಯ ರಾಜರೊಡನೆ ವೈರವನ್ನು ತಾಳಿರುವದು ರಾಜನೀತಿ ಲಕ್ಷಣವಲ್ಲ. ಪೂರ್ವಚಾಳುಕ್ಯರೊಡನೆ ಅವನ ಮನೆತನದ ಹೋರಾಟವು ಒಂದೇಸವನೆ ನಡೆದದ್ದರಿಂದ ರಾಷ್ಟ್ರಕೂಟರೊಡನೆ ಸಖ್ಯದಿಂದಲೊ ಮಾಂಡಲಿಕ ಭಾವದಿಂದಲೊ ಇದ್ದನೆಂದು ತಿಳಿಯುವದು ಹೆಚ್ಚು ಸಮಂಜಸವಾಗುತ್ತದೆ. ಅರಿಕೇಸರಿಯು ವೆಂಗಿ-ಕಲಿಂಗಗಳನ್ನು ರಕ್ಷಿಸುತ್ತಿದ್ದನೆಂದರೆ ಧ್ರುವನ ದಂಡಯಾತ್ರೆಯಲ್ಲಿ ಅವುಗಳ ರಾಜರನ್ನು ಸೋಲಿಸಿ ಅಲ್ಲಿ ತನ್ನ ವರ್ಚಸ್ಸನ್ನು ಕೂಡಿಸಿದ್ದನೆಂದು ತಿಳಿಯಬಹುದು. ಈ ಎಲ್ಲ ಸಂದರ್ಭಗಳಲ್ಲಿ ಬಂದ ವೆಂಗಿರಾಜನು ಅರಿಕೇಸರಿಯ ಮನೆತನದ ರಾಜನೆಂದು ತಿಳಿಯುವದು ಸರಿಯಲ್ಲ.

---

೧. ನಿರುಪಮ ಧ್ರುವ ರಾಜರ ಶಾಸನಗಳು ವೆಂಗಿದೇಶದಲ್ಲಿ ಸಿಕ್ಕಿಲ್ಲ. ೩ನೆಯ ಗೋವಿಂದನು ಪೂರ್ವ ಚಾಲುಕ್ಯರ ಮೇಲೆ ದಂಡೆತ್ತಿ ಹೋದನೆಂದೂ ಅವರಿಂದ ಕಪ್ಪವನ್ನೆತ್ತಿದನೆಂದೂ ಶಾಸನಗಳು ಹೇಳುವುದರಿಂದ ಈ ನಡುವೆ ಪೂರ್ವ ಚಾಲುಕ್ಯರು ಸ್ವತಂತ್ರರಾಗಿರಬೇಕು.

ಅರಿಕೇಸರಿಯ ಮರಿಮಗನಾದ ಬದ್ದೆಗನು ಪೂರ್ವ ಚಾಲುಕ್ಯ ಮನೆತನದ ೨ನೆಯ ಭೀಮನನ್ನು ನೀರಿನಲ್ಲಿ ಮೊಸಳೆಯಂತೆ ಹಿಡಿದನೆಂದು ಬರೆದಿರುವದರಿಂದ ಇವನು ಒಳ್ಳೇ ಪರಾಕ್ರಮಶಾಲಿಯಾಗಿರಬೇಕು. 'ಮೊಸಳೆಯಂ ಪಿಡಿವಂತಿರೆ ನೀರೊಳೊತ್ತಿ ಭೀಮನನತಿ ಗರ್ವದಿಂ ಪಿಡಿಯೆ ಮೆಯ್ಗಲಿ ಬದ್ದೆಗನನ್ನನಾವನೋ' ಎಂದು ಪಂಪನು ಅವನನ್ನು ವರ್ಣಿಸಿದ್ದಾನೆ. ಪರಭಣಿ ತಾಮ್ರಶಾಸನದಲ್ಲಿ 'ನಾನಾ ದುರ್ಧರ ಯುದ್ಧಲಬ್ಧ ವಿಜಯ ಶ್ರೀ ಸಂಗಮಾಕರ್ಣನಾಥ್ಭೀಮಃ ಪಾಂಡವ ಏವ ಇತ್ಯಸುಹೃದೋ ಯಸ್ಮಾತ್ ಪರಂಬಿಭ್ಯತಿ। ಭೀಮಂ ಭೀಮಪರಾಕ್ರಮೈಕನಿಲಯಂ ತಂ ಹೇಲಯೈವಾಗ್ರಹೀದುಗ್ರಂ ಗ್ರಾಹ ಮಿವಾಂತರಂಬು ಸಮರೇ ದೋರ್ವಿಕ್ರಮಾದ್ಬದ್ದೆಗಃ'॥೭॥ ಎಂದು ಮೇಲೆ ಹೇಳಿದ್ದನ್ನೆ ಅಕ್ಷರಶಃ ಸಂಸ್ಕೃತದಲ್ಲಿ ಪರಿವರ್ತಿಸಿದಂತೆ ಬರೆದಿದೆ. ಈ ಭೀಮನು ಚೋಳ ರಾಜರಾಜನ ಕಂಚಿಯ ಶಿಲಾಶಾಸನ (ಶಕ೯೩೩-೩೪) ದಲ್ಲಿ[1] ಭೀಮಾಪರಾವತಾರಃ, ಭೀಮಪರಾಕ್ರಮಃ, ಪ್ರವರ್ತ್ತನಮಹಾಹವಃ ಎಂದು ವರ್ಣಿತನಾದ ಚಾಳುಕ್ಯ ಭೀಮನೆಂಬಲ್ಲಿ ಸಂಶಯವಿಲ್ಲ. ಈ ಯುದ್ಧದ ಸಂದರ್ಭವನ್ನು ಸ್ವಲ್ಪ ವಿಚಾರಿಸುವ. ೩ನೆಯ ಗೋವಿಂದರಾಜನು ಚಾಲುಕ್ಯರಿಂದ ಕಪ್ಪವನ್ನೆತ್ತುತ್ತಿದ್ದನೆಂದು ಅವನ ಕನ್ನಡ ತಾಮ್ರಶಾಸನದಿಂದ ತಿಳಿಯುತ್ತದೆ.[2] ಪೂರ್ವ ಚಾಲುಕ್ಯರ ಶಾಸನಗಳಲ್ಲಿ ೨ನೆಯ ವಿಜಯಾದಿತ್ಯ ಮೃಗೇಂದ್ರರಾಜನು ತನ್ನ ತಂದೆಯಾದ ೪ನೆಯ ವಿಷ್ಣುವರ್ಧನನ ಮರಣಾನಂತರ ಪಟ್ಟಕ್ಕಾಗಿ ಹವಣಿಸುತ್ತಿದ್ದ ತನ್ನ ತಮ್ಮನಾದ ಭೀಮಸಲ್ಕಿಯನ್ನು ಅವನ ಸಹಾಯಕರಾದ ರಾಷ್ಟ್ರಕೂಟ ಗಂಗರೊಂದಿಗೆ ಸೋಲಿಸಿ ಬಹುಪರಾಕ್ರಮದಿಂದ ವೆಂಗಿಮಂಡಲವನ್ನಾಕ್ರಮಿಸಿಕೊಂಡನು; ಮತ್ತು ರಟ್ಟರೊಡನೆ ೧೨ ವರ್ಷಗಳ ಕಾಲ ರಣಾಂಗಣಗಳಲ್ಲಿ ಹೋರಾಡಿ ಅಲ್ಲಿ ಬಂದ ಸುಲಿಗೆಯ ದ್ರವ್ಯದಿಂದ ೧೦೮ ಶಿವಾಲಯಗಳನ್ನು ಕಟ್ಟಿಸಿದನು. ಈ 'ದ್ವಾದಶವರ್ಷ ಸಂಗ್ರಾಮವು' ೨ನೆಯ ವಿಜಯಾದಿತ್ಯನ ೧ನೆಯ ವರ್ಷದಿಂದ ಅಂದರೆ ಕ್ರಿ.ಶ. ೮೦೬ರಿಂದ ೮೧೮ರವರೆಗೆ ನಡೆದಿರಬೇಕು. ೩ನೆಯ ಇಂದ್ರರಾಜನ ಒಂದು ಶಾಸನದಲ್ಲಿ ಅಮೋಘವರ್ಷನು ಚಾಳುಕ್ಯರನ್ನು ಸುಟ್ಟು ತನ್ನ ರಾಜ್ಯಶ್ರೀಯನ್ನು ಉದ್ಧರಿಸಿದನೆಂದು ಬರೆದಿರುವದರಿಂದ ಅವನ ಪಟ್ಟಬಂಧಾನಂತರ ಚಾಳುಕ್ಯರು ರಟ್ಟರಾಜ್ಯವನ್ನು ಕೆಲಕಾಲ ಆಕ್ರಮಿಸಿರಬೇಕು. ಕ್ಯಾಂಬೇ ತಾಮ್ರಪಟದಲ್ಲಿ ಅಮೋಘವರ್ಷನು ವಿಂಗವಳ್ಳಿಯಲ್ಲಿ ಚಾಲುಕ್ಯರನ್ನು ಸೋಲಿಸಿದನೆಂದೂ ಬಾಗುಮ್ರಾ ಶಾಸನದಲ್ಲಿ ಆ ಪ್ರಚಂಡ ವೈರಿಗಳನ್ನು ಕಡಲೆ ಹುರಿದಂತೆ ಹುರಿದನೆಂದೂ ಹೇಳಿರುವದರಿಂದ ಈ ವಿಂಗವಳ್ಳಿಯ ಯುದ್ಧಾನಂತರ ರಾಷ್ಟ್ರಕೂಟರು ಪುನಃ ಸ್ವತಂತ್ರರಾಗಿರಬೇಕು. ಆ ಮೇಲೆ ಗುಣಕ ವಿಜಯಾದಿತ್ಯನು ರಾಷ್ಟ್ರಕೂಟರನ್ನು ಬಗ್ಗುಬಡಿಯಲು ಹವಣಿಸುತ್ತಿದ್ದನು. ಇದನ್ನು ತಿಳಿದು ೨ನೆಯ ಕೃಷ್ಣರಾಜನು ಪ್ರಭೂತವಾದ ಸೈನ್ಯದೊಂದಿಗೆ ಅವನನ್ನು ಎದುರಿಸಿದನು. ಕೃಷ್ಣನು ವಿಜಯಾದಿತ್ಯನ ಭುಜಗಳನ್ನು ಅರ್ಚಿಸುತ್ತಿದ್ದನೆಂದು ೨ನೆಯ ಅಮ್ಮರಾಜನ ಕಲಚುಮ್ಮಲು ಶಾಸನದಲ್ಲಿ ಹೇಳಿದೆ. ಶಕ ೧೧೨೪ರ ಪಿಠಾಪುರಂ ಶಾಸನದಲ್ಲಿಯೂ ವಿಜಯಾದಿತ್ಯನು ವಲ್ಲಭೇಂದ್ರನನ್ನು ಸೋಲಿಸಿದನೆಂದು ಹೇಳಿದೆ. ಇದರಿಂದ ರಾಷ್ಟ್ರಕೂಟರು ಆಗ ಪೂರ್ವಚಾಳುಕ್ಯರ ಅಧೀನರಾಗಿರಬೇಕೆಂದು ತಿಳಿಯಬಹುದು. "೩ನೆಯ ವಿಜಯಾದಿತ್ಯನು ಅಚಲಪುರವನ್ನು ಸ್ವಾಧೀನಪಡಿಸಿಕೊಂಡು

---

೧. ಎಪಿ. ಇಂ. ೨೧. ಪು ೨೯.

೨. ಇಂಡಿಯನ್ ಎಂಟಿಕ್ವರಿ, ೧೧. ಪು ೧೨೬.

ನೆಂದೂ ಕಿರಣಪುರದಲ್ಲಿದ್ದ ಸಂಕಿಲ ಕೃಷ್ಣರನ್ನು ಹೊಡೆದೋಡಿಸಿ ಆ ಪುರವನ್ನು ಸುಟ್ಟನೆಂದೂ ಪೂರ್ವ ಚಾಲುಕ್ಯ ಶಾಸನಗಳು ಹೇಳುತ್ತವೆ. ಈ ವಿಜಯಾದಿತ್ಯನ ಮರಣಾನಂತರ ರಟ್ಟರು ಚಾಳುಕ್ಯ ರಾಜ್ಯವನ್ನು ಆಕ್ರಮಿಸಿಕೊಂಡರು. ಮುಂದೆ ಚಾಳುಕ್ಯ ಭೀಮನು (ಕ್ರಿ.ಶ. ೮೯೨) ಕೃಷ್ಣರಾಜನನ್ನು ಸೋಲಿಸಿ ಅವನಿಂದ ತನ್ನ ರಾಜ್ಯವನ್ನು ಕಿತ್ತುಕೊಂಡನು. ಅಂತು ಕಿರಣಪುರ ಯುದ್ಧಾನಂತರ ಕೃಷ್ಣನು ಮತ್ತೆ ಚಾಳುಕ್ಯ ರಾಜ್ಯವನ್ನು ತೆಗೆದುಕೊಂಡಿರಬೇಕೆಂದೂ ಮೇಲೆ ಹೇಳಿದಂತೆ ಚಾಳುಕ್ಯ ಭೀಮನು ಅದನ್ನು ಕಸಿದುಕೊಂಡನೆಂದೂ ತಿಳಿಯಬೇಕಾಗುತ್ತದೆ. ಶಕ್ತಿವರ್ಮನ ಒಂದು ಶಾಸನದಲ್ಲಿ ವಿಜಯಾದಿತ್ಯನು ಸಂಕಿಲ ಬದ್ದೆಗರನ್ನು ಸೋಲಿಸಿದನೆಂದು ಹೇಳಿದೆ, ಈ ಬದ್ದೆಗನು ೨ನೆಯ ಅರಿಕೇಸರಿಯ ಅಜ್ಜನಾದ ಬದ್ದೆಗನಾಗಿರಬೇಕು. ಇವನ ಕಾಲವು ಸು.ಕ್ರಿ.ಶ. ೮೬೦ ಆಗಬಹುದು. ಪಂಪನು ಬದ್ದೆಗನು ಭೀಮನನ್ನು ಮೊಸಳೆಯಂತೆ ಹಿಡಿದನೆಂದು ಹೇಳಿರುವದರಿಂದ ಮೇಲೆ ಹೇಳಿದ ಬದ್ದೆಗನ ಸೋಲು ತನ್ನ ಪ್ರಭುವಾದ ೨ನೆಯ ಕೃಷ್ಣನ ಸಂಗಡ ಹೋದಾಗ ಕಿರಣಪುರ ದಹನಸಮಯದಲ್ಲಿ ಆಗಿರಬೇಕು. ಪಂಪನು ಹೇಳಿದ ಬದ್ದೆಗನ ವಿಜಯವು ಕೃಷ್ಣಭೀಮರಿಗೆ ನಡೆದ ಸಂಗ್ರಾಮದಲ್ಲಿ ಆಗಿರಬೇಕು. ಆಗ ಬದ್ದೆಗನು ಭೀಮನನ್ನು ಮೊಸಳೆ ಹಿಡಿದಂತೆ ಹಿಡಿದು ಸೋಲಿಸಿದನು. ಈ ಸಂಗತಿಯು ಭೀಮನು ಪಟ್ಟಕ್ಕೆ ಬಂದ ಮೇಲೆ ಅಂದರೆ ಕ್ರಿ.ಶ. ೮೯೨ರ ನಂತರ ೧–೨ ವರ್ಷಗಳಲ್ಲಿ ಜರುಗಿರಬಹುದು.

೨ನೆಯ ಕೃಷ್ಣರಾಜನ ತರುವಾಯ ಜಗತ್ತುಂಗನ ಮಗನಾದ ಇಂದ್ರರಾಜನು ಕ್ರಿ.ಶ. ೯೧೫ರಲ್ಲಿ ಪಟ್ಟಬಂಧೋತ್ಸವವನ್ನು ನೆರವೇರಿಸಿದನೆಂದು ಅವನ ಬಾಗುಮ್ರಾ ಶಾಸನದಿಂದ ತಿಳಿಯುತ್ತದೆ. ಅಲ್ಲಿ ಇಂದ್ರರಾಜನು ಮೇರುವನ್ನು ಬೇರುಸಹಿತ ಕಿತ್ತು ಗೋವರ್ಧನಕ್ಕೆ ಆಶ್ರಯನಾಗಿದ್ದ ಉಪೇಂದ್ರನನ್ನು ಸೋಲಿಸಿದನೆಂದು ಹೇಳಿದೆ. ಕ್ಯಾಂಬೇ ಶಾಸನದಲ್ಲಿ ಇಂದ್ರನು ಮಹೋದಯವನ್ನು (ಕನೋಜ) ನಾಶಗೊಳಿಸಿದನೆಂದು ಬರೆದಿದೆ. ಮೇರು ಮಹೋದಯಗಳು ಒಂದೇ ಆಗಿರಬೇಕೆಂದು ಡಾ. ಕಿಲ್ಹಾರ್ನರು ಅಭಿಪ್ರಾಯಪಟ್ಟಿದ್ದಾರೆ. ಈಗಿನ ಮಹೋದಯದ ರಾಜನು ಗೂರ್ಜರ ಮಹೀಪಾಲನು.

ಪಂಪ ಭಾರತದಲ್ಲಿ ಅರಿಕೇಸರಿಯ ತಂದೆಯಾದ ನರಸಿಂಹ (ನರಗ) ನು ಗೂರ್ಜರ ಮಹೀಪಾಲನನ್ನು ಸೋಲಿಸಿ ಗಂಗಾನದಿಯಲ್ಲಿ ತನ್ನ ಕುದುರೆಗಳನ್ನು ತೊಳೆದನೆಂದು ಹೇಳಿದೆ. ನರಸಿಂಹನು ತನ್ನ ಸ್ವಾಮಿಯಾದ ಇಂದ್ರನ ಸಂಗಡ ಉತ್ತರ ದಿಗ್ವಿಜಯಕ್ಕೆ ಹೋಗಿ ಮಹೋದಯ ನಾಶದಲ್ಲಿ ಅವನಿಗೆ ನೆರವಾಗಿರಬೇಕು. ನರಗನ ಮಗನಾದ ೨ನೆಯ ಅರಿಕೇಸರಿಗೆ ಇಂದ್ರರಾಜನು ತನ್ನ ಮಗಳಾದ ರೇವಕನಿಮ್ಮಡಿಯನ್ನು ಕೊಟ್ಟು ಮದುವೆ ಮಾಡಿದನೆಂದು ವೇಮುಲವಾಡ ಶಾಸನದಲ್ಲಿ ಬರೆದಿದೆ. ಈಕೆಯ ಹೆಸರು ಲೋಕಾಂಬಿಕೆಯೆಂದು ಪರಭಣಿ ತಾಮ್ರಶಾಸನವು ಹೇಳುತ್ತದೆ. ಚಾಲುಕ್ಯ ತ್ರೈಳೋಕ್ಯಮಲ್ಲ ಸೋಮೇಶ್ವರನ ಶಕ ೯೭೪ರ ಬೋಧನ ಶಾಸನದಲ್ಲಿ[೧] ಆ ರಾಜನ ಪದಪದ್ಮೋಪಜೀವಿಯಾದ ಪೆರ್ಗ್ಗಡೆ ಜೋಗಪಯ್ಯನು 'ರಾಷ್ಟ್ರಕೂಟಾನ್ವಯಚಕ್ರೇಶ್ವರನಿನ್ದ್ರವಲ್ಲಭಂ ರಾಜಧಾನಿ ಬೋದನದೊಳೆ ಮಾಡಿಸಿದಿನ್ದ್ರ ನಾರಾಯಣ ದೇವರ ದೇವಾಯತನಂ ಕಾಲಕ್ರಮದಿಂ ಜೀರ್ಣ್ಣವಾಗಿಟ್ಟುದಂ ಕಣ್ಡು . . . ತದೀಯ ದೇವಗೃಹೋದ್ಧರಣಮುಂ ವಿಷ್ಣುದೇವ ಗರುತ್ಮಮಾನಸ್ತಂಭ ಪ್ರತಿಷ್ಠೆಯುಮಂ ಮಾಡಿ' ಕೆಲವು ದತ್ತಿಗಳನ್ನು

---

೧. ಹೈದರಾಬಾದ ಆರ್ಕಿಯಾಲಾಜಿಕಲ್ ಮೆಮಾಯರ್ ನಂ. ೭.

ಬಿಟ್ಟನೆಂದು ಹೇಳಿದೆ. ಇದರಿಂದ ಬೋದನವು ರಾಷ್ಟ್ರಕೂಟ ಇಂದ್ರರಾಜನ ರಾಜಧಾನಿಗಳಲ್ಲೊಂದಾಗಿತ್ತೆಂದು ಗೊತ್ತಾಗುತ್ತದೆ.

೨ನೆಯ ಅರಿಕೇಸರಿಯು 'ನೆಗಟ್ದಿಂದ್ರೇಂದ್ರನ ತೋಳೆ ತೊಟ್ಟಿಲಾಗಿರೆ' ಬಳೆದು 'ದೇವೇಂದ್ರನೊಳದ್ಧಾಸನಮೇಱಿದ ಗುಣಾರ್ಣವನ ಮಹಿಮೆಯುಮಂ' ಎಂಬಲ್ಲಿ ಸೂಚಿತವಾದ ಪ್ರಭುತ್ವವನ್ನು ಇಂದ್ರರಾಜನ ಪ್ರಸಾದಾತಿಶಯದಿಂದ ಹೊಂದಿದ್ದನು. ಇಂದ್ರರಾಜನ ತರುವಾಯ ಪಟ್ಟಕ್ಕೆ ಬಂದ ೪ನೆಯ ಗೋವಿಂದನು ಸ್ತ್ರೀಲೋಲುಪನಾಗಿದ್ದರಿಂದ ರಾಜ್ಯ ಸೂತ್ರಗಳು ಸಡಿಲವಾಗುತ್ತಿರಲು ಪ್ರಜೆಗಳ ಪ್ರಾರ್ಥನೆಯ ಮೇರೆಗೆ ೩ನೆಯ ಬದ್ದೆಗನು ಸಿಂಹಾಸನಕ್ಕೆ ಬಂದನು. ಆಗ ನಡೆದ ಹೋರಾಟದಲ್ಲಿ ಬದ್ದೆಗನಿಗೆ ಪಶ್ಚಿಮಗಂಗ ಬೂತುಗನು ಸಹಾಯಮಾಡಿ ಅವನ ಮಗಳಾದ ರೇವಕನಿಮ್ಮಡಿಯನ್ನು ಮದುವೆಯಾದನೆಂದು ಮಾರಸಿಂಹನ ಕೂಡಲೂರ ಶಾಸನದಿಂದ ತಿಳಿಯುತ್ತದೆ. ಇದೇ ಸಂದರ್ಭದಲ್ಲಿ ಅರಿಕೇಸರಿಯು ಗೋವಿಂದನ ಪ್ರತಿಕಕ್ಷಿಯಾಗಿ ನಿಂತು ಅವನು ಕಳಿಸಿದ ಸಾಮಂತರಾಜರ ದಂಡನ್ನೆಲ್ಲ ಸೋಲಿಸಿ ಪಂಪನು ಹೇಳುವಂತೆ 'ಅತಿವರ್ತಿಯಾಗಿ ಮಾರ್ಮಲೆವ ಚಕ್ರವರ್ತಿಯಂ ಕಿಡಿಸಿ ತನ್ನ ನಂಬಿಬಂದ ಬದ್ದೆಗ ದೇವಂಗೆ ಸಕಳ ಸಾಮ್ರಾಜ್ಯಮನೋರಂತೆ ಮಾಡಿ ನಿಱಿಸಿದನು.'

ಗೋವಿಂದರಾಜನು ಸಿಟ್ಟಿನಿಂದ ಬಿಜ್ಜನನ್ನು ಸೆರೆಹಿಡಿಯಲು ಅವನನ್ನು ರಕ್ಷಿಸಿದನು. (ಕ್ರುದ್ಧೇ ಗೋವಿಂದರಾಜೇ ಹರಣ (ಶರಣ?) ಮುಪಗತೋ ರಕ್ಷಿತೋ ಯೇನ ಬಿಜ್ಜಃ. ವೇಮುಲವಾಡ ಶಾಸನ.) 'ಚಾಳುಕ್ಯ ಕುಳ ತಿಳಕನಪ್ಪ ವಿಜಯಾದಿತ್ಯಂಗೆ ಗೋವಿಂದ ರಾಜಂ ಮುಳಿಯೆ ತಳರದೆ ಪೆಱಗಿಕ್ಕಿ ಕಾದ ಶರಣಾಗತಜಳನಿಧಿಯ ಪೆಂಪುಮಂ' (ಪಂ. ಭಾ. ಆ. ೯ ಗದ್ಯ) ಎಂದೂ "ಗೊಜ್ಜಿಗನೆಂಬ ಸಕಳ ಚಕ್ರವರ್ತಿ ಮುಳಿಯೆ ತನಗೆ ಶರಣಾಗತನಾದ ವಿಜಯಾದಿತ್ಯನಂ ಕಾದ ಬಲ್ಲಾಳ್ತನದೊಳ್ ಶರಣಾಗತಜಳ ನಿಧಿಯುಂ" (ಆಶ್ವಾಸ ೧೪ ಗದ್ಯ) ಎಂದೂ ಪಂಪನು ತನ್ನ ಪ್ರಭುವಾದ ಅರಿಕೇಸರಿಯನ್ನು ವರ್ಣಿಸಿದ್ದಾನೆ. ಗೊಜ್ಜಿಗ ಅಥವಾ ಗೋವಿಂದರಾಜನು ರಾಷ್ಟ್ರಕೂಟ ೪ನೆಯ ಗೋವಿಂದರಾಜನು. ಅವನು (ಕ್ರಿ.ಶ. ೯೩೭-೩೯)ರಲ್ಲಿ (ಶಕ ೮೫೦-೫೧) ಪಟ್ಟಕ್ಕೆ ಬಂದನು. ಆದರೆ ಶಕ ೮೪೦ (ಕ್ರಿ. ಶ. ೯೧೮)ರ ದಂಡಾಪುರ ಶಾಸನದಲ್ಲಿ ಪ್ರಭೂತವರ್ಷ ಗೋವಿಂದನು ಯುವರಾಜನಾಗಿದ್ದರೂ ಚಕ್ರವರ್ತಿ ರಾಜನಂತೆ ವರ್ಣಿಸಲ್ಪಟ್ಟಿದ್ದಾನೆ. ಆಗ ತನ್ನ ತಂದೆಯ ಜೊತೆಗೆ ರಾಜ್ಯವಾಳುತ್ತಿದ್ದಿರಬೇಕು. ಆ ಸಮಯದಲ್ಲಿ (ಕ್ರಿ. ಶ. ೯೧೮ರಲ್ಲಿ) ಗೋವಿಂದನು ೬ ತಿಂಗಳು ಮಾತ್ರ ಆಳಿದ ಕೊಲ್ಲಬ್ಬಿಗಂಡ ವಿಜಯಾದಿತ್ಯನ ಮೇಲೆ ದಂಡೆತ್ತಿ ಹೋಗಿರಬೇಕು. ಚಾಲುಕ್ಯ ರಾಜ್ಯದಲ್ಲಿ ಆಗ ಅರಸೊತ್ತಿಗೆಗಾಗಿ ಪರಸ್ಪರ ಕೊಲೆಗಳು ನಡೆದದ್ದರಿಂದ ಆ ರಾಜನು ರಾಷ್ಟ್ರಕೂಟ ಅರಸರ ಸಹಾಯವನ್ನು ಅಪೇಕ್ಷಿಸಿದಂತೆ ತೋರುತ್ತದೆ. ವಿಜಯಾದಿತ್ಯನು ಬದ್ದೆಗ ಅರಿಕೇಸರಿಗಳಿಗೆ ಶರಣಾಗತನಾಗಿರಬೇಕು. ಅರಿಕೇಸರಿಯು ಗೋವಿಂದರಾಜನನ್ನು ಪಟ್ಟದಿಂದ ತಳ್ಳಿ ಅಮೋಘವರ್ಷ ಬದ್ದೆಗನನ್ನು ಪಟ್ಟದ ಮೇಲೆ ಕುಳ್ಳಿರಿಸಿದನು. 'ಸಮದ ಗಜ ಘಟಾಟೋಪಂ ಬೆರಸು ನೆಲನದಿರೆ ವಂದು ತಾಗಿದ ಕಕ್ಕಲನ ತಮ್ಮನಪ್ಪ ಬಪ್ಪುವನಂಕಕಾಱನೊಂದೆ ಸಿಂಧುರದೊಳೋಡಿಸಿದ ವೈರಿಗಜಘಟಾವಿಘಟನನದಟುಮಂ' ಎಂದು ಕಕ್ಕಲ ತಮ್ಮನಾದ ಬಪ್ಪುವನ್ನು ಓಡಿಸಿದನೆಂದೂ ಪಂಪನು ಹೇಳಿರುತ್ತಾನೆ. ಕೂಡಲೂರ ಶಾಸನದಲ್ಲಿ ಗಂಗಬೂತುಗನು ಬದ್ದೆಗನ ಮರಣಾನಂತರ ಉಂಟಾದ ಅಶಾಂತತೆಯಲ್ಲಿ ಲಲ್ಲೇಯನೆಂಬವನು ರಾಷ್ಟ್ರಕೂಟ

ರಾಜ್ಯವನ್ನಾಕ್ರಮಿಸಲು ಅವನಿಂದ ಅದನ್ನು ಕಿತ್ತು ಕೃಷ್ಣನಿಗೆ ಅರ್ಪಿಸಿದನೆಂದೂ ಅಚಳಕ್ಷ: ಪತಿಯಾದ ಕಕ್ಕಲನನ್ನು ಕೊಂದನೆಂದೂ ಬಿಜ್ಜನೆಂದು ಹೆಸರಾದ ದಂತಿವರ್ಮನನ್ನು (ತನ್ನ ಊರಾದ) ವನವಾಸಕ್ಕೆ ಅಟ್ಟಿದನೆಂದೂ ಬರೆದಿದೆ. ೩ನೆಯ ಕೃಷ್ಣನ ದೇವ್ಲೀ ಶಾಸನದಲ್ಲಿ (ಕ್ರಿ.ಶ. ೯೪೦) ತಾನು ಯುವರಾಜನಾಗಿದ್ದಾಗಲೆ ತಂದೆಯಾದ ಬದ್ದೆಗ ಆಜ್ಞೆಯ ಮೇರೆಗೆ ಜನಹಿಂಸಕರೂ ದುಷ್ಟರೂ ಆದ ದಂತಿಗವಪ್ಪುಗರನ್ನು ನಾಶಮಾಡಿ ನೆಂದು ಹೇಳಿದೆ. ಈ ದಂತಿಗನು ವನವಾಸಿಯ ಬಿಜ್ಜದಂತಿವರ್ಮನಾಗಿರಬೇಕು. ಮೇ ಹೇಳಿದ ಕಕ್ಕಲನ ತಮ್ಮನಾದ ಬಪ್ಪುವನು ಈ ದುಷ್ಟ ವಪ್ಪುಗನಾಗಿರಬೇಕು. ಅರಿಕೇಸರಿಯ ಈ ಪರಾಕ್ರಮುಗಳೆಲ್ಲ ಕ್ರಿ.ಶ. ೯೪೦ರ ಪೂರ್ವದಲ್ಲಿ ಜರುಗಿರಬೇಕು.

ಈ ರಾಜಕೀಯ ಪರಿಸ್ಥಿತಿಗಳ ಸಂಕ್ಷಿಪ್ತ ವಿವರಣೆಯಿಂದ ರಾಷ್ಟ್ರಕೂ ರಾಜ್ಯದಲ್ಲಿ ೨ನೆಯ ಅರಿಕೇಸರಿಯು ಮತ್ತು ಅವನ ಪೂರ್ವಜರು ಎಂಥ ಗಣ್ಯವಾ ಸ್ಥಾನವನ್ನು ಪಡೆದಿದ್ದರೆಂಬುದು ಗೊತ್ತಾಗುತ್ತದೆ. ಸು. ಕ್ರಿ.ಶ. ೭೦೦ ರಿಂದ ೯೪೦ (ಪಂಪನ ಕಾಲದ) ವರೆಗೆ ಈ ಚಾಳುಕ್ಯರಾಜರು ತಮ್ಮ ಅಪ್ರತಿಹತವಾದ ಪರಾಕ್ರಮವನ್ನು ತೋರಿಸುತ್ತಿದ್ದರು. ಈ ಅವಧಿಯಲ್ಲಿ ಅವರು ರಾಷ್ಟ್ರಕೂಟ ಅರಸರ ದಿಗ್ವಿಜಯದ ಅಗ್ರಭಾಗವನ್ನು ವಹಿಸಿದ್ದರು. ತಮ್ಮ ಪ್ರಭುಗಳ ಅರಸೊತ್ತಿಗೆಯು ಭದ್ರವಾಗಿ ಉಳಿಯು ವಂತೆ ಆಗಾಗ ತಲೆಯೆತ್ತುತ್ತಿದ್ದ ಬಂಡುಗಾರರನ್ನು ಅಡಗಿಸಿದರು. ಅವರಲ್ಲಿ ೨ನೆಯ ಅರಿಕೇಸರಿಯು ಬಹಳ ಪ್ರತಾಪಶಾಲಿಯೆಂಬುದು ಅವನು ತೋರಿಸಿದ ವೀರ್ಯದಿಂ ಗೊತ್ತಾಗುವದು, 'ಚತುರಂಗಬಲ ಭಯಂಕರಣ' ನಾದ ಪಂಪನು ಅರಸನ ಪ್ರೀತಿಗೆ ಪಾತ್ರನಾಗಿದ್ದನು.[೧] ರಾಜನು ಈತನಿಗೆ 'ಬಟಿಯಟ್ಟ ಪಿರಿದನಿತ್ತು' ತನ್ನ ಖ್ಯಾತಿಯು ಹಬ್ಬುವಂತೆ ಒಂದು ಇತಿಹಾಸ ಕಥೆಯನ್ನು ಬರೆಯಲು ಆಜ್ಞಾಪಿಸಿದನು. ಆಗ ಪಂಪನು ವೈರಿನರೇಂದ್ರೋದ್ದಾಮ ದರ್ಪೋದ್ದಳನನನೆ ಕಥಾನಾಯಕಂ ಮಾಡಿ ಸಂದ । ಜ್ಜುನನೊಳ್ ಪೋಲ್ವಿಕಥಾಭಿತ್ತಿಯನನುನಯದಿಂ ಪೇಟಲೆಂದೆತ್ತಿಕೊಂಡೆಂ' ಎಂದು ಹೇಳುತ್ತಾನೆ. ಪಂಪನು ಯುದ್ಧಸಂಮರ್ದಗಳ ಉರವಣಿಯಲ್ಲಿ ಬಾಳಿ ವೀರಾಗ್ರೇಸರನಾಗಿದ್ದರೂ ತನ್ನ ಯುಗಧರ್ಮಗಳನ್ನು ಪ್ರತಿಬಿಂಬಿಸುವ ಅಸದೃಶವಾದ ಪುರಾಣಕಾವ್ಯಗಳನ್ನು ರಚಿಸಿದನು.

ಪಂಪನು ವೆಂಗಿವಿಷಯದಲ್ಲಿದ್ದ ವೆಂಗಿಪಳುವಿನ ನಿವಾಸಿಯು. ತನ್ನ ಕೃತಿಗಳನ್ನು 'ರಾಜ[ದ್ರಾ]ಜಕಮೆನಿಸಿದ ಸಾಜದ ಪುಲಿಗೆಱೆಯ ತಿರುಳ ಕನ್ನಡದೊಳ್' ರಚಿಸಿದನು. ಇದರಿಂದ ಇವನು ಪುಲಿಗೆಱೆಯ ಪ್ರಾಂತ್ಯದವನೆಂದು ಊಹಿಸಲಾಗಿದೆ. ಇದಕ್ಕೆ ಪ್ರಮಾಣ ಗಳಿಲ್ಲ. ಅಲ್ಲದೆ ಅರಿಕೇಸರಿಯ ರಾಜ್ಯವು ಬೋಧನ, ವೇಮುಲವಾಡ ಮೊದಲಾದ

೧. ವಿ. ವಿಜಯ. ಆ ೧೪, ೪೯. ಅರಿಕೇಸರಿಯ ರಾಜ್ಯದಲ್ಲಿ ಪಂಪನು ದಂಡನಾಥನಾಗಿರಬೇಕು. 'ನಿಜಾಧಿನಾಥನಾಹವದೊಳರಾತಿನಾಯಕಕ ಪಟ್ಟನೆ ಪಾಱಿಸೆ ಸಂದ ಪೆಂಪು' (೧೪-೫೦) ಎಂದು ವರ್ಣಿ ನಾಗಿದ್ದಾನೆ; ವೇಮುಲವಾಡ ಶಾಸನದ 'ಸಾಮಂತಾಂ ದಂಡಮುಖ್ಯಾನ್ನಿಜಭುಜ . . . ಕೃತ್ವಾ . . . ಪದ್ಮಾಯ ಮಾರ್ಯಃ' ಎಂಬ ೧೩ನೆಯ ಶ್ಲೋಕದಲ್ಲಿಯ ಪದ್ಮಾರ್ಯ=ಪದ್ಮಾರ್ಯ=ಪದ್ಮಪ್ಪ=ಪಂಪಗಳು ಒಂದೇ ಆದ ೪ನೆಯ ಗೋವಿಂದನ ಗೂಡ ಯುದ್ಧಮಾಡುವಾಗ ಕವಿಯು ರಣಾಗ್ರದಲ್ಲಿದ್ದಿರಬೇಕು. ಕ್ರಿ.ಶ. ೯೬೬ರ ಪರಭ ಶಾಸನದ ಕವಿ ('ಕಥಿತಂ ಕವಿಪೆದ್ದಣೇನ ಭಟ್ಟೇನ') ಭಟ್ಟ ಪೆದ್ದಣನು. ವಿ. ವಿಜಯದ (ಆ. ೧-೧೫-೪೯) ವರ್ಣನೆ ಭಾಗದಲ್ಲಿಯೂ ಈ ಶಾಸನದ ಪದ್ಯಗಳಲ್ಲಿಯೂ ಕೆಲವೆಡೆ ಭಾಷೆ ಅರ್ಥಗಳಲ್ಲಿ ಸಾಮ್ಯವಿರುವದರಿಂದ ಭಟ್ಟ ಪೆದ್ದ (ಪದ್ಮಣ್ಣ?) ಕವಿಯು ಪಂಪನೇ ಆಗಿರಬಹುದೊ ಎಂಬ ಶಂಕೆಗೆ ಆಸ್ಪದವಿದೆ; 'ಭಟ್ಟ' ಎಂಬ ಉಪಪದದಿಂ ಈತನು ಬ್ರಾಹ್ಮಣನಾಗಿದ್ದಿರಬಹುದು. ಆದರೆ ಭಟ್ಟ ಆಕಳಂಕ (ಭಟ್ಟಾಕಳಂಕ) ಎಂಬ ಹೆಸರು ಜೈನರಲ್ಲಿಯೂ ಉಂಟು. ವೇಮುಲವಾಡ ಶಾಸನದ ಸತ್ರಾಧಿಪಾಲ ನಾಗಮಯ್ಯನ ಮಗ ತಂತ್ರಪಾಳಪೆದ್ದಣಾರ್ಯನು ಭಟ್ಟಪೆದ್ದಣನಿಂದ ಭಿನ್ನನಾಗಿರಬೇಕು. ಈ ವಿಷಯವನ್ನು ಪ್ರತ್ಯೇಕ ಚರ್ಚಿಸುವದವಶ್ಯವಿದೆ.

ಗ್ರಾಮಗಳುಳ್ಳ ವೆಂಗಿವಿಷಯದಲ್ಲಿ ಎಂದರೆ ಪೂರ್ವ ಚಾಲುಕ್ಯರಾಜ್ಯದ ಪಶ್ಚಿಮಕ್ಕೆ ಹೊಂದಿ ಇತ್ತೆಂದು ತಿಳಿಯಲು ಸಾಕಷ್ಟು ಆಧಾರಗಳುಂಟು. ಪುಲಿಗೆಱೆಯ ಸ್ವಾಭಾವಿಕ ಕನ್ನಡವು ಪರಿಶುದ್ಧವಾದ ತಿರುಳಕನ್ನಡವಾದ್ದರಿಂದ ಅದರಲ್ಲಿ ಗ್ರಂಥಗಳನ್ನು ರಚಿಸುವದು ಕವಿಯ ಅಸಾಧಾರಣ ಪಾಂಡಿತ್ಯವನ್ನೂ ಭಾಷಾಪ್ರಭುತ್ವವನ್ನೂ ಸೂಚಿಸುತ್ತದೆ. ಪಂಪನು ಪುಲಿಗೆಱೆಯಿಂದ ಅರಿಕೇಸರಿಯ ರಾಜ್ಯಕ್ಕೆ ಹೋಗಿ ಅಲ್ಲಿ ನೆಲಸಿದ್ದನೆಂದು ತಿಳಿಯಲು ಸ್ಪಷ್ಟಪ್ರಮಾಣಗಳಿಲ್ಲ. ಪುಲಿಗೆಱೆಯ ತಿರುಳ್ಗನ್ನಡದಲ್ಲಿ ಬರೆದನೆಂಬ ಆಧಾರವು ಈ ಊಹೆಗೆ ಸಾಲದು. ಅವನ ಮನೆತನವು ವೆಂಗಿವಿಷಯದಲ್ಲಿತ್ತೆಂಬುದು ಈ ಊಹೆಗೆ ಬಾಧಕ ವಾಗುವದು.

ಪಂಪನ ಯುಗವು ಧರ್ಮದಲ್ಲಿಯೂ ರಾಜಸತ್ತೆಯಲ್ಲಿಯೂ ಸಮಾಜದ ಕಟ್ಟು ಗಳಲ್ಲಿಯೂ ಸ್ಥಿತ್ಯಂತರಗಳನ್ನು ಉಂಟುಮಾಡಿದ ಕಾಲವು. ರಾಜಕಾರಣದಲ್ಲಿ ಚಕ್ರವರ್ತಿ ಗಳು ದುರ್ಬಲರಾಗಿದ್ದು ಮಾಂಡಲಿಕ ರಾಜರು ಪರಾಕ್ರಮಾತಿಶಯದಿಂದ ರಾಜ್ಯದ ನಿರ್ವಾಹಕರಾಗಿ ಜನರ ಮನಸ್ಸಿನಲ್ಲಿ ಗಣ್ಯವಾದ ಸ್ಥಾನವನ್ನು ಪಡೆಯಹತ್ತಿದರು. ರಾಷ್ಟ್ರಕೂಟ ೩ನೆಯ ಗೋವಿಂದರಾಜನ ಕಾಲದವರೆಗೂ ಅಂದರೆ ಕ್ರಿ.ಶ. ೮೧೪ರ ವರೆಗೆ ಸಾರ್ವಭೌಮರಾಜರು ತಮ್ಮ ಪ್ರಭುತ್ವವನ್ನು ನಿರಾಲಂಬವಾಗಿ ಕಾದುಕೊಂಡು ನಾಲ್ಕುದಿಕ್ಕು ಗಳಲ್ಲಿ ತಮ್ಮ ಬಾಹುಬಲದಿಂದಲೆ ದಿಗ್ವಿಜಯವನ್ನು ಗೆಯ್ಯುತ್ತಿದ್ದರು. ರಾಜ್ಯವು ವಿಸ್ತರಿಸಿ ದಂತೆ ಮಾಂಡಲಿಕರನ್ನು ಅಲ್ಲಲ್ಲಿ ನೇಮಿಸಿದ್ದರಿಂದ ಅಷ್ಟೊಂದು ವಿಶಾಲವಾದ ದೇಶದಲ್ಲಿ ನಿರಾಬಾಧಿತವಾದ ತಮ್ಮ ಅಂಕವನ್ನು ಸ್ಥಿರಪಡಿಸಿಕೊಳ್ಳಲು ಸಾರ್ವಭೌಮರಾಜರಿಗೆ ಸಾಧ್ಯವಾಗಲಿಲ್ಲ. ೧ನೆಯ ಅಮೋಘವರ್ಷನು ಚಿಕ್ಕವನಿರುವಾಗಲೆ ಪಟ್ಟಕ್ಕೆ ಬಂದುದರಿಂದ ಅವನ ರಾಜ್ಯದಲ್ಲಿ ಭೀಕರವಾದ ಕ್ರಾಂತಿಕಾರಕ ಬಂಡುಗಳೆದ್ದವು. ಆಗ ರಾಜನು ಮಾಂಡಲಿಕನಾದ ಲಾಟದ ಕರ್ಕರಾಜನ ಸಹಾಯವನ್ನು ಬಯಸಬೇಕಾಯಿತು; ಆಳುಗಳಾಗಿ ದುಡಿಯುತ್ತಿದ್ದ ಪಶ್ಚಿಮ ಗಂಗರೊಡನೆ ಸ್ನೇಹಬಾಂಧವ್ಯವನ್ನು ಬೆಳಸಬೇಕಾಯಿತು; ೧ನೆಯ ಬೂತುಗನಿಗೆ ತನ್ನ ಮಗಳಾದ ಚಂದ್ರೊಬ್ಬಲಬ್ಬೆಯನ್ನು ಕೊಟ್ಟು ಮದುವೆ ಮಾಡಿದನು. ಅಮೋಘವರ್ಷನ ವಿಜಯಗಳು ಮಾಂಡಲಿಕರಾಜರ ಪರಾಕ್ರಮಗಳನ್ನವಲಂಬಿಸಿದ್ದವು. ಗೂರ್ಜರ ವಿಜಯದಲ್ಲಿಯೂ ಪೂರ್ವ ಚಾಳುಕ್ಯರ ಹೋರಾಟದಲ್ಲಿಯೂ ಬೋಧನ ಚಾಳುಕ್ಯರೂ ತಳಕಾಡಿನ ಗಂಗರೂ ರಣಾಗ್ರದಲ್ಲಿ ನಿಂತು ಕಾದಿ ತಮ್ಮ ಪ್ರಭುವಿನ ಮಾನವನ್ನು ಕಾದರು. ಬದ್ದೆಗನ ಪಟ್ಟಬಂಧವು ೨ನೆಯ ಅರಿಕೇಸರಿಯ ಪರಾಕ್ರಮದ ಹಂಗಿಗೊಳಗಾಗಿತ್ತು. ಹೀಗೆ ರಾಜ್ಯತಂತ್ರದಲ್ಲಿ ಮಾಂಡಲಿಕರು ಪ್ರಬಲರಾಗಿದ್ದುದರಿಂದ ಸಾರ್ವಭೌಮರಾದ ಬದ್ದೆಗ ೩ನೆಯ ಕೃಷ್ಣರಾಜರು ಚಕ್ರವರ್ತಿಗಳಾಗಿದ್ದರೂ "ವೈರಿನರೇಂ ದ್ರೋದ್ದಾಮುದರ್ಪೋದ್ದಳನ"ನೆಂದು ಮಾಂಡಲಿಕನಾದ ಅರಿಕೇಸರಿಯನ್ನೇ ಕಥಾ ನಾಯಕನನ್ನಾಗಿ ಬೆಳಗಿದುದು ಆ ಕಾಲ ವಿಶೇಷದ ಒಲವನ್ನು ಸೂಚಿಸುತ್ತದೆ. ೩ನೆಯ ಕೃಷ್ಣರಾಜನು ತನ್ನ ಪೂರ್ವಜನಾದ ೩ನೆಯ ಗೋವಿಂದರಾಜನಂತೆ ಉತ್ತರ-ದಕ್ಷಿಣ-ಪೂರ್ವ ದೇಶಗಳಲ್ಲಿ ದಿಗ್ವಿಜಯವನ್ನು ಮಾಡಿ ಮಧ್ಯಪ್ರಾಂತದ ಜುರಾ ಎಂಬ ಗ್ರಾಮದಲ್ಲಿ ಕೂಡ ಕನ್ನಡದಲ್ಲಿ ತನ್ನ ಪ್ರಶಸ್ತಿ ಶಾಸನಗಳನ್ನು ನಿಲ್ಲಿಸಿ ಪೂರ್ವದಲ್ಲಿ ಚಾಳುಕ್ಯ ಗಂಗರ ಯುದ್ಧಗಳಲ್ಲಿ ಪಕ್ಷವನ್ನು ವಹಿಸಿ ದಕ್ಷಿಣದಲ್ಲಿ ತಂಜಾವುರದ ಚೋಳರನ್ನು ಸೋಲಿಸಿ ಆರ್ಕಾಡು ಜಿಲ್ಲೆಯ ಮೇಲ್ಪಾಡಿಯಲ್ಲಿ ತನ್ನ ಮಾಂಡಲಿಕರನ್ನು ಸ್ಥಾಪಿಸಿ ಜಗದೇಕವೀರನೆಂದು ಪ್ರಸಿದ್ಧ ನಾಗಿದ್ದರೂ ಅವನ ಶೌರ್ಯ ಪರಾಕ್ರಮಗಳೆಲ್ಲ ಮುಖ್ಯವಾಗಿ ಮಂಡಲಾಧಿಪತಿಗಳ

ಸೌಹಾರ್ದವನ್ನೂ ಪರಾಕ್ರಮವನ್ನೂ ಅವಲಂಬಿಸಿದ್ದವು. ಆದ್ದರಿಂದಲೇ ಕೃಷ್ಣನ ಮರಣಾನಂತರ ೪–೬ ವರ್ಷಗಳಲ್ಲಿ ಅರಸೊತ್ತಿಗೆಯು ಬುಡಮೇಲಾಗಿ ಪ್ರಬಲ ಮಾಂಡಲಿಕನಾದ ಆಹವಮಲ್ಲ ತೈಲಪನ ಕೈಸೇರಿತು.

ಧರ್ಮದಲ್ಲಿಯೂ ಇದೇ ರೀತಿ ಬದಲಾವಣೆಗಳಾದುದು ಕಂಡುಬರುತ್ತದೆ. ಕನ್ನಡ ದೇಶದ ಧರ್ಮ ಚರಿತ್ರೆಯಲ್ಲಿ ವೈದಿಕ ಧರ್ಮದ ನೆರೆಯಲ್ಲಿ ಜೈನಧರ್ಮವು ಚಂದ್ರಗುಪ್ತ-ಭದ್ರಬಾಹುಗಳ ಕಾಲದಲ್ಲಿ (ಕ್ರಿ.ಪೂ. ೪ನೆಯ ಶತಮಾನ) ಕೈ ಚಾಚಿತು. ಅಶೋಕನೂ ಅವನ ಧರ್ಮೋಪದೇಶಕರೂ (ಕ್ರಿ.ಪೂ. ೩ನೆಯ ಶತಮಾನ) ಬೌದ್ಧ ಧರ್ಮವನ್ನು ಪ್ರಚಾರ ಮಾಡಲು ಪ್ರಯತ್ನಿಸಿದರು. ಆಂಧ್ರಭೃತ್ಯರೂ ಅವರ ಮಾಂಡಲಿಕರಾದ ಚುಟುಗಳೂ ಗುಂಟೂರು ಜಿಲ್ಲೆಯ ಇಖ್ವಾಕು ರಾಜರೂ ಬೌದ್ಧರಾಗಿದ್ದರೂ ಆಗ ವೈದಿಕ ಧರ್ಮದ ಬೇರುಗಳು ಜನರ ಹೃದಯದಲ್ಲಿ ಗಟ್ಟಿಯಾಗಿ ಊರಿದ್ದವು. ಜೈನರು ಬೌದ್ಧಕೇಂದ್ರಗಳ ನೆರೆಯಲ್ಲಿಯೇ ತಮ್ಮ ಧರ್ಮಕೇಂದ್ರಗಳನ್ನು ಸ್ಥಾಪಿಸಿ ರಾಜಾಶ್ರಯದಿಂದಲೂ ಜನಾದರದಿಂದಲೂ ಬೌದ್ಧಧರ್ಮವನ್ನು ನಿಲ್ಲದಂತೆ ಮಾಡಿದರು. ಜೈನ–ವೈದಿಕ ಧರ್ಮಗಳೆರಡೂ ಅಕ್ಕಪಕ್ಕಗಳಲ್ಲಿ ನಿಂತು ತಮ್ಮ ಬೆಳಕನ್ನು ತೋರಿಸಹತ್ತಿದವು. ವೈಷ್ಣವರಿಂದ ಬಾದಾಮಿ ಚಾಲುಕ್ಯರ ಕಾಲದಲ್ಲಿ ಜೈನರ ಹುರುಪು ಕಳೆಗುಂದಲಿಕ್ಕೆ ಆರಂಭಿಸಿತು. ಆದರೂ ರಾಷ್ಟ್ರಕೂಟರೂ ಗಂಗರೂ ಜೈನಧರ್ಮದ ಪೋಷಣೆಯಲ್ಲಿ ನಿರತರಾದ್ದರಿಂದ ಆಗ ಅನೇಕ ಜೈನ ಕಾವ್ಯಗಳೂ ಬಸದಿಗಳೂ ಹುಟ್ಟಿದವು. ವೇರೂಳದ ಅದ್ಭುತವಾದ ಗುಹಾಂತರ್ದೇವಾಲಯಗಳಲ್ಲಿ ಕೆಲವು ರಾಷ್ಟ್ರಕೂಟ ದಂತಿದುರ್ಗನ ಕಾಲದವು. ಜನರ ಆದರಾತಿಶಯಗಳು ಕಡಿಮೆಯಾದಂತೆ ಜೈನಧರ್ಮದಲ್ಲಿಯೂ ಅದರ ಪರಂಪರೆಯಲ್ಲಿಯೂ ಅತ್ಯದ್ಭುತ ಕೃತಿಗಳಿಂದ ವಿಶ್ವಾಸವನ್ನು ಹುಟ್ಟಿಸಲು ಪ್ರಾರಂಭವಾಯಿತು. ೧೦ನೆಯ ಶತಮಾನವೆಂದರೆ ಶೈವ ವೈಷ್ಣವ ಧರ್ಮಗಳ ಪ್ರಸಾರವು ಹೆಚ್ಚಾಗಿ ಜೈನಧರ್ಮವು ಕುಂದಿದ ಕಾಲವು. ಇಂದ್ರರಾಜನು ಬೋಧನದಲ್ಲಿ '. . . ಕೂಟಂಗಳಿಂದೊಪ್ಪೆ . . . ದ್ದಾಮ ಶ್ರೀ ವಲ್ಲಭಾವಾಸ'ವಾದ ಇಂದ್ರನಾರಾಯಣ ಮಂದಿರವನ್ನು ಕಟ್ಟಿಸಿದನು. ವೇರೂಳದ ಅತ್ಯದ್ಭುತವಾದ ಕೈಲಾಸವು ೧ನೆಯ ಕೃಷ್ಣರಾಜನ ಕಾಲದಲ್ಲಿ ನಿರ್ಮಾಣವಾಯಿತು. ಜಿನಸೇನ–ಗುಣಭದ್ರರು ೯–೧೦ನೆಯ ಶ. ದ. ಅಕ್ಕಪಕ್ಕದಲ್ಲಿ ಆದಿಪುರಾಣ–ಉತ್ತರ ಪುರಾಣಗಳನ್ನು ರಚಿಸಿ ಎಲ್ಲ ತೀರ್ಥಂಕರರ ಚರಿತ್ರವನ್ನು ವೈದಿಕ ಪುರಾಣಗಳಂತೆ ಪುರಾಣರೂಪವಾಗಿ ಸಂಸ್ಕೃತದಲ್ಲಿ ಬರೆದರು. ದಿನ ದಿನಕ್ಕೂ ಕುಂದುತ್ತ ಬಂದಿದ್ದ ಜೈನಧರ್ಮದಲ್ಲಿ ವಿಶ್ವಾಸ ಗೌರವಗಳು ಹುಟ್ಟುವದಕ್ಕಾಗಿ ಶ್ರವಣಬೆಳ್ಗೊಳದ ಗೊಮ್ಮಟೇಶ್ವರವು ಕಣ್ಣಿಗೆ ದಂಗುಬಡಿಯುವಂತೆ ಆಶ್ಚರ್ಯ ಕೃತಿಯಾಗಿ ನಿಲ್ಲಿಸಲ್ಪಟ್ಟಿತು (ಸು. ಕ್ರಿ.ಶ. ೯೭೫). ಇದು ಹುಟ್ಟಿದ ಸಮಯದಲ್ಲಿಯೇ ಉತ್ತರದಲ್ಲಿ ವೈದಿಕ ಧರ್ಮದ ಉದ್ಧಾರಕರಾದ ಚಾಳುಕ್ಯರೂ ದಕ್ಷಿಣದಲ್ಲಿ ಚೋಳರೂ ಪ್ರಬಲರಾದರು. ಅಂತು ೧೦ನೆಯ ಶತಮಾನವು ಜೈನ ಧರ್ಮದ ಅವನತಿ ಕಾಲವು. ಪಂಪಕವಿಯ ತಂದೆಯು ಜೈನಧರ್ಮಕ್ಕೆ ಪರಿವರ್ತಿತನಾದ್ದರಿಂದ ಅದರಲ್ಲಿ ಕವಿಯು ಅನ್ಯಾದೃಶವಾದ ಗೌರವವುಳ್ಳವನಾಗಿದ್ದರೂ ವಿಕ್ರಮಾರ್ಜುನ ವಿಜಯವನ್ನು ವೈದಿಕಧರ್ಮದ ಮಹಾಭಾರತದ ಮೂಲದಿಂದಲೇ ಬರೆದನು. ಕಥಾ ಭಾಗದಲ್ಲಿಯೂ ವಿಚಾರ ಪ್ರವಾಹದಲ್ಲಿಯೂ ವೈದಿಕ ಸಂಪ್ರದಾಯವೇ ತಲೆದೋರುತ್ತದೆ. ಆದಿಪುರಾಣದಲ್ಲಿ ಜಿನಾಗಮವನ್ನು ನಿರೂಪಿಸಿರುವನು. ಜಿನಾಗಮದಲ್ಲಿ ದೃಢವಾದ ಶ್ರದ್ಧೆಯುಳ್ಳವನು ಸಮಸ್ತ ಭಾರತದಲ್ಲಿ ವೈದಿಕ ಕಥೆಯನ್ನು ಗೌರವದಿಂದ ಹೇಳುವದೆಂದರೆ ಆ ಕಾಲದ

ಗುಣವಿಶೇಷವನ್ನು ಸೂಚಿಸುತ್ತದೆ. 'ಬೆಳಗುವೆನಿಲ್ಲಿ ಲೌಕಿಕಮನಲ್ಲಿ ಜಿನಾಗಮಮಂ ಸಮಸ್ತ ಭೂತಳಕೆ ಸಮಸ್ತ ಭಾರತಮುಮಾದಿಪುರಾಣಮುಮಂ'ದು ಪ್ರತಿಜ್ಞೆಗೈದ ಪಂಪಕವಿಯು ತನ್ನ ಕಾಲದ ಧಾರ್ಮಿಕ ಮತ್ತು ಸಾಮಾಜಿಕ ಶಕ್ತಿಗಳನ್ನು ಅಲ್ಲಗಳೆಯದೆ ಲೋಕ ಮತ್ತು ಧರ್ಮಗಳನ್ನು ಹೃದಯಂಗಮವಾಗಿ ತನ್ನ ಕೃತಿಗಳಲ್ಲಿ ಸಂಗಮಿಸಿರುವನು. ಕ್ರಿ.ಶ. ೯೬೬ರ ಪರಭಣಿ ತಾಮ್ರಶಾಸನದ ಪ್ರತಿಗ್ರಹೀತನಾದ ಸೋಮದೇವ ಸೂರಿಯ ಯಶಸ್ತಿಲಕ ಚಂಪುವಿನಿಂದ ಆ ಕಾಲದ ಧರ್ಮ ಕ್ರಾಂತಿಯಲ್ಲಿ ಜೈನ ಧರ್ಮವು ಬಾಳಿಬದುಕಲು ಪರಾಕಾಷ್ಠವಾದ ಪ್ರಯತ್ನವನ್ನು ಮಾಡುತ್ತಿತ್ತೆಂದು ಊಹಿಸಲು ಅವಕಾಶವುಂಟು. (Introduction to Peterson's Search for Manuscripts). ರಾಜಾಶ್ರಯವು ತಕ್ಕ ಮಟ್ಟಿಗಿದ್ದರೂ ಜನಾದರವೂ ದೈವಯೋಗವೂ ವಿಪರೀತವಾದ್ದರಿಂದ ಜೈನ ಸಂಪ್ರದಾಯಗಳು ಬರಬರುತ್ತ ಕುಗ್ಗಿಮುಗ್ಗಹತ್ತಿದವು. ಕಡೆಗೆ ಶೈವ–ವೈಷ್ಣವಗಳೆರಡೇ ನಡುಕರ್ನಾಟಕದ ಮುಖ್ಯ ಧರ್ಮಗಳಾಗಿ ನಿಂತವು.

ಮೇಲಿನ ಈ ಸಾಮಾನ್ಯ ವಿವೇಚನೆಯಿಂದ ಪಂಪನು ಹಳ ಹೊಸ ಯುಗಗಳ ಸಂಧಿಯಲ್ಲಿದ್ದನೆಂದು ಗೊತ್ತಾಗುತ್ತದೆ. ಇವನ ಕಾವ್ಯಗಳಲ್ಲಿ ಹಳೆಯ ವಿಚಾರಗಳು ಹೊಸ ಬೆಳಕಿನಲ್ಲಿ ಬೆಡಗಿನಿಂದ ಹೊಸ ಹೊದಿಕೆಯಲ್ಲಿ ರೂಪುಗೊಂಡಿವೆ. ಭಾಷಾದೃಷ್ಟಿಯಿಂದ ಅಷ್ಟೊಂದು ತುಲನೆಗೆ ಅವಕಾಶವಿಲ್ಲದಿದ್ದರೂ 'ಕವಿರಾಜಮಾರ್ಗ'ದ ಮತ್ತು ಹಳೆಯ ಶಾಸನಗಳ ಭಾಷೆಗೆ ತುಲನೆಮಾಡಿ ನೋಡಿದರೆ ಈ ಊಹೆಯು ಬಲಗೊಳ್ಳುತ್ತದೆ. ಕ್ರಿ.ಶ. ೬೬೦ರ ವರೆಗೆ ಒಂದುಕಾಲ, ಅಲ್ಲಿಂದ ೮೮೦–೯೦೦ರ ವರೆಗೆ ಒಂದು ಎಂದು ಹಳೆಯ ಭಾಷೆಯಲ್ಲಿ ಸ್ಥೂಲವಾಗಿ ಎರಡು ಅವಸ್ಥೆಗಳನ್ನು ಕಲ್ಪಿಸಬಹುದು. ಅಮೋಘ ವರ್ಷನ ರಾಜ್ಯಾನಂತರ ದೇಶಧ ಸಂಪ್ರದಾಯಗಳಲ್ಲಿಯೂ ಭಾಷೆಯ ಸ್ವರೂಪದಲ್ಲಿಯೂ ಅನ್ಯದೇಶೀಯ ಭಾಷೆ ಸಂಪ್ರದಾಯಗಳ ಸಂಸರ್ಗದಿಂದ ಹೊಸಕಳೆ ತೋರಹತ್ತಿದ್ದರಿಂದ ಪಂಪನ ಭಾಷೆಯಲ್ಲಿ ಈ ವೈಲಕ್ಷಣ್ಯವನ್ನು ಕಾಣಬಹುದು. ಕನ್ನಡದಲ್ಲಿ ಚಂಪೂ ಶೈಲಿಯು ಹೆಚ್ಚು ಪ್ರಚಾರಕ್ಕೆ ಬಂದುದು ಪಂಪನಿಂದಲೇ. ಗದ್ಯಪದ್ಯ ಮಿಶ್ರವಾದ ಹಳೆಯ ಶಾಸನಗಳು ಉಪಲಬ್ಧವಿದ್ದರೂ ಅವುಗಳಲ್ಲಿ ಚಂಪೂ ಶೈಲಿಯು ವಿವಕ್ಷಿತವಾಗಿತ್ತೆಂದು ಹೇಳಲಿಕ್ಕೆ ಬರುವದಿಲ್ಲ. ಸಂಸ್ಕೃತದಲ್ಲಿ ಬಹು ಪ್ರಾಚೀನ ಕಾಲದಿಂದಲೂ ಈ ಶೈಲಿ ರೂಢವಾಗಿತ್ತೆಂದು ಬ್ರಾಹ್ಮಣಗಳು, ಭಾಗವತ ಐದನೆಯಸ್ಕಂಧ, ಹಳೆಯ ಪ್ರಾಕೃತ ಶಾಸನಗಳು, ದಂಡಿಯ ಕಾವ್ಯಾದರ್ಶ ಇತ್ಯಾದಿ ಪ್ರಮಾಣಗಳಿಂದ ನಿರ್ಧರಿಸಬಹುದು. ಕಾವ್ಯಾದರ್ಶದಲ್ಲಿ ಬರುವ ಚಂಪೂ ಲಕ್ಷಣವು ಕನ್ನಡ ಕಾವ್ಯಗಳಿಗೇ ಅನ್ವಯಿಸುತ್ತದೆಂದು ಹೇಳಲಿಕ್ಕೆ ಸಾಕಷ್ಟು ಆಧಾರ ಗಳಿಲ್ಲ. ಸಂಸ್ಕೃತ ವಾಙ್ಮಯದಿಂದ ಚಂಪೂ ಶೈಲಿಯನ್ನು ಕನ್ನಡಕ್ಕೆ ಹೊಂದುವಂತೆ ಅನುಕರಿಸಿದವರಲ್ಲಿ ಪಂಪನೇ ಅಗ್ರಗಣ್ಯನು. ತನ್ನ ಪೋಷಕನ ಚರಿತ್ರವನ್ನು ಪೌರಾಣಿಕ ವಿಭೂತಿ ವ್ಯಕ್ತಿಗಳ ಪರಾಕ್ರಮಗಳೊಡನೆ ಹೊಂದಿಕೆಯಿಂದ ವಿವರಿಸಿದ ಕನ್ನಡ ಕವಿಗಳಲ್ಲಿ ಪಂಪನೇ[೧] ಆದ್ಯಕವಿ. ಪೊನ್ನ, ರನ್ನರು ಇವನ ಹೆಜ್ಜೆಯಲ್ಲಿ ತಮ್ಮ ಗ್ರಂಥಗಳನ್ನು ರಚಿಸಿದರು.

---

೧. ಪಂಪನ ಹಿಂದೆ ಶ್ರೀವಿಜಯ, ೧ನೆಯ ಗುಣವರ್ಮರು ಚಂಪೂಶೈಲಿಯಲ್ಲಿ ಕಾವ್ಯಗಳನ್ನು ರಚಿಸಿದ್ದರೆಂದು ಪ್ರತೀತಿಯಿದೆ. ಆದರೆ ಚಂಪೂಶೈಲಿಯಲ್ಲಿ ಚಂದ್ರಪ್ರಭ ಪುರಾಣವನ್ನು ಬರೆದ ಶ್ರೀವಿಜಯ ಅಥವಾ ವಿಜಯಕವೀಂದ್ರನು, ಕವಿರಾಜಮಾರ್ಗದಲ್ಲಿ ಪದ್ಯಗ್ರಂಥಕರ್ತೃಗಳಲ್ಲಿ ನಿರ್ದಿಷ್ಟನಾದ ಶ್ರೀವಿಜಯನೇ ಎಂಬಲ್ಲಿ ನಿರ್ಧಾರಕ ಪ್ರಮಾಣಗಳು ಇಲ್ಲ. ಇವನು ಚಂಪೂಪ್ರಬಂಧ ಕರ್ತನಾಗಿದ್ದರೆ, ಬರಿ ಪದ್ಯ ಗ್ರಂಥಕರ್ತೃವೆಂದು

ಅಂತು ಪಂಪನ ಕಾಲವು ಧರ್ಮ–ರಾಜಕಾರಣಗಳಲ್ಲಿ ಕ್ರಾಂತಿಯನ್ನುಂಟುಮಾಡುವ ಸಂಧಿಕಾಲವು. ಮಾಂಡಲಿಕ ರಾಜರು ಅರಸೊತ್ತಿಗೆಗೆ ಹೆಣಗಾಡುವ ಸಮಯವು. ಜೈನ-ವೈದಿಕ ಧರ್ಮಗಳು ವೈರಭಾವವಿಲ್ಲದೆ ಹೃದಯಂಗಮವಾಗಿ ಹೊಂದಿಕೊಳ್ಳುವ ಯುಗವು. ಇವೆಲ್ಲ ಯುಗಧರ್ಮಗಳು ಆ ಕಾಲದ ವಾಸ್ತು ಶಿಲ್ಪದಲ್ಲಿಯೂ ಕಲಾಕೃತಿಗಳಲ್ಲಿಯೂ ವಾಙ್ಮಯದಲ್ಲಿಯೂ ರೂಪುಗೊಂಡಿವೆ. ಈ ಅಂಶವನ್ನು ತೀರ ಸಂಕ್ಷೇಪವಾಗಿ ಮೇಲೆ ವಿವರಿಸಿದ್ದೇವೆ. ಭಾಷೆ, ಶೈಲಿ, ಅಲಂಕಾರ ನಿರೂಪಣೆ, ರಸಭಾವಾವಿಷ್ಕರಣ, ವಿಷಯ ಪ್ರತಿಪಾದನೆಯ ಕ್ರಮ, ಪ್ರಬಂಧಗಳ ವಿಷಯದ ಸ್ವರೂಪ ಇವೆಲ್ಲವುಗಳಲ್ಲಿ ಹೊಸ ಮಾದರಿಯನ್ನು ಬಳಕೆಯಲ್ಲಿ ತಂದ ಕಾಲವಿದು. ವಿಷಯಗಳನ್ನು ಪ್ರಸಂಗಾನುಸಾರ ವಿಸ್ತಾರವಾಗಿ ವಿವೇಚಿಸಲಾಗುವದು.

ಪಂಪನ ಮತ್ತು ಅವನ ಪೋಷಕನಾದ ಅರಿಕೇಸರಿಯ ವಂಶಾವಳಿಗಳನ್ನೂ ಅವರ ವಾಸಸ್ಥಾನ ಕಾಲಮಾನಗಳನ್ನೂ ತೋರಿಸುವ ಭೂಭಾಗದ ನಕ್ಷೆಯನ್ನೂ ವಾಚಕರ ಸುಲಭಾವಗಾಹನೆಗೆ ಇದರಡಿ ಕೊಟ್ಟಿದ್ದೇವೆ.

ಆರ್. ಎಸ್. ಪಂಚಮುಖಿ

ವಿ. ಸೂ.—ಈ ಲೇಖದ ಮತ್ತು ನಕ್ಷೆಯ ಎಲ್ಲ ಅಧಿಕಾರಗಳನ್ನು ಲೇಖಕರು ಕಾದುಕೊಂಡಿದ್ದಾರೆ.

---

ಕವಿರಾಜಮಾರ್ಗವು ಹೇಳುತ್ತಿರಲಿಲ್ಲವೆಂಬ ಶಂಕೆಗೆ ಅವಕಾಶವುಂಟು. ೧ನೆಯ ಗುಣವರ್ಮನ (ಸು. ಕ್ರಿ.ಶ. ೯೦೦) 'ಶೂದ್ರಕ' ಮತ್ತು 'ಹರಿವಂಶ' ಗಳು ಉಪಲಬ್ಧವಿಲ್ಲ. ಅವು ಚಂಪೂಶೈಲಿಯಲ್ಲಿ ರಚಿಸಲ್ಪಟ್ಟವೆಯೆಂಬ ತಿಳಿಯಲು ಪ್ರಬಲ ಆಧಾರಗಳೂ ಇಲ್ಲ. (ಅಭಿನವವಾದಿ ವಿದ್ಯಾನಂದನ 'ಕಾವ್ಯಸಾರ' ದಲ್ಲಿ 'ಶೂದ್ರಕ' ದಿಂದೆಂದು ಪದ್ಯಗಳನ್ನೂ ಗದ್ಯಭಾಗಗಳನ್ನೂ ಉದ್ಧರಿಸಿ ಬರೆದಿರುವುದು ಶೂದ್ರಕ ಚಂಪೂಗ್ರಂಥವೆಂದು ಸೂಚಿಸಲಿಕ್ಕೆ ಸಾಕು–ಸಂ). ಈ ಸಂದರ್ಭದಲ್ಲಿ ಆದಿಪಂಪನೇ ಚಂಪೂಶೈಲಿಯನ್ನು ಕನ್ನಡದಲ್ಲಿ ಹೆಚ್ಚು ಪ್ರಚಾರಕ್ಕೆ ತಂದನೆಂದು ತಿಳಿದಿದ್ದೇವೆ.

ಗುಣವರ್ಮನ ಶೂದ್ರಕ ಗ್ರಂಥವು ಪೂರ್ತಿ, ಕವಿಯ ಪೋಷಕನಾದ ಗಂಗಎರೆಯಪ್ಪನನ್ನು ಶೂದ್ರಕನಿಗೆ ಹೋಲಿಸುತ್ತದೆಯೋ ಕೆಲವು ಪದಗಳಲ್ಲಿ ಮಾತ್ರ ಆ ಹೋಲಿಕೆಯುಂಟೋ ಎಂಬುದನ್ನು ಆ ಗ್ರಂಥವು ದೊರೆಯುವವರೆಗೆ ಹೇಳಲಿಕ್ಕಾಗದು. ಪೂರ್ತಿಯಾಗಿ ಅಲ್ಲಿ ಆ ಹೋಲಿಕೆ ಇದ್ದರೆ ಪಂಪನು ೧ನೆಯ ಗುಣವರ್ಮನನ್ನು ಅನುಸರಿಸಿದನೆಂಬು ತಿಳಿಯಬಹುದು. ಏನೇ ಇರಲಿ, ಪಂಪನು ಉದಯ ಹೊಂದಿದ ಮೇಲೆ ಹಿಂದಣ ಕವಿಗಳು ಬೆಳಕಿಗೆ ಬಾರದೆ ಹೋದದ್ದರಿಂದ, ಇದುವರೆಗೆ ಅವಿಚ್ಛಿನ್ನವಾಗಿ ಕನ್ನಡ ವಾಙ್ಮಯದಲ್ಲಿ ಮೆರೆಯುತ್ತಿದ್ದ ಪಂಪನೇ ಈ ಸಂಪ್ರದಾಯಗಳಿಗೆ ಮುಖ್ಯ ಪ್ರವರ್ತಕನಾದನೆಂಬು ತಿಳಿಯಲು ಅಭ್ಯಂತರವಿಲ್ಲ.

## ೧. ಅರಿಕೇಸರಿಯ ವಂಶಾವಳಿ

ಆಧಾರಗಳು :—
೧. ಕೊಲ್ಲಿಪಾರಾ ದಾನಪತ್ರ
೨. ವೇಮುಲವಾಡ ಶಿಲಾಶಾಸನ
೩. ಪಂಪನ ವಿಕ್ರಮಾರ್ಜುನ ವಿಜಯ
೪. ಪರಭಣಿ ತಾಮ್ರಶಾಸನ
೫. ಸೋಮದೇವನ 'ಯಶಸ್ತಿಲಕ'

ಚಾಳುಕ್ಯವಂಶ: ಆದರಲ್ಲಿ
ಸತ್ಯಾಶ್ರಯ: ಪುಲಿಕೇಶಿ (೧)
|
ಪೃಥಿವೀಪತಿ: ಕೀರ್ತಿವರ್ಮ (೧)
|
ಮಹಾರಾಜ: ಪುಲಿಕೇಶಿ (೨)
|
ಪೃಥುವಿಕ್ರಮ ರಾಜಾದಿತ್ಯ: ವಿಕ್ರಮಾದಿತ್ಯ (೧)
|
ವಿನಯಾದಿತ್ಯ, ಯುದ್ಧಮಲ್ಲ, ಶ್ರೀರಾಮ, ನೃಪಾಂಕುಶ, ರಾಜಾಶ್ರಯ (ಕ್ರಿ.ಶ. ೬೮೧–೬೯೬)
|
೧ನೆಯ ಅರಿಕೇಸರಿ: ಸಮಸ್ತ ಲೋಕಾಶ್ರಯ (ಸು. ೭೭೦) (ದೀರ್ಘಕಾಲ ಬಾಳಿದನು) ತ್ರಿಭುವನಮಲ್ಲ, ರಾಜತ್ರಿಣೇತ್ರ, ಸಾಹಸರಾಮ.
|
೧ನೆಯ ನರಸಿಂಹ — ಭದ್ರದೇವ

೧ನೆಯ ನರಸಿಂಹ
|
೨ನೆಯ ಯುದ್ಧಮಲ್ಲ
|
ಬದ್ದಿಗ
|
೩ನೆಯ ಯುದ್ಧಮಲ್ಲ
|
೨ನೆಯ ನರಸಿಂಹ (ನರಗ)
|
೨ನೆಯ ಅರಿಕೇಸರಿ (ಕ್ರಿ. ಶ್ರ. ೯೧೮, ೯೩೭, ೯೪೯) (ಪಂಪನ ಪೋಷಕ)
|
೩ನೆಯ ಭದ್ರದೇವ
|
೩ನೆಯ ಅರಿಕೇಸರಿ (ರಾಷ್ಟ್ರಕೂಟ ೩ನೆಯ ಕೃಷ್ಣರಾಜನ ಮಾಂಡಲಿಕ) ಕ್ರಿ. ಶ. ೯೬೬.

ಟಿಪ್ಪಣಿ :—

೧. ವೇಮುಲವಾಡ ಶಾಸನದಲ್ಲಿ ಬದ್ದಿಗ, ೩ನೆಯ ಯುದ್ಧಮಲ್ಲರ ಹೆಸರು ಬಿಟ್ಟುಹೋಗಿವೆ.

೨. ಪರಭಣಿ ಶಾಸನದಲ್ಲಿ ಸೂರ್ಯವಂಶ ('ಆದಿತ್ಯಭವೋ–ವಂಶಃ') ದಿಂದ ಚಾಳುಕ್ಯವಂಶ ಹುಟ್ಟಿತೆಂದು ಬರೆದಿದೆ. ಕೊಲ್ಲಿಪಾರಾ ಶಾಸನದಲ್ಲಿ ೧ನೆಯ ಯುದ್ಧಮಲ್ಲನ ಚಳುಕ್ಯವಂಶವು ಕ್ರೋಡರೂಪಿ ವಿಷ್ಣುವಿನ ಪ್ರಸಾದದಿಂದ ಧರಾಮಂಡಲವನ್ನು ಪಡೆಯಿತೆಂದು ಹೇಳಿದೆ. ಬಾದಾಮಿ ಚಾಲುಕ್ಯ ವಂಶವೇ ಇದಾಗಿರಬೇಕೆಂಬಲ್ಲಿ ಸಂಶಯವಿಲ್ಲ.

೩. ವಿಕ್ರಮಾರ್ಜುನ ವಿಜಯ, ಪರಭಣಿ ಶಾಸನಗಳ ವಂಶವೃಕ್ಷವು ಒಂದೇ ಆಗಿವೆ. ವಿ. ವಿಜಯವು ೨ನೆಯ ಅರಿಕೇಸರಿಗೆ ನಿಲ್ಲುತ್ತದೆ.

## ೨. ಪಂಪನ ವಂಶಾವಳಿ

ಆಧಾರ :—ವಿಕ್ರಮಾರ್ಜುನ ವಿಜಯ. ಆಶ್ವಾಸ ೧೪, ೪೦–೫೦. ಬೆಂಗಿಮಂಡಲದೊಳ್ ವೆಂಗಿಪಟು: ಅಲ್ಲಿ

ಮಾಧವ ಸೋಮಯಾಜಿ

|

ಅಭಿಮಾನಚಂದ್ರ

|

ಕೊಮರಯ್ಯ ('ವೇದವೇದಾಂಗ ಸಮುದ್ಯೋತಿತಮತಿಯುತ)

|

ಅಭಿರಾಮದೇವರಾಯ (ಜಿನೇಂದ್ರ ಧರ್ಮವನ್ನು ಸ್ವೀಕರಿಸಿದನು)

|

ಪಂಪ ('ಚತುರಂಗಬಳ ಭಯಂಕರಣ')
ರಾಜನಿಂದ ಬಜ್ಜೆ ಸಾಸಿರದ ಧರ್ಮಪುರವನ್ನು
(ಸಾರ ಎಂಬ ಹೆಸರಿನಿಂದ) ತನ್ನ. ಕಾವ್ಯಕ್ಕೆ ಮೆಚ್ಚುಗೆ
ಯಾಗಿ ಪಡೆದನು.

## ೩. ಚಾಲುಕ್ಯ ಮನೆತನದ ಅರಿಕೇಸರಿಯ ರಾಜ್ಯವನ್ನು ತೋರಿಸುವ ನಕ್ಷೆ



# ಕಾರಿಕಾಲಮ್ಮೆ

ನೇರಿತಹ ಶರಣ ಸಂಚಾರ ಮಾರ್ಗದೊಳು ಸುವಿ ।
ಚಾರದಿಂದಡಿಯ ನಿಡದೆ ತಲೆಯೊಳು ನಡೆದ ।
ಕಾರಿಕಾಲಮ್ಮೆ ಪೊರೆಯೆನ್ನ ॥
[ಶ್ರೀ ನಿಜಗುಣ ಶಿವಯೋಗಿಯ ಪುರಾತನ ತ್ರಿವಿಧಿ ೭೨]

ಕಾರಿಕಾಲಮ್ಮೆಯು ಅರವತ್ತುಮೂರು ಶೈವ ಪುರಾತನರಲ್ಲಿ ಪ್ರಸಿದ್ಧಳಾದ ಶಿವಭಕ್ತೆ. ಪೆರಿಯ ಪುರಾಣವೆಂಬ ತಮಿಳು ಗ್ರಂಥಹನ್ನು ಶೆಕ್ಕಿಳಾರ್ ಎಂಬ ಕವಿಯು ರಚಿಸಿರುವನು. ಅದರಲ್ಲಿ ಅರವತ್ತುಮೂರು ಪುರಾತನರ ಚರಿತ್ರೆಯು ವಿವರವಾಗಿ ಹೇಳಿದೆ. ಈ ಪ್ರಸಿದ್ಧ ಕವಿಗೆ ಆಶ್ರಯದಾತನಾದ ಮಹಾಶಿವಭಕ್ತನಾದ ಇಮ್ಮಡಿ ಕುಲೋತ್ತುಂಗನು ಕ್ರಿ.ಶ. ೧೧೩೩ರಿಂದ ೧೧೫೦ರ ವರೆಗೆ ರಾಜ್ಯಭಾರ ಮಾಡಿದನು. ಈ ಪುರಾತನರ ಕಥೆಗಳು ಸಂಸ್ಕೃತದ ಸ್ಕಾಂದಪುರಾಣ, ಶಿವರಹಸ್ಯ ಎಂಬ ಗ್ರಂಥಗಳಲ್ಲಿಯೂ ಉಕ್ತವಾಗಿರುವುವು. ಸಂಸ್ಕೃತದಲ್ಲಿ ಈ ಭಕ್ತೆಯನ್ನು ಪುನೀತವತಿ ಎಂದು ಕರೆದಿದೆ. ಶರಣರು ಸಂಚರಿಸಿದ ಪವಿತ್ರವಾದ ಹೆಜ್ಜೆಗುರುತುಗಳುಳ್ಳ ಮಾರ್ಗದಲ್ಲಿ ತಾನು ನಡೆದು ಅಪವಿತ್ರ ಮಾಡಬಾರದೆಂದು ತಲೆಕೆಳಗಾಗಿ ನಡೆಯುತ್ತಾ ಮೋಕ್ಷವನ್ನು ಸಾಧಿಸಿದಳು ಎಂದು ಶ್ರೀ ನಿಜಗುಣ ಶಿವ ಯೋಗಿಯು ಒಂದೇ ಪದ್ಯದಲ್ಲಿ ಕಾರಿಕಾಲಮ್ಮೆಯ ಜೀವನ ರಹಸ್ಯವನ್ನು ವಿವರಿಸಿರುವನು. ಹರಿಹರ ಕವಿಯು ಕನ್ನಡದಲ್ಲಿ ಪುರಾತನರ ಕತೆಗಳನ್ನು ರಗಳೆಯಲ್ಲಿ ರಚಿಸಿರುವನು. ಹರಿಹರನು ಬರೆದ ಕಾರಿಕಾಲಮ್ಮೆ ಕತೆಯ ಸಾರಾಂಶ ಈ ಕೆಳಗೆ ಸಂಕ್ಷೇಪವಾಗಿ ಹೇಳಿಡೆ.

ಚೋಳದೇಶದ ಕಾರಿಕಾಲೆಂಬ ಶಿವಪುರದಲ್ಲಿ ಕಾರಿಕಾಲಮ್ಮೆ ಎಂಬ ಶಿವಜ್ಞಾನ ಸಂಪನ್ನೆಯಾದ ಭಕ್ತಳಿದ್ದಳು. ಅವಳ ಪತಿ ಧನದ ಮಾಣಿಕಶೆಟ್ಟಿ; ಕುಬೇರನನ್ನೂ ಮೀರಿದ ಐಶ್ವರ್ಯವಂತ. ಸತಿಪತಿಯರು ಸುಖವಾಗಿದ್ದರು. ಕಾರಿಕಾಲಮ್ಮೆ ಭಕ್ತೆ ಎಂಬುದನ್ನು ಯಾರೂ ಅರಿಯರು. ಅತ್ತೆ, ಮಾವ, ಗಂಡ ಮೊದಲಾದವರಿಗೂ ತಿಳಿಯದಂತೆ ತನ್ನ ಸರ್ವವನ್ನೂ ಶಿವನಿಗರ್ಪಿಸಿ ಶಿವನನ್ನು ಪೂಜಿಸುತ್ತಿದ್ದಳು. ಈ ಗುಪ್ತ ಆರಾಧನೆಯು ಶಿವನಿಗಲ್ಲದೆ ಮತ್ತಾರಿಗೂ ತಿಳಿಯದು. ಶಿವನು ಭಕ್ತೆ ಎಂಬುದನ್ನು ಸಕಲ ಲೋಕಕ್ಕೂ ತಿಳಿಸಲೋಸುಗ ಸಾಧುವೇಷವನ್ನು ಧರಿಸಿ ಇಳೆಗೆ ಬಂದು ಮಾಣಿಕಶೆಟ್ಟಿಯನ್ನು ಕಂಡು ಅವನಿಗೆ ಎರಡು ಮಾವಿನ ಹಣ್ಣುಗಳನ್ನು ಕಾಣಿಕೆಯಾಗಿ ಅರ್ಪಿಸಿದನು. ಧನದನು ಆ ಹಣ್ಣುಗಳನ್ನು ನೋಡಿ ಸಂತೋಷಪಟ್ಟು ಅವುಗಳನ್ನು ತಂದು ತನ್ನ ಸತಿಯ ಕೈಗೆ ಕೊಟ್ಟು ಸುರಕ್ಷಿತವಾಗಿ ಬಚ್ಚಿಡುವಂತೆ ಹೇಳಿ ತಾನು ವ್ಯಾಪಾರ ಉದ್ಯೋಗಗಳನ್ನು ಮಾಡಲು ಹೊರಟುಹೋದನು.

ಅಮ್ಮೆಯು ಅಪೂರ್ವ ಫಲಗಳನ್ನು ನೋಡಿ ಅವು ಶಿವನಿಗರ್ಪಿಸಲು ಯೋಗ್ಯವಾದವು, ಶಿವಭಕ್ತರಿಗೆ ನೀಡಲು ಯೋಗ್ಯವಾದವು ಎಂದುಕೊಳ್ಳುತ್ತಾ ಬಚ್ಚಿಟ್ಟು ಎಂದಿನಂತೆ ನಿತ್ಯನೇಮಗಳನ್ನು ಮಾಡುತ್ತಾ ಶಿವಾರ್ಚನೆಮಾಡಿ, ಅಡಿಗೆಮಾಡಿ ಊಟಕ್ಕೆ ಅನುಕೂಲ ಪಡಿಸುತ್ತಿದ್ದಳು. ಆ ವೇಳೆಗೆ ಶಿವನು ತಪಸ್ವಿಯ ರೂಪದಲ್ಲಿ ಕಾಣಿಸಿಕೊಂಡನು. ಕಾರಿಕಾಲಮ್ಮೆಯು ಅವನನ್ನು ಕಂಡು "ಇಲ್ಲಿಗೆ ಹೇಗೆ ಬಂದೆ; ಭವಿಗಳ ಮನೆಗೆ ಏಕೆ ಬಂದೆ"

ಎಂದು ಪ್ರಶ್ನಿಸಿದಳು. ಭಕ್ತೆ ಎಂಬುದು ತನಗೆ ಗೊತ್ತು ಎಂದರೆ ತನ್ನ ನಿಜತ್ವವನ್ನರಿತು ಎಲ್ಲಿ ಕಂಡುವಳೋ ಎಂದು ಯುಕ್ತಿಯಿಂದ "ಭಕ್ತರು, ಭವಿಗಳು ಎಂಬುದನ್ನರಿಯೆವು; ಸ್ವಲ್ಪ ಊಟಕ್ಕಿಟ್ಟರೆ ಉಂಡು ಹೋಗುವೆನು" ಎಂದು ಶಿವನು ಉತ್ತರವಿತ್ತನು. ಕಾರಿಕಾಲಮ್ಮೆಯು ಭಕ್ತಿಯಿಂದ ಆರೋಗಣೆಯನ್ನಿಕ್ಕಿ ಎರಡರಲ್ಲಿ ಒಂದು ಫಲವನ್ನು ಅರ್ಪಿಸಿದಳು. ಮಾಯದ ತಪಸ್ವಿಯು ಆರೋಗಿಸುತ್ತಿರಲು ಮಾಣಿಕಶೆಟ್ಟಿಯು ಮನೆಗೆ ಬಂದನು. ಶಿವನು ನುಸುಳಿ ಕೊಂಡು ಹೊರಗೆ ಹೋದನು. ಶೆಟ್ಟಿಗೆ ಸಂದೇಹವಾಯಿತು.

ಮಾಣಿಕಶೆಟ್ಟಿಯು ಊಟಮಾಡುತ್ತಿರುವಾಗ ಹಣ್ಣನ್ನು ಬಡಿಸು ಎಂದನು. ಸತಿಯು ಒಂದು ಹಣ್ಣನ್ನು ಮಾತ್ರ ತಂದಿಟ್ಟಳು. ಸಂದೇಹದಿಂದ ಇನ್ನೊಂದು ಹಣ್ಣನ್ನು ತರುವಂತೆ ಪತಿಯು ಹೇಳಲು ಸತಿಯು ಭಯದಿಂದ ನಡುಗಿ, ಶಿವಧ್ಯಾನ ಮಾಡಲು ಶಿವನು ಒಲಿದು ಸತಿಯ ಕೈಯೊಳಗೆ ಒಂದು ಫಲವನ್ನಿರಿಸಿದನು. ಹರ್ಷಗೊಂಡ ಸತಿಯು ಆ ಫಲ ವನ್ನು ಪತಿಯ ಎಡೆಯೊತ್ತಿನಲ್ಲಿಟ್ಟಳು. ಮಾಣಿಕ್ಯಶೆಟ್ಟಿಯು ಹಣ್ಣಿನ ಸವಿಯನ್ನು ನೋಡಿ ಪರಮಾಶ್ಚರ್ಯದಿಂದ "ಈ ಫಲ ಎಲ್ಲಿಯದು" ಎಂದು ಕೇಳಿದನು. ಸತಿಯು ನಿಜವನ್ನು ಹೇಳಲಾರಳು; ಹೇಳಿದಿರಲಾರಳು; ಕೊನೆಗೆ

ಹರಭಕ್ತನೊರ್ವನಾನಂದದಿಂ ಬರಲ್
ಹರುಷದಿಂದೊಂದು ಹಣ್ಣ ಕೊಟ್ಟೆನಿಂತಿರಲ್
ನೀವೀಗಳು ಹಣ್ಣ
ದೇವನಿರಿಸಿದನಮೃತ ಫಲವನೊಂಡಂನೋಡೆ

ಆ ಹಣ್ಣಿದು ಎಂದು ಸತಿಯು ಹೇಳಿದಳು. ಮಾಣಿಕ್ಯಶೆಟ್ಟಿಯು ನಡುಗಿ ಸತಿ ಎಂಬ ಭಾವವನ್ನು ಬಿಟ್ಟು "ತಾಯೆ ಇನ್ನು ಮುಂದೆ ನೀವೇ ನನಗೆ ಗುರುಸ್ಥಳ ಉಪದೇಶವನ್ನು ಕರುಣಿಸುವುದು; ಈ ಹಣ್ಣನ್ನು ನಿಮಗೆ ಅರ್ಪಿಸಿದ್ದೇನೆ ಕಾಯುವುದು" ಎಂದು ಹೇಳಿ ಮೈಯ್ಯಿಕ್ಕಿದನು. ಕಾರಿಕಾಲಮ್ಮೆಯು ಮುಂದಿದ್ದ ಶೆಟ್ಟಿಗೆ ಉಪದೇಶವನ್ನು ಮಾಡಿ, ದೇವ ನಿತ್ತ ಫಲವನ್ನು ಪ್ರಸಾದವಾಗಿ ಕೊಟ್ಟು, ಭಸಿತವನ್ನು ಪೂಸಿ ರುದ್ರಾಕ್ಷಿಯನ್ನು ಧರಿಸಿ ಮೃಡನೆ ಶರಣೆಂದು ನೆನೆಯುತ್ತಾ ಉತ್ತರಾಭಿಮುಖವಾಗಿ ಕೈಲಾಸಪುರವನ್ನರಸಿ ಹೊರಟಳು.

ಬಂಧು ಬಾಂಧವರು ಕೆಲವು ದೂರ ಬಂದು ಹಿಂದೆ ನಿಂತರು. ಮುಂದೆ ಹೋಗು ತ್ತಿರುವಾಗ, ಪುರಜನರೂ ಪರಿಜನರೂ ಬಂದು ದರ್ಶನ ಪಡೆಯುತ್ತಿದ್ದರು. ಭಕ್ತೆಯ ಯೌವನ ರೂಪು ಲಾವಣ್ಯವು ಪುಣ್ಯಜೀವಿಗಳಿಗೆ ತಾಯಿಯಂತೆಯೂ ಪಾಪಿಗಳಿಗೆ ಸಿಂಗರದಂತೆಯೂ ತೋರಿತು. ಆಕೆಯ ರೂಪಿಗೆ ಮರುಳಾದ ಬಹುಜನರು ಬೆಂಬಿಡದೆ ಬರಲು, ಮನದಲ್ಲಿ ನೊಂದು "ಎಲೆ ಮರುಳರಿರಾ! ನಿಮ್ಮಲ್ಲಿ ಸುವಿಚಾರವಿಲ್ಲವಲ್ಲ! ಅಕ್ಕಟಾ! ನನ್ನ ದೇಹದ ಒಳಗೂ ಹೊರಗೂ ನೋಡಿ; ಈ ರೂಪವೆಲ್ಲಾ ಹೇಯ" ಎಂದು ಹೇಳಿದರೂ ಬಿಡದೆ ಹಿಂಬಾಲಿಸುತ್ತಿರಲು, ಹರನನ್ನು ಧ್ಯಾನಿಸಿ ಮೂರ್ಖಜನದ ಭಯದಿಂದ

ಸ್ಥೂಲ ತನುವಂ ಬಿಟ್ಟು ಸೂಕ್ಷ್ಮ ತನುವಿಂ ನಿಲಲು
ಕೇಳು ಭೃಂಗೀಶನೊದರಿದ ಆಂದದೊಳ್ನಿಲಲು
ಕಣ್ಣುಳಿಯೆ ಮೆಯ್ಯಲವೆಲುವಾಗಿ ನಿಲಲಲ್ಲಿ
ಬಣ್ಣವಳಿಯಲ್ನೋಡುತೆಲ್ಲ ಲಘುಜನವಲ್ಲಿ
ಮರುಳೋ ಪಿಶಾಚಿಯೋ ಓಡೋಡೆನುತ್ತಲ್ಲಿ
ಮರಳಿ ನೋಡಲಮ್ಮದೆ ಯೋಚಿತ್ತು ಜನವಲ್ಲಿ

ಈ ರೀತಿ ಹಿಂಬಾಲಕರು ಓಡಿಹೋಗಲು ಹರುಷದಿಂದ ಹಾಡುತ್ತಾ, ಸಂತೋಷದಿಂದ ಮುಂದೆ ನಡೆದು ಕಾಂಚಿ ನಗರದ ಉತ್ತರ ದಿಕ್ಕಿನಲ್ಲಿದ್ದ ತಿರುವಾನ ಕಾನನವನ್ನು ಸೇರಿ, ಶಿವನನ್ನು ಧ್ಯಾನಿಸಿ, "ನಿನ್ನ ನಾಟ್ಯಮಂ ತೋರೆನಗೆ" ಎಂದು ಪ್ರಾರ್ಥಿಸಲು ಕಾರಿಕಾಲಮ್ಮೆಯ ಭಕ್ತಿಗೆ ಸುಪ್ರೀತನಾದ ಶಿವನು ನಾಟ್ಯವಾಡಿದನು. ಅಮ್ಮೆಯೂ ಅದನ್ನು ಕಂಡು ಹರ್ಷಿಸಿ ತಾನೂ ಕುಣಿದಾಡಿದಳು. ಮೃಡನು ಹರ್ಷಿಸಿ ಕೈಲಾಸಪುರಕ್ಕೆ ಬಾ ತಾಯಿ ಎಂದು ಹೇಳಿ ಲಿಂಗದಲ್ಲಿ ಅದೃಶ್ಯನಾದನು.

ಕಾರಿಕಾಲಮ್ಮೆಯು ಮುಂದಕ್ಕೆ ನಡೆಯಲು ಶರಣರೆಲ್ಲಾ ನಡೆದ ಹಾದಿಯ ಹೆಜ್ಜೆಯನ್ನೂ ಶಿವನು ಆಗತಾನೇ ನಡೆದ ಹೊಸ ಹೆಜ್ಜೆಯನ್ನೂ ಕಂಡು ಆ ಹೆಜ್ಜೆಗಳು ತನ್ನ ಶಿರದ ಮೇಲಿರಲೆಂದು ತಲೆಯಡಿಯಾಗಿ ನಡೆದು ಕೈಲಾಸಪುರವನ್ನು ಸೇರಿ ಗಣ ಪದವಿಯನ್ನು ಹೊಂದಿದಳು.

ಸಕಲ ಜನಂ ಕಾಣುತೆ ಕೌ
ತುಕಮೆನಲಾ ಕಾರಿಕಾಲೊಳಿಪ್ಪಮ್ಮೆಯರಂ ।
ಸುಕರಮೆನೆ ಮೆರೆದನಾಸಂ ।
ದಕರಂ ಕರುಣಾಬ್ಧಿ ಹಂಪೆಯ ವಿರೂಪಾಕ್ಷಂ ॥

ತಮಿಳು ಭಾಷೆಯಲ್ಲಿ ಕಾರಿಕಾಲಮ್ಮೈ ಎಂಬ ಮಾತಿನ ಚಿತ್ರಪಟವೊಂದು ತಯಾರಾಗಿದೆ. ಅದರ ಕಥಾಸಾರಾಂಶ ಏನೆಂದರೆ :—

ಕಾರಿಕಾಲ ಎಂಬ ಅಗ್ರಹಾರದ ಧನದತ್ತನೆಂಬ ಶೆಟ್ಟಿಗೆ ಪುನೀತವತಿ ಎಂಬ ಮಗಳಾದಳು. ಇನ್ನೂ ಚಿಕ್ಕವಳಾಗಿರುವಾಗಲೆ ಪರಶಿವನು ಬಂಡಿಕಾರನಾಗಿ ಬಂದು ಸ್ಫಟಿಕಲಿಂಗವನ್ನು ಕೊಟ್ಟು ಜ್ಞಾನೋಪದೇಶ ಮಾಡಿದನು. ಪ್ರಾಪ್ತವಯಸ್ಕಳಾದ ಮೇಲೆ ನಾಗಪಟ್ಟಣದ ನಿಧಿಪತಿ ಶೆಟ್ಟಿಯ ಮಗ ಪರಮದತ್ತನನ್ನು ವಿವಾಹವಾದಳು. ಸತಿಪತಿಗಳು ಸುಖದಿಂದ ಸಂಸಾರ ನಡೆಸುತ್ತಿದ್ದರು. ಪರಶಿವನೂ ಪಾರ್ವತಿಯೂ ಪುನೀತವತಿಯ ಭಕ್ತಿಯನ್ನು ಪರೀಕ್ಷಿಸಲೋಸುಗ ಭೂಲೋಕಕ್ಕೆ ಬಂದರು. ಪಾರ್ವತಿಯು ಹಣ್ಣು ಮಾರುವ ರೂಪದಲ್ಲಿ ಬಂದು ಎರಡು ಮಾವಿನ ಹಣ್ಣುಗಳನ್ನು ಪರಮದತ್ತನಿಗೆ ವ್ಯಾಪಾರಮಾಡುತ್ತಿದ್ದಾಗ ಕೊಟ್ಟಳು. ಅವನು ಹಣ್ಣುಗಳನ್ನು ತನ್ನ ಸತಿಯ ಕೈಯಲ್ಲಿರಿಸಿದನು. ಪರಶಿವನು ಸಾಧುವೇಷದಲ್ಲಿ ಬಂದು ಭಕ್ತಿಯನ್ನು ಭಿಕ್ಷಬೇಡಿದನು. ಭಕ್ತಿಯಿಂದ ಪುನೀತವತಿಯು ಒಂದು ಹಣ್ಣನ್ನು ಸಾಧುವಿಗೆ ಅರ್ಪಿಸಿದಳು. ಪರಮದತ್ತನು ಊಟಮಾಡುವಾಗ ಒಂದು ಹಣ್ಣನ್ನು ಬಡಿಸಿದಳು. ಇನ್ನೊಂದನ್ನೂ ಪತಿಯು ಕೇಳಲು ಅದಿರಲಿಲ್ಲ. ಪತಿಗೆ ಸಂದೇಹ ಉಂಟಾಯಿತು. ಸತಿಯು ದೇವರನ್ನು ಪ್ರಾರ್ಥಿಸಲು ಒಂದು ಹಣ್ಣು ಬಂದಿತು. ಅದನ್ನು ಗಂಡನಿಗೆ ಬಡಿಸಿದಳು. ಆದರೆ ಪರಮದತ್ತನ ಕೈಯಿಂದ ಹಣ್ಣು ಮಾಯವಾಯಿತು. ಇದರಿಂದ ಹೆಂಡತಿಯ ವಿಷಯದಲ್ಲಿ ಪತಿಗೆ ಸಂದೇಹ ಉಂಟಾಯಿತು. ರಾತ್ರಿ ನಿದ್ರೆಯಲ್ಲಿ ಕೆಟ್ಟಕನಸುಗಳಾದವು. ಪರಮದತ್ತನು ವ್ಯಾಪಾರಕ್ಕೆಂದು ಹೇಳಿ ಪ್ರಯಾಣಮಾಡಿ ಹೆಂಡತಿಯನ್ನು ತ್ಯಜಿಸಿ ಮಧುರೆಗೆ ಬಂದು ಬೇರೆ ವಿವಾಹಮಾಡಿಕೊಂಡು ಜೀವಿಸುತ್ತಿದ್ದನು. ಅವರಿಗೆ ಒಂದು ಮಗುವಾಯಿತು. ಪುನೀತವತಿ ಎಂದು ನಾಮಕರಣ ಮಾಡಿದರು. ಕೆಲವು ಕಾಲದ ಮೇಲೆ ಸತಿ ಪುನೀತವತಿಯು ಗಂಡನನ್ನು ಹುಡುಕುತ್ತಾ ಮಧುರೆಗೆ ಬಂದು ಪತಿಯನ್ನು ಸಂದರ್ಶಿಸಿದಳು. ಸವತಿಯನ್ನು ಕಂಡು ಘೋರ ರೂಪ ತಾಳಿದಳು. ಅನಂತರ

ತಲೆಯಡಿಯಾಗಿ ನಡೆದು ಪಾರ್ವತೀ ಸಮೇತನಾದ ಶಿವನ ತಾಂಡವದರ್ಶನವನ್ನು ಪಡೆದ್ಲ ಹೀಗಿದ್ದು ತಿರುವಾಲಂಕಾಡಿನಲ್ಲಿ ಶಿಲಾರೂಪವನ್ನು ಹೊಂದಿ ಕಾರಿಕಾಲಮ್ಮೈಯಾರ್ ಎಂ ಹೆಸರನ್ನು ಪಡೆದಳು.

ತಮಿಳು ಮತ್ತು ಕನ್ನಡ ಕತೆಗಳಲ್ಲಿ ಕೆಲವು ವ್ಯತ್ಯಾಸಗಳಿವೆ. ಜನಸಾಮಾನ್ಯ ಪ್ರಚಾರದಲ್ಲಿದ್ದ ಸವಾಡ ಕತೆಗಳನ್ನು ಕೇಳಿ, ಮಧುರರಂಜಕವಾಗಿರುವಂತೆ ನೆಯ್ದು ಶೆಕ್ಕಿಳಾರ್ ಕವಿಯು ಮೊದಲು ಪುರಾತನರ ಕತೆಗಳನ್ನು ಬರೆದಿರಬೇಕು. ಈಚಿ ಕವಿಗಳು ಕೆಲವು ವ್ಯತ್ಯಾಸಗಳನ್ನು ಮಾಡಿರಬಹುದು. ಆದರೆ ಪುರಾತನರು ಚಾರಿತ್ರ ವ್ಯಕ್ತಿಗಳು ಎಂಬುದರಲ್ಲಿ ಸಂದೇಹವಿಲ್ಲ. ಕಾರಿಕಾಲಮ್ಮೆಯು ಚಾರಿತ್ರಕ ವ್ಯಕ್ತಿ ಎಂಬುದನ್ನು ತೋರಿಸಬೇಕೆಂಬುದೇ ಈ ಲೇಖನದ ಮುಖ್ಯೋದ್ದೇಶವಾಗಿದೆ.

ಚಿತ್ರದುರ್ಗ ಪ್ರಾಂತ್ಯದ ಮಾಯಕೊಂಡದ ಈಶಾನ್ಯದಲ್ಲಿ ನಾಲ್ಕುಮೈಲಿ ಅಂತರದ ಕಬ್ಬೂರು ಎಂಬ ಪುರಾತನ ಗ್ರಾಮವಿದೆ. ಈಗ ಇದು ಒಂದು ಸಣ್ಣ ಹಳ್ಳಿಯಾಗಿರು ದಾದರೂ ಈಗ್ಗೆ ಎಂಟು ಶತಮಾನಗಳ ಹಿಂದೆ ಮಹಾ ಅಗ್ರಹಾರವಾಗಿ ವೇದಕರ್ಮ ನಿರತರಾದ ಸಹಸ್ರಾರು ಬ್ರಾಹ್ಮಣರ ಆವಾಸವಾಗಿ ಧರ್ಮನಿರತರಾದ ರಾಜ ಮಹಾರಾಜ ಗಳ ಆಶ್ರಯಕ್ಕೆ ಪಾತ್ರವಾಗಿತ್ತು. ಅಂದು ನಿರ್ಮಿತವಾದ ಕಲ್ಲೇಶ್ವರ ದೇವಾಲಯ ಇಂದಿಗೂ ಉಳಿದಿದೆ. ಮಹಾವೈಭವದಿಂದ ಮೆರೆದ ಅವಿಮುಕ್ತೇಶ್ವರ ದೇವಾಲಯ ಪಾಳಾಗಿ ಕೆಲವು ಗುರುತುಗಳು ಮಾತ್ರ ಉಳಿದಿವೆ.

ಕ್ರಿ.ಶ. ೧೦೭೬ರಿಂದ ಐವತ್ತು ವರ್ಷಗಳಕಾಲ ಚಾಲುಕ್ಯ ಆರನೆಯ ವಿಕ್ರಮಾದಿತ್ಯನು ಹದಿನಾರು ಮಾಂಡಲಿಕರಿಂದ ಆವೃತನಾಗಿ ಧರ್ಮದಿಂದ ಕಲ್ಯಾಣ ನಗರದಲ್ಲಿ ರಾಜ್ಯಭಾ ಮಾಡುತ್ತಿದ್ದನು. ಚಕ್ರವರ್ತಿಯಂತೆ ಮಹಾಮಂಡಲೇಶ್ವರರೂ, ಸಾಮಂತರೂ, ಅಧಿಕಾ ಗಳೂ, ಸಿರಿವಂತರೂ, ಧರ್ಮನಿರತರಾಗಿ, ದೇವಾಲಯ, ಕೆರೆ, ತಟಾಕ ಮುಂತಾದ ಧರ್ಮ ಕಾರ್ಯಗಳನ್ನೆಸಗುತ್ತಾ ಕನ್ನಡ ನಾಡಿನ ಧವಳ ಕೀರ್ತಿಯನ್ನು ದಿಗಂತದವರೆಗೂ ಬೆಳಗು ವಂತೆ ಮಾಡುತ್ತಿದ್ದರು. ರಾಜಾಶ್ರಯವನ್ನು ಪಡೆದಿದ್ದ ಶೈವಪಂತವು ಹಬ್ಬುತ್ತಾ ಶಿವದೇವಾ ಲಯಗಳು ನಿರ್ಮಾಣವಾಗುತ್ತಿದ್ದವು. ಕಾಶ್ಮೀರ ಮೊದಲಾದ ದೂರ ದೇಶಗಳಿಂದಲೂ, ತಮಿಳು ಮೊದಲಾದ ಅಕ್ಕಪಕ್ಕ ದೇಶಗಳಿಂದಲೂ ಶೈವರು ಕನ್ನಡ ನಾಡಿಗೆ ಬಂದು ರಾಜಾಶ್ರಯವನ್ನು ಹೊಂದಿ ನೆಲಸುತ್ತಿದ್ದರು. ನೊಳಂಬವಾಡಿ, ಪಾಂಡ್ಯಮಂಡಲ ಮುಂತಾದ ಹೆಸರನ್ನು ಪಡೆದ ಚಿತ್ರದುರ್ಗ ಜಿಲ್ಲೆಯನ್ನು ಉಚ್ಚಂಗಿಯ ರಾಜಧಾನಿಯಿಂದ ಚಾಲುಕ್ಯರ ಸಾಮಂತರಾದ ಪಾಂಡ್ಯರಸರು ಧರ್ಮದಿಂದ ಆಳುತ್ತಿದ್ದರು.

ಮಹಾಮಂಡಲೇಶ್ವರ ಮಾಯಗೊಂಡದೇವನು ಚಾಳುಕ್ಯ ವಿಕ್ರಮಶಕೆಯ ೩೯ನೆ ಜಯಸಂವತ್ಸರ (1114 A.D.) ದ ಕಾರ್ತಿಕ ಶುದ್ಧ ಸೋಮವಾರದ ದಿವಸ ಕಬ್ಬೂರು ಅಗ್ರಹಾರದ ವಾಯವ್ಯ ದಿಶೆಯಲ್ಲಿ ಅವಿಮುಕ್ತೇಶ್ವರ ದೇವಾಲಯವನ್ನು ನಿರ್ಮಿಸಿ, ಕಳಸ ನಿರ್ಮಾಣ ಮಾಡಿಸಿ ಕೆಲವು ಭೂಮಿಯನ್ನು ೧೨೫ ಗದ್ಯಾಣಕ್ಕೆ (ವರಹಾಗಳಿಗೆ) ಮಾ ಆ ಹಣವನ್ನು ದೇವರ ಪೂಜಾದಿಗಳಿಗೆ ಉಪಯೋಗಿಸಲು ಅಗ್ರಹಾರದ ಮಹಾಜನಕ್ಕೆ ಒಪ್ಪಿಸಿ ಶಾಸನಮರ್ಯಾದೆಯನ್ನು ಮಹಾಜನರು ತಪ್ಪದೆ ಪ್ರತಿಪಾಲಿಸುವುದೆಂದು ಬೇಡಿದನು. (ದಾವಣಗೆರೆ ೧೫೬ನೇ ಶಾಸನ)

ಇದು ನಡೆದ ಒಂಭತ್ತು ವರ್ಷಗಳ ನಂತರ ಶೋಭಕೃತು ಸಂವತ್ಸರದ ಫಾಲ್ಗುಣ ಶುದ್ಧ ೩ ಬುಧವಾರದಂದು ಕಬ್ಬೂರು ಗ್ರಾಮದ ೨೫೦ ಮಹಾಜನರ ಸಮಕ್ಷದಲ್ಲಿ ಬೆಧ್ದಲು

ಭೂಮಿ, ತೋಟ ಮತ್ತು ಧನವನ್ನು ಉಚ್ಚಂಗಿಯ ಮಹಾಮಂಡಲೇಶ್ವರ ಇರುಕ್ಕವೇಳ ವೀರಪಾಂಡ್ಯದೇವನು ದತ್ತಿಯಾಗಿ ಕೊಟ್ಟನು.

ಕಲಿದೇವರಿಗೂ, ಗವುರೇಶ್ವರ ದೇವರಿಗೂ, ದೇವಾಲಯವನ್ನು ಮಾಡಿಸದೇ ಅನ್ನಮುಣ್ಣದ ಬ್ರತಮಂ ಪರಿಣಮಂ ಮಾಡಿ ದೇವರ ಶ್ರೀ ಪಾದಮಂ ಪೂಜಿಸುತ್ತಾ ಇದ್ದ ಸಿವಬ್ರಾಹ್ಮಣರ ಪುತ್ರಪವಿತ್ರೆಯಪ್ಪ ಕಾರಿಕಲ್ಲ ಅಮ್ಮೆಗೆ ಮಲೆಯಾಳ ನಾರಾಯಣ ಮಾಳನ್ದಲೆಯೂ, ತೆನುಳ ಕಾಮಾಣ್ಡನೂ ಧರ್ಮವನ್ನು ಕೊಟ್ಟರು. ಕುಂತದೇವರಿಗೆ ಅಚಳ ಭಕ್ತಿಯಿಂದ ಗಂಧ, ಅಕ್ಷತೆ, ಪುಷ್ಪ, ಧೂಪ ದೀಪ ನೈವೇದ್ಯವನ್ನು ತ್ರಿಸಂಜೆಯ ಕತ್ತಲೆ ಪೂಜೆಯಂ ಮಾರ್ಪಸಮಸ್ತ ಗುಣಸಂಪನ್ನೆಯರಪ್ಪ ತಿರುಕಾಳತಿಯ ಪುಟ್ಟಿದ ಕಾರಿಕಲ್ಲ ಅಮ್ಮೆಯ ಪುತ್ರ ಕುಂತನು

ಎತ್ತಿಸಿ ದೇವಾಲಯಮಂ  
ಮತ್ತಂ ಬೇಡಿದರ್ಗಂ ಆರಿಡು ಮನ್ನಿಸಿ ಸಲೆ ಪೆಂ  
ಪುತ್ತರಿಸೆ ಸಿವಬ್ರಾಹ್ಮಣರ್ಗೆ ಪ  
ವಿತ್ರ ಎನಲು ನೆಗಳ್ದಳಿಂತು ಕಾರೆಕಲ್ಲ ಅಮ್ಮೆ ॥

ಸರಸ್ವತಿ ಗಣದಾಸಿ ಬೆಂಗೋಜನ ಪುತ್ರ ಇಕ್ಕುಡಾಚಾರಿಯು ಎರಡು ದೇವಾಲಯಮಂ ಮಾಡಿ ಶಾಸನಮಂ ಬರೆದಂ [ದಾವಣಗೆರೆ ೧೫೫ನೆ ಶಾಸನ]

ಕಾರಿಕಾಲಮ್ಮೆಯು ಮಲೆಯಾಳ ದೇಶದಿಂದ ಕನ್ನಡ ನಾಡಿಗೆ ಒಂದು ಕಬ್ಬೂರು ಅಗ್ರಹಾರದ ಚತುರ್ವೇದಿ ಮಂಗಲದಲ್ಲಿ ನೆಲಸಿದಳು. ಅನ್ನವನ್ನುಣ್ಣದ ಅಂದರೆ ನಿರಶನ ವ್ರತವನ್ನು ಕೈಕೊಂಡು ಸ್ವಯಂಭುಕಲಿದೇವ, ಗವುರೇಶ್ವರ, ಕುಂತ ಮುಂತಾದ ಶಿವದೇವಾಲಯಗಳನ್ನು ನಿರ್ಮಿಸಲು ಕಾರಣಳಾದಳು; ಶಿವಬ್ರಾಹ್ಮಣರ ಮತೀಯಳು; ಶಿವನ ಪಾದಗಳನ್ನು ಪೂಜಿಸುತ್ತಾ ಇದ್ದಳು; ತ್ರಿಸಂಜೆಯ ಕತ್ತಲೆಯಲ್ಲಿ ಶಿವನನ್ನು ಆರಾಧಿಸುತ್ತಿದ್ದಳು; ಸಮಸ್ತ ಗುಣಸಂಪನ್ನೆಯಾಗಿದ್ದಳು. ಆಕೆಗೆ ತಿರುಕಾಳ* ನ ದಯದಿಂದ ಕುಂತ ಎಂಬ ಮಗನು ಜನಿಸಿದ್ದನು. ಈ ಶಾಸನದಕಾಲ ಶಕವರ್ಷ ೧೦೫೫ನೆಯ ಶೋಭಕೃತು ಸಂವತ್ಸರ. (1114 A.D.)

ಇಂತಹ ಶಿವಶರಣರ ಜೀವನವೇ ಕನ್ನಡ ನಾಡಿನಲ್ಲಿ ಮತೀಯ ಕ್ರಾಂತಿಯನ್ನುಂಟುಮಾಡಿ ಶ್ರೀ ರೇವಣಸಿದ್ಧ, ಶ್ರೀ ಮರುಳಸಿದ್ಧ, ಶ್ರೀ ಬಸವೇಶ್ವರ ಮೊದಲಾದವರು ಬೋಧಿಸಿದ ವೀರಶೈವಕ್ಕೆ ಹಿನ್ನೆಲೆಯಾಯಿತು.

— ಹುಲ್ಲೂರು ಶ್ರೀನಿವಾಸ ಜೋಯಿಸ

---

* ಉಜ್ಜಯಿನಿಯಲ್ಲಿದ್ದ ಈಶ್ವರನಿಗೆ ಮಹಾಕಾಳ ಎಂದು ಹೆಸರು. ಆದರಂತೆ ಕಾರಿಕಲ್ಲ ಅಮ್ಮೆಯು ಪೂಜಿಸುತ್ತಿದ್ದ ದೇವರು ತಿರುಕಾಳ ಇರಬಹುದು. ತಿರು ಎಂದರೆ ಪವಿತ್ರವಾದ+ಕಾಳ ಎಂದರೆ ಈಶ್ವರ.

# ಶಾಸನ ಮತ್ತು ಸಾಹಿತ್ಯ

ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥

—ಗೀತಾ

## ೧ ಸಾಮಾನ್ಯ ವಿವೇಚನೆ

ಕನ್ನಡ ಶಾಸನಗಳ ಸಾಹಿತ್ಯವೊಂದು ಮಹಾಸಾಗರ. ಇದರಲ್ಲಿ ಮುಳುಗಿ ಚರಿತ್ರೆಯ ಜಾತಿಯ ಕೆಲವು ಮುತ್ತುಗಳನ್ನು ಆಯ್ದು ತೋರಿಸುವ ಎತ್ತುಗಡೆ ಇದುವರೆಗೆ ಕೆಲವೆ ಕೆಲಮಟ್ಟಿಗೆ ನಡೆದಿದ್ದರೂ ಅದರಲ್ಲಿ ಬಹುವಾಗಿ ಅವಿತುಕೊಂಡಿರುವ ಧರ್ಮ, ಸಮಾಜ ನೀತಿ, ರಾಜ್ಯಶಾಸ್ತ್ರ, ಭಾಷಾಶಾಸ್ತ್ರ, ಸಾಹಿತ್ಯ, ಮೊದಲಾದ ನಾನಾಜಾತಿಯ ವಿವಿಧ ರತ್ನಗಳನ್ನು ಪರಿಶೋಧಿಸಿ ಅವುಗಳ ತಕ್ಕ ಬೆಲೆಯನ್ನು ನಿರ್ಧರಿಸುವ ಪ್ರಯತ್ನವು ಇನ್ನೂ ನಮ್ಮಲ್ಲಿ ನಡೆಯಬೇಕಾದುದು. ಈ ಅನ್ವೇಷಣ ಮಾರ್ಗದಲ್ಲಿ ಸಾಹಿತ್ಯದೃಷ್ಟಿಯಿಂದ ಶಾಸನಗಳನ್ನು ಅತ್ಯಲ್ಪವಾಗಿ ಪರಿಶೀಲಿಸಿ ನನಗೆ ತೋರಿದ ಕೆಲವು ಅಂಶಗಳನ್ನು ಇ ಮುಂದೆ ಚರ್ಚಿಸುವೆ.

ಹಾಗೆ ನೋಡಿದರೆ ಇದೀಗ ನಾವು ಗ್ರಹಿಸುತ್ತಿರುವ ಕೇವಲ ಸಾಹಿತ್ಯ ಎಂಬುದಕ್ಕೂ ಶಾಸನ ಸಾಹಿತ್ಯಕ್ಕೂ ನಿಷ್ಠುರವಾದ ವ್ಯತ್ಯಾಸವಿಲ್ಲ. ಶಾಸನಗಳನ್ನು ರಚಿಸುವ ಲೇಖಕರು ಸಾಮಾನ್ಯವಾಗಿ ಭಾಷಾಜ್ಞಾನ ಮತ್ತು ಸಾಹಿತ್ಯದ ಪರಿಚಯವುಳ್ಳ ವಿದ್ಯಾವಂತರೇ ಆಗಿರುತ್ತಿದ್ದರು. ಇಷ್ಟು ಮಾತ್ರವಲ್ಲ, ಕೆಲವೊಂದು ಸಮಯಗಳಲ್ಲಿ ಒಳ್ಳೆಯ ಪಂಡಿತರೂ ರಾಜಾಶ್ರಿತ ಕವಿಗಳೂ ಆದ ಉತ್ತಮ ಸಾಹಿತಿಗಳು ಶಾಸನಗಳನ್ನು ಸಿದ್ಧಪಡಿಸುತ್ತಿದ್ದರು. ಆದುದರಿಂದ ಚಾರಿತ್ರಕ ಸಂನಿವೇಶಗಳ ಆವರಣದಲ್ಲಿ ರಚಿತವಾದ ಶಾಸನ ಸಾಹಿತ್ಯವನ್ನು ಮಿಕ್ಕ ಸಾಹಿತ್ಯದೊಡನೆ ಹೊಂದಿಸಿಕೊಂಡು ನಡೆಸಿದ ವ್ಯಾಸಂಗವು ಫಲಪ್ರದವಾಗದೆ ಇರದು. ಸಾಹಿತ್ಯದೃಷ್ಟಿಯಿಂದ ಶಾಸನಗಳ ವ್ಯಾಸಂಗವು ಹೆಚ್ಚಾಗಿ ನಡೆಯಬೇಕಾದುದು ಹೇಗೆ ಇಷ್ಟವಾಗಿದೆಯೊ ಹಾಗೆಯೆ ಶಾಸನಸಾಹಿತ್ಯದ ಬೆಳಕಿನಲ್ಲಿ ಪಂಪ, ಮೊದಲಾದ ನಾಮಾಂಕಿತ ಕವಿಗಳ ಸಾಹಿತ್ಯಕೃತಿಗಳನ್ನು ಪರಿಶೀಲಿಸುವುದೂ ಹೆಚ್ಚು ಉಪಯುಕ್ತವಾಗಿದೆ. ಶಾಸನ ಸಾಹಿತ್ಯದ ಚೆನ್ನಾದ ಪರಿಚಯವುಳ್ಳ ವಾಚಕನು ಇಂತಹ ಸಾಹಿತ್ಯಕೃತಿಗಳಲ್ಲಿ ಮೈದೋರುವ ಅನೇಕ ಸಾಂಪ್ರದಾಯಿಕ ಮತ್ತು ಪಾರಿಭಾಷಿಕ ಉಕ್ತಿಗಳಲ್ಲಿ ಚಾರಿತ್ರಕತೆ ಯಿಂದ ಪರಿವೇಷ್ಟಿತವಾದ ವಿಪುಲಾರ್ಥವನ್ನು ಕಾಣಬಹುದು.

ಕೇವಲ ಸಾಹಿತ್ಯ ಮತ್ತು ಶಾಸನ ಸಾಹಿತ್ಯ ಇವುಗಳ ವ್ಯಾಸಂಗವನ್ನು ಅನ್ಯೋನ್ಯ ಪೂರಕವಾಗಿಯೂ ಪ್ರತ್ಯೇಕವಾಗಿಯೂ ಮಾಡುವುದರಿಂದ ಆಗುವ ಪ್ರಯೋಜನಗಳು ಬಹುವಿಧವಾಗಿವೆ. ಕವಿರಾಜಮಾರ್ಗದಂತಹ ಲಕ್ಷಣ ಗ್ರಂಥಗಳನ್ನು ಪರಿಶೀಲಿಸುವವರಿಗೆ ಅದಕ್ಕೂ ಹಿಂದೆ ಕನ್ನಡದಲ್ಲಿ ರಚನೆಯನ್ನು ಮಾಡಿದ ಗದ್ಯ ಪದ್ಯ ಲೇಖಕರ ಹೆಸರುಗಳು ಮಾತ್ರ ವಿದಿತವಾಗುವುವಲ್ಲದೆ ಅಂತಹ ಲೇಖಕರ ರಚನೆ ಯಾವ ವಿಧವಾಗಿದ್ದಿತು ಎಂಬ ಬಗೆಗೆ ಸ್ವಲ್ಪವಾದರೂ ಕಲ್ಪನೆ ಆಗುವಂತಿಲ್ಲ. ಅದಕ್ಕಾಗಿ ನಾವು ಶಾಸನ ಸಾಹಿತ್ಯದತ್ತ ಹೊರಳಿ ನೋಡಬೇಕಾಗುತ್ತದೆ. ಬಾದಾಮಿ ಚಾಲುಕ್ಯರ ಮತ್ತು ಅದಕ್ಕೂ ಪೂರ್ವದ

ಕಾಲದ ಹಲವಾರು ಕನ್ನಡ ಶಾಸನಗಳು ಪ್ರಕಾಶಿತವಾಗಿವೆ. ಇವುಗಳಿಂದ ಈ ಶಾಸನಗಳಲ್ಲಿ ಮಾತ್ರವಲ್ಲದೆ ಹೊರಗಡೆಯಲ್ಲಿಯೂ ಈ ಕಾಲಕ್ಕೆ ಕನ್ನಡದ ಸಾಹಿತ್ಯವು ಯಾವ ಪರಿಯಿಂದ ತನ್ನ ಮೆಲ್ಲಡಿಗಳನ್ನು ಇಡುತ್ತಿದ್ದಿತು ಎಂಬುದು ಕೆಲಮಟ್ಟಿಗೆ ತಿಳಿವಳಿಕೆಯಾಗುತ್ತದೆ.

ಇಂತು ಶಾಸನ ಸಾಹಿತ್ಯದಲ್ಲಿ ಇದೀಗ ಉಪಲಬ್ಧವಾಗಿರುವ ಕನ್ನಡ ಸಾಹಿತ್ಯದ ಹಿಂದಿನ ಕೆಲ ಮೆಟ್ಟಲುಗಳನ್ನು ನಾವು ಕಾಣಬಹುದಾದರೂ ನಮ್ಮ ಸಾಹಿತ್ಯವು ಶಾಸನಗಳಲ್ಲಿ ಮಾತ್ರ ಪ್ರಾರಂಭಗೊಂಡಿರಬೇಕು ಎಂದು ತಿಳಿಯುವುದು ಅಸ್ವಾಭಾವಿಕ. ಮಿಕ್ಕ ಸಾಹಿತ್ಯದಂತೆ ಕನ್ನಡ ಸಾಹಿತ್ಯವಾದರೂ ಭಾವವ್ಯಕ್ತಿಯ ನಿಮಿತ್ತದಿಂದ ಗದ್ಯಪದ್ಯರೂಪವಾಗಿ ಈ ಮೊದಲು ಪ್ರಕಟವಾಗುತ್ತಿದ್ದು, ವ್ಯಾವಹಾರಿಕವಾದ ಒಂದು ಪ್ರಯೋಜನಕ್ಕೋಸುಗ ಅದು ಶಾಸನಗಳ ರೂಪವನ್ನು ತಾಳಿತು ಎಂದು ಇಟ್ಟುಕೊಳ್ಳುವುದು ಉಚಿತವಾಗಿದೆ.

ಕೇವಲ ಸಾಹಿತ್ಯದ ಬೆಳವಣಿಗೆಯನ್ನು ಕುರಿತು ಚಾರಿತ್ರಕ ಮಿಮರ್ಶೆಯನ್ನು ನಡೆಸುವುದಾದರೆ ಅದಕ್ಕೆ ಸಹಾಯಕವಾಗಬಹುದಾದ ನಿಶ್ಚಿತ ಮಾನದಂಡವನ್ನು ನಾವು ಶಾಸನ ಸಾಹಿತ್ಯದಿಂದ ಎತ್ತಿಕೊಳ್ಳುವಂತಿದೆ. ಸ್ಪಷ್ಟವಾದ ಕಾಲಗಣನೆಯುಳ್ಳ ರಾಜಮಾರ್ಗದ ಮೇಲೆ ನಡೆದು ಹೋಗುತ್ತಿರುವ ಶಾಸನ ಸಾಹಿತ್ಯವು ಆ ಆ ಕಾಲದ ಕಿರಿದಂತರದಲ್ಲಿ ತಾನು ಇಕ್ಕಿದ ಹೆಜ್ಜೆಗಳ ಪರಿಚಯವನ್ನು ನಮಗೆ ಕೆಲವೆಡೆ ಮಾಡಿಕೊಡುವುದು. ಈ ಸೌಕರ್ಯಕ್ಕೆ ಕೇವಲ ಸಾಹಿತ್ಯವು ಎರವಾಗಿದೆ.

ಕನ್ನಡ ಶಾಸನ ಸಾಹಿತ್ಯದ ಮತ್ತು ಸಾಹಿತ್ಯದ ಚರಿತ್ರೆಯಲ್ಲಿ ಹಲ್ಮಿಡಿಯ ಶಾಸನವು ಅಗ್ರಪೂಜೆಗೆ ಅರ್ಹವಾಗಿದೆ. ಮೊತ್ತಮೊದಲಿನ ಗ್ರಂಥಸ್ಥವಾದ ಗದ್ಯ ಎಂಬ ವಿಚಾರದಿಂದ ಇದರ ಮಹತ್ತ್ವವು ಹಿರಿದಾಗಿದೆ. ಸಂಸ್ಕೃತ ಭಾಷೆಯ ಬೆಂಬಲದಿಂದ ವಚನರೂಪವಾಗಿ ಪ್ರಕಟವಾದ ಕನ್ನಡ ಸಾಹಿತ್ಯದ ಉಗಮದ ಕುರುಹುಗಳನ್ನು ನಾವಿಲ್ಲಿ ಕಾಣಬಹುದು. ಈ ಶಾಸನದ ಕಾಲ ಸು. ೬ನೆಯ ಶತಮಾನ.

ಕರ್ನಾಟಕದ ಸಾಮ್ರಾಜ್ಯವನ್ನು ಸ್ಥಾಪಿಸಿ ಕನ್ನಡ ಜನಾಂಗದ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಯ ಪುರೋಭಿವೃದ್ಧಿಗೆ ಬಹುಪರಿಯಿಂದ ನೆರವಾದ ಬಾದಾಮಿಯ ಚಾಲುಕ್ಯ, ಮಾನ್ಯಖೇಟದ ರಾಷ್ಟ್ರಕೂಟ, ಕಲ್ಯಾಣದ ಚಾಲುಕ್ಯ, ಮತ್ತು ಹೊಯ್ಸಳ ಈ ಮನೆತನಗಳ ಕಾಲದ ಶಾಸನಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಕನ್ನಡ ಶಾಸನ ಸಾಹಿತ್ಯವು ಕೇವಲ ಸಾಹಿತ್ಯದ ಬಿಂಬ ಪ್ರತಿಬಿಂಬ ರೂಪದಲ್ಲಿ ವಿಕಸನಗೊಂಡ ಸಂನಿವೇಶವು ಪ್ರತೀತಿಗೆ ಬರುತ್ತದೆ. ಅದು ಹೇಗೆಂದರೆ ಬಾದಾಮಿ ಚಾಲುಕ್ಯ ಕಾಲದಲ್ಲಿ ಶಾಸನ ಸಾಹಿತ್ಯವು ಇನ್ನೂ ಶೈಶವದಶೆಯಲ್ಲಿ ಇದ್ದಿತು ಎಂದು ಕಂಡುಬರುವುದು. ಈ ಕಾಲದ ಶಾಸನಗಳಿಗೆ ಭಾಷಾ ಸಂಸ್ಕಾರವು ಸಾಲದು. ಶಾಸನಗಳ ಒಕ್ಕಣಿಕೆ, ಅವುಗಳನ್ನು ಬರೆಯುವ ವಿಧಾನ ಇನ್ನೂ ನಿಶ್ಚಿತವಾಗಿರಲಿಲ್ಲ. ವಿಸ್ತಾರಕ್ಕಿಂತ ಸಂಕ್ಷೇಪದೆಡೆಗೆ, ವಿವರಗಳನ್ನು ಬೆಳೆಸದೆ, ನಾಲ್ಕು ಮಾತುಗಳಲ್ಲಿ ವಿಷಯವನ್ನು ಮುಗಿಸಿಬಿಡುವ ಪ್ರವೃತ್ತಿ ಹೆಚ್ಚು.

ರಾಷ್ಟ್ರಕೂಟರ ಕಾಲಕ್ಕೆ ಬರುವಷ್ಟರಲ್ಲಿ ಕಲಾದೃಷ್ಟಿಯಿಂದ ಶಾಸನಗಳನ್ನು ರಚಿಸಲನುವಾದ ನೋಟವು ಹೆಚ್ಚು ಹೆಚ್ಚು ಗೋಚರವಾಗುವುದು. ಶಾಸನಗಳನ್ನು ಬರೆಯುವ ಒಂದು ಕ್ರಮವು ಈ ಕಾಲದಲ್ಲಿ ಬಳಕೆಗೆ ಬಂದಿತು. ವಿವರಗಳು ಹೆಚ್ಚಿದುವು. ಭಾಷೆ ಸಂಸ್ಕಾರಗೊಂಡಿತು. ಕಥನವು ನಿರೂಪಣೆ ಆಯಿತು; ನಿರೂಪಣೆ ವರ್ಣನೆಯ ದಾರಿಯನ್ನು ಹಿಡಿಯಿತು; ವರ್ಣನೆಯಲ್ಲಿ ಕಾವ್ಯರಸವು ಹನಿಯಿಡಲಾರಂಭಿಸಿತು. ಅರಸರ, ನಾಯಕರ ಹೆಸರಿನ ಪಕ್ಕದಲ್ಲಿ ಉದ್ದನೆಯ ಪ್ರಶಸ್ತಿಗಳು, ಬಿರುದುಗಳು ತೂಗಾಡತೊಡಗಿದುವು.

ಇವುಗಳು ಯಥಾರ್ಥವಾಗಿರಬಹುದು; ಅರ್ಥವತ್ತಾದುವೂ ಆಹುದು ಎನಬಹುದು. ಆದರೆ ಅವುಗಳನ್ನು ಪ್ರದರ್ಶಿಸುವ ರೀತಿ ಮಾತ್ರ ಸಾಹಿತ್ಯ ಪ್ರಪಂಚಕ್ಕೂ ಕಲಾರಾಜ್ಯಕ್ಕೂ ಸೇರಿದುದು ಎಂಬುದನ್ನು ಮರೆಯುವಂತೆ ಇಲ್ಲ.

ಮೇಲಿನ ವಿವೇಚನೆಗೆ ಲಕ್ಷ್ಯವಾಗಿ ಸಹಜ ಸುಲಭತೆಯಿಂದ ನನ್ನ ಕೈಗೆ ದೊರೆತ ಎರಡು ಶಾಸನಗಳನ್ನು ಎತ್ತಿಕೊಳ್ಳುವೆ. ಇವು ದಕ್ಷಿಣ ಭಾರತೀಯ ಶಾಸನಾವಳಿಯ *(South Indian Inscriptions Series)* ಮುಂಬಯಿ ಕರ್ನಾಟಕ ಶಾಸನಗಳ ಒಂದನೆಯ ಸಂಪುಟದಲ್ಲಿ *(Bombay Karnatak Inscriptions* Vol. I, pt. I) ಪ್ರಕಾಶಿತವಾಗಿವೆ. ಇವುಗಳಲ್ಲಿ ಒಂದನೆಯದು ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಬೆಂತೂರ ಎಂಬ ಗ್ರಾಮದಲ್ಲಿ ದೊರೆತುದು (No. 10). ಎರಡನೆಯದು ಅದೇ ಪ್ರದೇಶದ ಮೇವುಂಡಿ ಗ್ರಾಮಕ್ಕೆ ಸೇರಿದುದು (No. 11.) ಈ ಶಾಸನಗಳು ಸವೆದು ಹೋದುದರಿಂದ ಪ್ರಕಾಶಿತವಾದ ಅವುಗಳ ಪಾಠವು ಹಲವೆಡೆ ಅಸಮಗ್ರವೂ ಸಂದಿಗ್ಧವೂ ಆಗಿರುವುದಲ್ಲದೆ ಅರ್ಥವು ಆಗುವಂತೆ ಇಲ್ಲ. ಆದರೂ ಈ ಶಾಸನಗಳನ್ನು ಎತ್ತಿ ತೋರಿಸುವ ಕಾರಣ ಯಾವುದೆಂದರೆ ಅವುಗಳಲ್ಲಿ ಅಡಕವಾದ ಸಾಹಿತ್ಯದ ಗುಣ.

ಜೈನ ಮತ ತತ್ತ್ವದಲ್ಲಿ ನಿಷ್ಠೆಯುಳ್ಳ ಚಿಕ್ಕಣ್ಣನೆಂಬ ವೀರನೊಬ್ಬನು ತನ್ನ ಹಗೆಗಳೊಡನೆಯೂ ಹಿಂಸೆಯ ಮಾರ್ಗವನ್ನು ಅನುಸರಿಸದೆ ಯಾವುದೋ ಒಂದು ವಿಪತ್ತಿಯ ಮೂಲಕ ಸಂನ್ಯಸನ ವ್ರತವನ್ನು ಕೈಕೊಂಡು ದೇಹತ್ಯಾಗ ಮಾಡಿದ ಸಂಗತಿಯನ್ನು ಬೆಂತೂರ ಶಾಸನದಲ್ಲಿ ನಿರೂಪಿಸಿದಂತೆ ತೋರುತ್ತದೆ. ಮೇಲೆ ಮೇಲೆ ನೋಡಿದರೆ ಕವಿತ್ವಕ್ಕೂ ಕಲ್ಪನೆಗೂ ಅವಕಾಶವಿಲ್ಲ ಎಂಬಂತೆ ತೋರುವ, ಆದರೆ ಜೀವನಕಲೆಯನ್ನು ಅರಿತವನಿಗೆ ಕಾವ್ಯಮಯವಾಗಿ ತೋರುವಂತಹ ಈ ಘಟನೆಯನ್ನು ಪ್ರಸ್ತುತ ಶಾಸನಲೇಖಕನು ಸಾಹಿತ್ಯ ರೀತಿಯಲ್ಲಿ ಹೇಗೆ ಚಿತ್ರಿಸಿರುವನು ಎಂಬ ಅಂಶವು ಇದರಲ್ಲಿಯ ವರ್ಣನಪರ ಉಕ್ತಿಗಳಿಂದಲೂ ಕೊನೆಯ ಪದ್ಯದಿಂದಲೂ ಸಾಕಷ್ಟು ಸೂಚಿತವಾಗುತ್ತದೆ. ಇತರ ವೀರರಿಗಿಂತಲೂ ಧರ್ಮವೀರನಾದ ಚಿಕ್ಕನು ಹೆಚ್ಚಿನವನು ಎಂದು ಸೂಚಿಸುವ ಕೊನೆಯ ಪದ್ಯದಿಂದ ಈ ಶಾಸನ ಕವಿಯ ವರ್ಣನಕೌಶಲ್ಯವು ಅನುಭವಕ್ಕೆ ಬರುತ್ತದೆ.

ಮೇವುಂಡಿಯ ಶಾಸನದಲ್ಲಿ ಸ್ವಾಮಿನಿಷ್ಠ ಸೇವಕನೊಬ್ಬನು ತನ್ನ ದೊರೆಗೆ ಕಠಿನವಾದ ರೋಗವು ಉಂಟಾದುದನ್ನು ಕಂಡು ಆತನ ಹಿಂದೆ ತಾನು ಬಾಳಲಾರದೆ ಮಹಾಸಾಹಸದಿಂದ ಆತ್ಮಬಲಿದಾನ ಮಾಡಿದ ಸಮಾಚಾರವನ್ನು ಹೇಳಿದೆ. ಇಲ್ಲಿಯ ಘಟನೆಯಾದರೂ ಮೇಲಿನಂತಹದು. ದೊರೆಯ ಅಪಾಯ ವಾರ್ತೆಯನ್ನು ಕೇಳಿ ಆ ಸೇವಕನು ಆತನಲ್ಲಿಗೆ ಹೇಗೆ ಹೋದನು, ಆತನ ಅವಸ್ಥೆಯನ್ನು ಕಂಡು ತನ್ನ ಜೀವದಮೇಲೆ ಹೇಗೆ ಹಂಗುದೊರೆದನು, ಮುಂತಾಗಿ ವರ್ಣಿಸುವ ಈ ಶಾಸನಭಾಗವು (ಪಂಕ್ತಿಗಳು ೧೬–೨೩) ಮೇಲ್ತರದ ಸಾಹಿತ್ಯದ ಪಂಕ್ತಿಗೆ ಸೇರಬಲ್ಲುದಾಗಿದೆ.

ಈ ಎರಡು ಶಾಸನಗಳೂ ಒಂದನೆಯ ಅಮೋಘವರ್ಷ ಎಂದರೆ ಕವಿರಾಜಮಾರ್ಗದ ನೃಪತುಂಗನ ಆಳಿಕೆಯವು ಎಂದು ತಿಳಿದಮೇಲೆ ಈ ಕಾಲದ ಕನ್ನಡ ಗದ್ಯವು ಶಾಸನದಲ್ಲಿ ಈ ಮಟ್ಟಕ್ಕೆ ಏರಿದುದು ಅಚ್ಚರಿಯೇನೂ ಅಲ್ಲ ಎಂದು ತೋರದಿರದು.

ಬರುಬರುತ್ತ ಈ ಕಾಲದಲ್ಲಿ ಶಾಸನಲೇಖಕನ ಒಲವು ಗದ್ಯಕ್ಕಿಂತ ಸೊಗಸಿನ ಪದ್ಯ ರಚನೆಯ ಕಡೆಗೆ ಹೆಚ್ಚಾಗಿ ಹರಿದಂತೆ ಕಂಡು ಬರುತ್ತದೆ. ಶಾಸನದಲ್ಲಿ ಪ್ರತಿಪಾದಿತರಾದ ಪ್ರಧಾನ ವ್ಯಕ್ತಿಗಳು, ದಾನದ ವಿವರಗಳು, ಮಾತ್ರವಲ್ಲ, ಫಲಸ್ತುತಿ, ಅಪಹಾರಕನನಿಂದೆ,

ಮೊದಲಾದ ಅಂಶಗಳೂ ಪದ್ಯರೂಪದಲ್ಲಿ ಪ್ರಕಟವಾಗತೊಡಗಿದವು. ಇದಕ್ಕೆ ಒಂದು ಉದಾಹರಣೆಯಾಗಿ ಅದೇ ಪ್ರದೇಶದ (ಧಾರವಾಡ ಜಿಲ್ಲೆ, ನವಲಗುಂದ ತಾಲುಕ) ಸಿಸುವಿನ ಹಳ್ಳಿ ಗ್ರಾಮದ ಶಾಸನವನ್ನು ಎತ್ತಿಕೊಳ್ಳಬಹುದು (No. 14). ಇದಾದರೂ ಒಂದನೆಯ ಅಮೋಘವರ್ಷನ ಆಳಿಕೆಯದು. ಇದರಲ್ಲಿ ಆ ಗ್ರಾಮದ ಐವತ್ತು ಮಹಾಜನರನ್ನು ವರ್ಣಿಸುವ,

ಶ್ರುತಿಯೊಳ್ವಿಶ್ರುತ ವಿಶ್ವ
ಸ್ಮೃತಿಯೊಳ್ ವ್ಯಾಕರಣ ಕಾವ್ಯ ನಾಟಕ ತರ್ಕ–।
ಸ್ಥಿತಿಯೊಳ್ ಸರ್ವಾಗಮದೊಳ್
ಚತುರ್ಮುಖಪ್ರತಿಮರಯ್ವದಿಂಬರ್ ವಿಪ್ರರ್ ॥

ಎಂಬ ಪಂಕ್ತಿಗಳನ್ನಾಗಲಿ, ದಾನವನ್ನು ತೆಗೆದುಕೊಳ್ಳುವ ಬ್ರಾಹ್ಮಣರ ಪೂರ್ವವೃತ್ತಾಂತವನ್ನು ನಿರೂಪಿಸುವ,

ಮೊದಲೊಳ್ ಸಿಸೂಳಹಾಚಿಂ
ವಿದಿತ ಶ್ರೀ ಸಳುಕಿರಾಜ್ಯದೊಳ್ ಪಡೆದು ಮಹಾ–।
ಸದಮಲ ಸರ್ವಕ್ರತುಗಳ
ನುದಾರತರಮಾಗೆ ಬೇಳ್ಪ ವಿಪ್ರೋತ್ತಮರಂ ॥

ಎಂಬ ಸಾಲುಗಳನ್ನಾಗಲಿ, ಶಾಸನವು ಚಿರಕಾಲ ಬಾಳಲಿ ಎಂಬುದಾಗಿ ಹಾರಯಿಸುವ,

ಶ್ರೀಸಕಲ ಮೇರುಗಿರಿವೋ
ಲಾ ಸಸಿರವಿಕಿರಣತತಿಗಳುಳ್ಳನ್ನೆಗಮೀ–।
ಶಾಸನದ ಸಿಲಾಸ್ತಂಭಂ
ಭಾಸುರತರಮಾಗಿ ನಿಲ್ಕೆ ವಸುಧಾತಲದೊಳ್ ॥

ಎಂಬೀ ಉಪಸಂಹಾರವಾಕ್ಯವನ್ನಾಗಲಿ ಆಲಿಸಿದಲ್ಲಿ, ಸಾಮಾನ್ಯ ವ್ಯಾವಹಾರಿಕ ವಸ್ತುಗಳನ್ನು ಕೂಡ ಆಲಂಕಾರಿಕ ಪದ್ಯಪದಗಳಿಂದ ನಿವೇದಿಸುವ ಸಂಪ್ರದಾಯವು ಈ ಕಾಲದಲ್ಲಿ ಹೇಗೆ ರೂಢವಾಗುತಲಿದ್ದಿತು ಎಂಬುದು ನಿದರ್ಶನಕ್ಕೆ ಬರುತ್ತದೆ. ಇಂತಹ ಪದ್ಯಗಳನ್ನೆಲ್ಲ ಕಾವ್ಯವೆಂದು ಎಣಿಸುವುದು ಸಾಧ್ಯವಿಲ್ಲದಿದ್ದರೂ ಇದರಿಂದ ಕಾವ್ಯದ ಒಂದು ಲಕ್ಷಣವಾದ ಆಲಂಕಾರಿಕ ಛಂದೋಬದ್ಧರಚನೆ ಆ ಕಾಲದ ಲೇಖಕರ ಮನಸ್ಸನ್ನು ಹೇಗೆ ಸೆಳೆಯುತ್ತಿದ್ದಿತು ಎಂಬ ಅರಿವು ಚೆನ್ನಾಗಿ ಉಂಟಾಗುವುದು.

ಕಾವ್ಯರೂಪವಾಗಿ, ಕಾವ್ಯಮಯವಾಗಿ ಶಾಸನಗಳನ್ನು ಬರೆಯುವ ಈ ಪ್ರವೃತ್ತಿ ದಿನ ದಿನಕ್ಕೆ ಹೆಚ್ಚುತ್ತ, ಅದರ ಆತ್ಯಂತಿಕ ವಿಕಾಸವು ಕಲ್ಯಾಣ ಚಾಲುಕ್ಯ ಮತ್ತು ಹೊಯ್ಸಳರ ಆಳಿಕೆಯಲ್ಲಿ ಕಂಡು ಬರುವುದು. ಈ ಕಾಲದ ಶಾಸನಗಳು ಪ್ರಾಯಿಕವಾಗಿ ವಿಸ್ತಾರಯುತವಾದುವು. ಈ ವಿಸ್ತಾರವೋ ರಾಜರ ಪ್ರಶಸ್ತಿಗಳಿಂದಲೂ ಅಂಕಿತನಾಯಕರ ವಂಶವೃತ್ತಾಂತಗಳಿಂದಲೂ ದಾತೃಪ್ರತಿಗ್ರಹೀತೃಗಳ ವರ್ಣನೆಗಳಿಂದಲೂ ತುಂಬಿ ಬಂದುದು. ಈ ಕಾಲದ ಶಾಸನಗಳು ಗದ್ಯ ಮತ್ತು ಪದ್ಯಗಳಿಂದ ರಚಿತವಾದ ಚಂಪೂ ಕಾವ್ಯದ ರೀತಿಯನ್ನು ಅನುಸರಿಸುವಂತಹವು. ಕೆಲ ಶಾಸನಗಳಂತೂ ಪ್ರತ್ಯೇಕವಾಗಿ ಲಘು ಚಂಪೂ ಕಾವ್ಯಗಳೇ ಎನಿಸುವಷ್ಟು ಸುದೀರ್ಘವೂ ಸುಲಲಿತವೂ ಆಗಿವೆ.

ಈ ಸಂನಿವೇಶದ ಕಾರಣಗಳನ್ನು ಕಂಡುಹಿಡಿಯಬೇಕಾದರೆ ನಾವು ಈ ಕಾಲದ

5

ಕರ್ನಾಟಕದ ವಿಶಾಲ ಜೀವನರಂಗಗಳ ಪರಿಯನ್ನು ಅವಲೋಕಿಸಬೇಕಾದುದು. ಕನ್ನ ಜನಗಳು ಬರಿಯ ರಾಜಕೀಯದಿಂದ ಮಾತ್ರವಲ್ಲ, ಉತ್ತಮ ಸಂಸ್ಕಾರಗಳ ಹೊಂದಿದ ಧರ್ಮ, ಸಾಹಿತ್ಯ, ಶಿಲ್ಪಕಲೆ, ಮೊದಲಾದ ಸಂಸ್ಕೃತಿಯ ಸುರಮ್ಯ ಸಂವಿಧಾ ಗಳಿಂದ ಘನತೆಯನ್ನು ಪಡೆದು ವೈಭವದಿಂದ ಬಾಳಿದ ಕಾಲವಿದು. ಸುಸಂಸ್ಕೃತವಾ ಈ ಬಾಳಿನ ಪ್ರತಿಬಿಂಬವು ಶಾಸನ ಸಾಹಿತ್ಯದಲ್ಲಿಯೂ ಮೂಡಿ ನಿಂತಿರುವುದು ಆಶ್ಚರ್ಯವಲ್ಲ ಪಂಪ, ಪೊನ್ನ, ರನ್ನರಂತಹ ಉನ್ನತ ಕವಿಗಳು ಈ ಕಾಲದಲ್ಲಿ ಉದಯಿಸಿ ಎಲ್ಲೆಲ್ಲಿಯೂ ಸಾಹಿತ್ಯದ ಸುಗ್ಗಿಯನ್ನು ಹರಡಿದರು. ಈ ಉತ್ತಮ ಕವಿಗಳಿಗೆ ಮಹಾಕವಿತ್ವವನ್ನು ನೀಡಿದ ಸಾಧಾರಣ, ಮಧ್ಯಮ ಕವಿಗಳನೇಕರು ಈ ಕಾಲದಲ್ಲಿ ಬಾಳಿರಬೇಕು. ಈ ಕವಿಗಳ ಅನೇಕರು—ಉತ್ತಮ ವರ್ಗದ ಕವಿಗಳು ಕೂಡ—ರಾಜರಿಗೂ ರಾಜ್ಯಾಧಿಕಾರಿಗಳಿಗ ವಿಶ್ವಾಸಪಾತ್ರರಾಗಿ ಅವರವರ ಪ್ರಶಸ್ತಿರೂಪವಾದ ಇಂತಹ ಶಾಸನಗಳನ್ನು ರಚಿ ಲನುವಾಗಿರಬೇಕು.

ಭಾಷಾಸೌಷ್ಠವ, ಅರ್ಥಗಾಂಭೀರ್ಯ, ಕಲ್ಪನಾ ವೈಚಿತ್ರ್ಯ, ವಿಷಯ ವೈವಿಧ್ಯ ವಿಪುಲತೆ, ಮೊದಲಾದ ಗುಣಗಳಿಂದ, ಹನ್ನೊಂದು ಮತ್ತು ಹನ್ನೆರಡು ಈ ಎರಡು ಶತಮಾ ಗಳಲ್ಲಿ ಸೃಷ್ಟಿಯಾದ ಶಾಸನ ಸಾಹಿತ್ಯವು ಮಿಕ್ಕ ಯಾವ ಎರಡು ಶತಮಾನಗಳ ನಿರ್ಮಿತವಾದ ಸಾಹಿತ್ಯಕ್ಕಿಂತಲೂ ಮಿಗಿಲೆನಿಸುವಂತಿದೆ. ಈ ಮುಂದಿನ ಒಂದೆರ ಶತಮಾನಗಳವರೆಗೆ ಶಾಸನ ಸಾಹಿತ್ಯದ ಈ ಪದ್ಧತಿಯ ಕಾವ್ಯಪರಂಪರೆ ಮುಂದುವರಿದು ಕಂಡು ಬಂದರೂ ಅದು ಹೆಚ್ಚಾಗಿ ಅನುಕರಣಾತ್ಮಕವೂ ಸಾಂಪ್ರದಾಯಿಕವೂ ಆ ಪರಿಣಮಿಸಿದುದರಿಂದ ಮೊದಲಿನ ಆ ಕಾಂತಿಗೆ ಎರವಾಗಬೇಕಾಯಿತು. ಹೀಗೆ ಇಳಿತಕ್ಕೆ ಈಡಾದ ಶಾಸನ ಸಾಹಿತ್ಯವು ವಿಜಯನಗರದ ಮತ್ತು ಅನಂತರಕಾಲದಲ್ಲಿ ಜಾರುತ್ತ ಜಾರುತ್ತ ಹೀನದಸೆಗೆ ಬಂದಿತು. ಸೊಗಸಿನ ರಚನೆ, ರಂಜಕತೆ, ಮೊದಲಾದ ಸಾಹಿತ್ಯದ ಹೆಚ್ಚಿನ ಗುಣಗಳ ಮಾತಂತೂ ಇರಲಿ, ಬರವಣಿಗೆಯ ಸಾಮಾನ್ಯ ಲಕ್ಷಣಗಳಾದ ಶುದ್ಧ ಭಾಷೆ ಮತ್ತು ನಿರ್ದುಷ್ಟ ಪ್ರಯೋಗ ಇವುಗಳಿಗೂ ಲೋಪವು ಅಂಟಿಕೊಂಡಿತು.

ವಿಜಯನಗರ ಸ್ಥಾಪನೆಯ ಪೂರ್ವದಲ್ಲಿ ಅನಾಯಕತೆ ಮತ್ತು ಪರಕೀಯ ಆಕ್ರಮಣದಿಂದ ದೇಶದಲ್ಲಿ ಉಂಟಾದ ಗೊಂದಲವು ಶಾಸನ ಸಾಹಿತ್ಯದ ಈ ಶೈಥಿಲ್ಯಕ್ಕೆ ಒಂದು ಕಾರಣವಾಗಿರಬಹುದು. ರಾಜಕೀಯದಲ್ಲಿಯ ಈ ಅಸ್ಥಿರತೆಯೊಡನೆ ಮ ಪ್ರಪಂಚದಲ್ಲಿಯ ಹೋರಾಟಗಳು ಮತ್ತು ಸಾಹಿತ್ಯರಂಗದಲ್ಲಿಯ ಹೊಸ ಒಲವುಗಳು ಕೈನೀ ಶಾಸನಸಾಹಿತ್ಯದ ಪೂರ್ವ ಪರಂಪರೆಯನ್ನು ಅಳಿಯಿಸಿ ಅದರ ಅಪಕರ್ಷಕ್ಕೆ ನೆರವಾಗಿ ಬಹುದು. ಲೇಖನಸಾಮಗ್ರಿಯ ಸುಲಭತೆ ಮತ್ತೊಂದು ಕಾರಣವಾಗಿರಬಹುದು. ಕಾರಣಗಳು ಎಂತಹವೇ ಆಗಿರಲಿ, ಸ್ಥೂಲವಾಗಿ ವಿಜಯನಗರದಿಂದ ಈಚೆಯ ಕಾಲ ಎಂದರೆ ೧೪ ರಿಂದ ೧೭ನೆಯ ಶತಮಾನದವರೆಗಿನ ಶಾಸನ ಸಾಹಿತ್ಯವು ನಮ್ಮ ಸಾಹಿತ್ಯ ವಿಮರ್ಶೆಯಲ್ಲಿ ಆಗಲಿ ಭಾಷಾಚರಿತ್ರೆಯಲ್ಲಿ ಆಗಲಿ ಅಂತಹ ಗಣ್ಯವಾದ ಸ್ಥಾನವನ್ನು ಪಡೆಯುವಂತಹದು ಆಗಿಲ್ಲ ಎಂಬುದು ನಿರ್ವಿವಾದವಾದ ವಿಷಯ. ಹದಿನೇಳನೆಯ ಶತಮಾನಕ್ಕೆ ಬರುವಷ್ಟರಲ್ಲಿ ನಮ್ಮ ರಾಜಕೀಯ ಮತ್ತು ಸಾಂಸ್ಕೃತಿಕ ವೈಭವವು ನಾಮಾ ಶೇಷವಾದಂತೆ ಶಾಸನಗಳಾದರೂ ತಮ್ಮ ಗೌರವವನ್ನು ಕಳೆದುಕೊಂಡುವು. ಆದುದರಿಂ ಸಾಹಿತ್ಯಮಂದಿರದಲ್ಲಿ ಅವುಗಳನ್ನು ಕೂರಿಸಿ ಅವುಗಳಿಗೆ ಪ್ರತ್ಯೇಕವಾಗಿ ಧೂಪ ದೀಪಗಳನ್ನು ತೋರಿಸುವ ಅಗತ್ಯವು ಹೆಚ್ಚಾಗಿ ತೋರುವುದಿಲ್ಲ.

ಸ್ಥೂಲವಾಗಿ ಹನ್ನೊಂದು ಮತ್ತು ಹನ್ನೆರಡು ಈ ಶತಮಾನಗಳ ಕಾಲಾವಧಿಯಲ್ಲಿ ವಿಸ್ತಾರಗೊಂಡ ಶಾಸನಪ್ರಪಂಚವು ಹೆಚ್ಚು ಸತ್ತ್ವಯುತವಾಗಿಯೂ ಸಾಹಿತ್ಯಸಂಭಾರದಿಂದ ಸಮೃದ್ಧವಾಗಿಯೂ ಶೋಭಿಸಿತು ಎಂಬ ಅಂಶವು ಮೇಲೆ ಸೂಚಿತವಾಗಿದೆಯಷ್ಟೆ. ಈ ಮಾತನ್ನು ಕೆಲವು ಉದಾಹರಣಗಳ ಮೂಲಕ ವಿಶದಗೊಳಿಸಿದರೆ ಉಚಿತವಾದೀತು. ಮೊದಲು ಈ ಕಾಲಾವಧಿಯ ಪ್ರಾರಂಭದಸೆಗೆ ಸೇರಬಹುದಾದ, ಧಾರವಾಡ ಜಿಲ್ಲೆ ಕುರಹಟ್ಟಿ ಗ್ರಾಮದ ಶಾಸನದಲ್ಲಿಯ ಎರಡು ಪದ್ಯಗಳನ್ನು ಎತ್ತಿಕೊಳ್ಳುವ. ಈ ಪದ್ಯಗಳಲ್ಲಿ ಕೆಂಚನೆಂಬ ಶೂರನಾಯಕನೊಬ್ಬನು ಬೆಳ್ವಲ ನಾಡನ್ನೂ ಆ ನಾಡಿನ ಮುಖ್ಯಪಟ್ಟಣವಾದ ನವಿಲ್ಗುಂದನ್ನೂ ಜಯಿಸಿದ ಸಂಗತಿಯನ್ನು ಹೇಳಿ, ಆತನ ಶೌರ್ಯದ ಮೇಲ್ಮೆಯನ್ನು ವರ್ಣಿಸಿದೆ.

ಪಿಡಿವಡಸಿ‍್ತನವಿಲ ಕೊಸ್ಡಡಿ
ಗಿಡೆ ತಳ್ತಿಕ್ಕಿ ಬೇಡವಡೆಯುಂ ಬಲ್ಲಾಳ್ ।
ಪಡೆವಂ ಬೆಳ್ವಲಮಂ ನೋ
ಳ್ಪಡೆ್ಯಮುನ್ನಂ ಬಳಿಕ್ಕೆನಲೆ ನವಿಲ್ಗುನ್ದಪುರಂ ॥

ಮೋರ್ತಲೆಯೆನಿಸಿದೊಂ ಕಲಿ
ತೋಱ್ತಿಳಿದುಳಿದಿಕ್ಕೆ ಪರೆಯ ಭಾನೂದಯದೊಳ್ ।
ಕರ್ತಲೆಯನ್ತಿರೆ ರಿಪುಗಳ್ ।
ಕರ್ತಲೆವೆಸರಾದುದಾತನೊಕ್ಕಲ್ವೆಸರುಂ ॥

*(Bombay Karnatak Inscriptions*
Vol. I, pt. I. No. 45.*)*

ಈ ಶಾಸನದ ಕಾಲ ಕ್ರಿ.ಶ. ೯೮೦. ಈ ಪದ್ಯಗಳ ರಚನೆಯಲ್ಲಿ ಪ್ರಾಚೀನ ಪ್ರಯೋಗಗಳ ಸಂಸ್ಕಾರದಿಂದ ಉಂಟಾದ ಒಂದು ಬಗೆಯ ಒರಟುತನವು ಕಾಣುತ್ತದೆ. ಆದರೆ ಮುಂದಿನ ಒಂದು ಶತಮಾನ ಕಳೆಯುವುದರೊಳಗೆ ಶಾಸನಗಳ ಭಾಷೆ, ವಿಷಯ ನಿರೂಪಣೆ, ಮೊದಲಾದ ವಿಧಾನಗಳಲ್ಲಿ ಒಂದು ವಿಶಿಷ್ಟ ಕ್ರಮವೂ ಹೆಚ್ಚಿನ ಅಚ್ಚುಕಟ್ಟೂ ಒಳ್ಳೆಯ ಸಂಸ್ಕಾರವೂ ವಿಕಸನಗೊಂಡಂತೆ ಗೋಚರವಾಗುತ್ತದೆ. ಈ ಕಾಲದ ಹಲವಾರು ಶಾಸನಗಳನ್ನು ಪರೀಕ್ಷಿಸಿದರೆ ಭಾಷಾಪ್ರಭುತ್ವ ಮತ್ತು ಕಾವ್ಯಪ್ರತಿಭೆಗಳುಳ್ಳ ಅನೇಕ ಲೇಖಕರು ತಮ್ಮ ಕಲಾಪ್ರದರ್ಶನಕ್ಕೆ ಶಾಸನಗಳು ತಕ್ಕ ಎಡೆ ಆಗಿವೆ ಎಂಬುದಾಗಿ ಎಣಿಸಿರಬೇಕೆಂತಲೂ ಆ ಬಗೆಯ ಅನುಕೂಲತೆ ಆಗಿನ ಕಾಲದ ಅರಸರು, ನಾಯಕರು ಮತ್ತು ಜನತೆ ಇವರುಗಳಿಂದ ಅವರಿಗೆ ಲಭಿಸಿರಬೇಕೆಂತಲೂ ಸ್ಫುಟವಾಗುತ್ತದೆ.

ಮೊದಮೊದಲಿನ ಶಾಸನಗಳಲ್ಲಿ ಪ್ರಾಯಿಕವಾಗಿ ಕಂದಪದ್ಯಗಳ ಹೆಚ್ಚಳವು ಕಂಗೊಳಿಸುವುದು. ಮುಂದೆ ಮುಂದೆ ಕಂದಪದ್ಯಗಳ ಜೊತೆಗೆ ಚಂಪಕಮಾಲೆ, ಉತ್ಪಲಮಾಲೆ, ಮತ್ತೇಭವಿಕ್ರೀಡಿತ, ಮೊದಲಾದ ಗಣವೃತ್ತಗಳು ಶಾಸನ ಮಂದಿರದಲ್ಲಿ ಪ್ರವೇಶ ಮಾಡುವುವು. ಈ ವಿಧವಾದ ರಚನೆಯ ವೈವಿಧ್ಯವನ್ನು ವಿಂಗಡಿಸಿ ತೋರಿಸಲು ಕಂದ, ವೃತ್ತ, ಮತ್ತು ವಚನ ಎಂಬೀ ವರ್ಗೀಕರಣ ಸೂಚಕವಾದ ನಿರ್ದೇಶಗಳು ಶಾಸನಗಳಲ್ಲಿ ಕಾಣಿಸಿಕೊಳ್ಳುವುವು. ಕೆಲವು ಶಾಸನಗಳಲ್ಲಿ ಈ ಮೂರು ಪ್ರಧಾನ ವಿಭಾಗಗಳಲ್ಲದೆ ಬೇರೆ ಛಂದಸ್ಸಿನಲ್ಲಿಯೂ ರಚನೆಯಾದಂತೆಯೂ ಆ ಆ ರಚನೆಗಳ ವಿಧಾನವನ್ನು ಸ್ಪಷ್ಟವಾಗಿ ಬೇರ್ಪಡಿಸಿ ತೋರಿಸಲು ತ್ರಿಪದಿ, ರಗಳೆ, ಮುಂತಾದುವುಗಳ ನಿರ್ದೇಶಗಳೂ ದೊರೆಯುತ್ತವೆ. ಸಾಮಾನ್ಯ ವಚನಗಳಲ್ಲದೆ ಸಂಸ್ಕೃತದಲ್ಲಿಯ ದಂಡಕದಂತಹ ಗದ್ಯಪ್ರಕಾರದ ರೀತಿಯಲ್ಲಿ

ರಚಿತವಾದ, ಅನುಪ್ರಾಸಯುಕ್ತ ಮತ್ತು ತಾಳಬದ್ಧವಾದ, ಅಲಂಕಾರಿಕ ಗದ್ಯರಚನೆಯು ನಡೆದಂತೆ ಕೆಲವೆಡೆ ವ್ಯಕ್ತವಾಗುತ್ತದೆ. ಇಂತಹ ರಚನೆಯನ್ನು ವಿಂಗಡಿಸಿ ಗದ್ಯವೆಂಬುದಾಗಿ ನಿರ್ದೇಶಿಸಿದ ಉದಾಹರಣೆಗಳೂ ಸಿಕ್ಕುತ್ತವೆ.

ಈ ಮೇಲಿನ ವಿವೇಚನೆಗೆ ನಾನು ಮುಖ್ಯವಾಗಿ ಲಕ್ಷ್ಯವೆಂದು ಇಟ್ಟುಕೊಂಡುದು ದಕ್ಷಿಣ ಭಾರತೀಯ ಶಾಸನಾವಳಿಯ *(South Indian Inscriptions)* ಒಂಬತ್ತನೆಯ ಸಂಪುಟದ ಒಂದನೆಯ ಭಾಗದಲ್ಲಿಯ ನೂರರಿಂದ ಮುನ್ನೂರರ ವರೆಗಿನ ಅಂಕವುಳ್ಳ ಸುಮಾರು ಎರಡು ನೂರು ಶಾಸನಗಳು. ಈ ಶಾಸನಗಳು ಕಾಲಾನುಕ್ರಮದಿಂದ ಸಂಗ್ರಹಿಸಿ ಪರಿಷ್ಕರಿಸಿ ಪ್ರಕಟವಾದುವು ಆಗಿರುವುದರಿಂದ ಇಂತಹ ವಿವೇಚನೆಗೆ ಇವು ಬಹುಮಟ್ಟಿಗೆ ಸಹಾಯಕಾರಿಯಾದುವು ಎಂಬುದನ್ನು ಬಲ್ಲವರಿಗೆ ಬೇರೆಯಾಗಿ ಹೇಳುವ ಅಗತ್ಯವಿಲ್ಲ. ಮೇಲೆ ಸೂಚಿಸಿದಂತೆ ಶಾಸನಗಳಲ್ಲಿ ವಿಶೇಷರೀತಿಯಿಂದ ಬರುವ ತ್ರಿಪದಿ, ರಗಳೆ ಮತ್ತು ಅಲಂಕಾರಿಕ ಗದ್ಯ ಇವುಗಳ ಉದಾಹರಣೆಗಾಗಿ ಈ ಸಂಪುಟದ ೧೧೭, ೧೪೧, ೧೫೮, ೧೬೫, ೨೦೦, ೨೯೬ ಮತ್ತು ೨೯೭ ಈ ಅಂಕಗಳ ಶಾಸನಗಳನ್ನು ಪರಿಶೀಲಿಸುವುದಾಗಿ ಜಿಜ್ಞಾಸುಗಳಲ್ಲಿ ಪ್ರಾರ್ಥಿಸುವೆ.

## ೨ ದೇಸಿಯ ರಚನೆ

—ಕನ್ನಡಂಗಳೊಳೆಂದುಂ ॥
ವಾಸುಗಿಯುಮಱಿಯಲಾಱದೆ ।
ಬೇಸಱುಗುಂ ದೇಶಿ ಬೇಱೆ ಬೇಱಪ್ಪುದಱಿಂ ॥ ೪೬
—ಕವಿರಾಜಮಾರ್ಗ

ಮೇಲಿನ ವಿವೇಚನೆಯಲ್ಲಿ ಮಾರ್ಗಾನುಸಾರಿಯಾದ ವೃತ್ತಾದಿ ರಚನೆಗಳಲ್ಲದೆ ಶಾಸನ ಸಾಹಿತ್ಯದಲ್ಲಿ ದೊರಕುವ ತ್ರಿಪದಿ, ರಗಳೆ, ಮೊದಲಾದ ವಿಶಿಷ್ಟ ರಚನೆಗಳನ್ನು ಕುರಿತು ನಿರ್ದೇಶಿಸಲಾಗಿದೆ. ಈ ರಚನೆಗಳು ದೇಸಿಯ ಬಗೆಯವು; ಮೊದಲು ಜಾನಪದ ಜೀವನದಲ್ಲಿ ಉದಯಿಸಿ ವಿದ್ಯಾವಂತರ ಸಂಸ್ಕಾರದಿಂದ ಕಾವ್ಯ ಪ್ರಪಂಚಕ್ಕೆ ಏರಿದಂತಹವು. ಈ ವಿಧದ ರಚನೆಗಳು ಕನ್ನಡ ಸಾಹಿತ್ಯದಲ್ಲಿ ಪ್ರಾರಂಭದಿಂದಲೂ ಬಾಳಿದ್ದಂತೆಯೂ ಅವುಗಳ ಸಂಪರ್ಕದಿಂದ ನಮ್ಮ ಸಾಹಿತ್ಯದಲ್ಲಿ ಕೆಲವು ಗುಣಾಂಶಗಳು ಉಂಟಾದಂತೆಯೂ ಸಾಹಿತ್ಯ ವಿಮರ್ಶಕರು ಇದುವರೆಗೆ ಎತ್ತಿ ತೋರಿಸಿದ್ದಾರೆ. ಆದರೆ ಈ ಬಗೆಯ ದೇಸಿಯ ರಚನೆಗಳು ಶಾಸನ ಸಾಹಿತ್ಯದಲ್ಲಿಯೂ ಗಣ್ಯವಾದ ರೀತಿಯಲ್ಲಿ ದೊರಕುತ್ತಿದ್ದು, ಅವುಗಳ ಪರಿಶೀಲನೆಯಿಂದ ಸಾಹಿತ್ಯದ ವಿಚಾರವಾಗಿ ಇದುವರೆಗೆ ನಮ್ಮಲ್ಲಿ ನೆಲಸಿದ್ದ ಕೆಲವು ಗ್ರಹಿಕೆಗಳು ಮಾರ್ಪಾಟುಗೊಳ್ಳಬೇಕಾಗುವುದು ಎಂಬ ಸಂಗತಿ ವಿಮರ್ಶಕರ ಗಮನಕ್ಕೆ ಹೆಚ್ಚಾಗಿ ಬಂದಂತೆ ತೋರುವುದಿಲ್ಲ. ಆದುದರಿಂದ ಶಾಸನ ಸಾಹಿತ್ಯದಲ್ಲಿ ದೊರಕುವ ಕೆಲವು ದೇಸಿಯ ರಚನೆಗಳನ್ನು ಪ್ರಾಮುಖ್ಯತೆಯಿಂದ ಎತ್ತಿ ತೋರಿಸಿ, ಇವುಗಳ ಯಥೋಚಿತ ವ್ಯಾಸಂಗದಿಂದ ನಮ್ಮ ಸಾಹಿತ್ಯ ವಿಮರ್ಶೆಯಲ್ಲಿ ಹುಟ್ಟುವ ಪರಿಣಾಮಗಳನ್ನು ಕೊಂಚ ವಿಸ್ತಾರದಿಂದ ಈ ಭಾಗದಲ್ಲಿ ಚರ್ಚಿಸುವೆ.

ನೃಪತುಂಗನು ಬೆದಂಡೆ ಮತ್ತು ಚತ್ತಾಣ ಇವುಗಳ ಲಕ್ಷಣವನ್ನು ಹೇಳುವಾಗ (ಕವಿರಾಜಮಾರ್ಗ, ಒಂದನೆಯ ಪರಿಚ್ಛೇದ ೩೩–೩೪ನೆಯ ಪದ್ಯಗಳು) ನಿರೂಪಿಸಿದ ಜಾತಿ, ಚೌಪದಿ, ಗೀತಿಕೆ, ತಿವಿದಿ (ತ್ರಿಪದಿ) ಮೊದಲಾದ ಪದ್ಯ ಪ್ರಕಾರಗಳನ್ನು ಮತ್ತು ಈಚೆಯ

ಕಾಲದ ಒಂದು ಶಾಸನದಲ್ಲಿ (*Ep. Carn.* Vol. VIII, Nagar 35) ಉದ್ದೇಶಪೂರ್ವಕವಾಗಿ ನಿರ್ದೇಶಿಸಿದ ಗಂಗರಸ ಶಿವಮಾರನ 'ಒನಕೆವಾಡು' ಎಂಬ ಜಾನಪದ ಕೃತಿಯನ್ನು ಲಕ್ಷಿಸಿದರೆ ಈ ಜಾತಿಯ ದೇಸಿಯ ಪದ್ಯರಚನೆ ಕನ್ನಡದಲ್ಲಿ ಕೆಲ ಪ್ರಮಾಣದಿಂದ ನಡೆಯು ತ್ತಿರಬೇಕು ಮಾತ್ರವಲ್ಲದೆ ಮಾನ್ಯ ಕವಿಗಳ ಮತ್ತು ಲಕ್ಷಣಕಾರರ ಆದರಣೆಗೂ ಪಾತ್ರ ವಾಗಿದ್ದಿರಬೇಕು ಎಂಬ ನಂಬಿಕೆ ಹುಟ್ಟುತ್ತದೆ. ಪಂಪ, ಪೊನ್ನರಂತಹ ಶ್ರೇಷ್ಠ ಕವಿಗಳು ಕೂಡ ತಮ್ಮ ಮಹಾಕಾವ್ಯಗಳಲ್ಲಿ ಪಿರಿಯಕ್ಕರ, ರಗಳೆ, ಮೊದಲಾದ ದೇಸಿ ವೃತ್ತಗಳಿಗೆ ಅಲ್ಲಲ್ಲಿ ಎಡೆಕೊಟ್ಟಿರುವುದನ್ನು ನೋಡಿದರೆ ಈ ನಂಬುಗೆ ಸ್ಥಿರವಾಗುತ್ತದೆ.

ಬಾದಾಮಿಯ ತಟ್ಟಿಕೋಟೆಯ ಬಳಿಯ ಕಲ್ಲುಬಂಡೆಯ ಮೇಲೆ ಒಂದು ಶಾಸನ ವನ್ನು ಕಂಡರಿಸಿದ್ದು ಅದರಲ್ಲಿ ಕಪ್ಪೇ ಅರಭಟ್ಟನೆಂಬ ಒಬ್ಬ ಗಣ್ಯವ್ಯಕ್ತಿಯ ವರ್ಣನೆ ಬರುತ್ತದೆ (*Indian Antiquary* Vol. X. p. 61). ಈ ವರ್ಣನೆಯೆಲ್ಲವು ಪದ್ಯರೂಪವಾಗಿದೆ. ಈ ಪದ್ಯದಲ್ಲಿ ಅನುಷ್ಟುಭ್ ವೃತ್ತದ ಒಂದು ಸಂಸ್ಕೃತ ಶ್ಲೋಕವು ಸೇರಿಕೊಂಡಿದೆ. ಇನ್ನೊಂದೆಡೆ ಅದೇ ವೃತ್ತದ ಇನ್ನೊಂದು ಸಂಸ್ಕೃತ ಶ್ಲೋಕದ ಪಾದವು ಉದಾಹೃತವಾಗಿದೆ. ಇಷ್ಟನ್ನುಳಿದರೆ ಮಿಕ್ಕ ಪಂಕ್ತಿಗಳೆಲ್ಲ ಕನ್ನಡ ಪದ್ಯವಾಗಿಯೇ ಇವೆ. ಈ ಪದ್ಯದ ಭಾಷೆ ಹಳಗನ್ನಡ. ಈ ಪದ್ಯಗಳ ವೃತ್ತ ಯಾವುದು ಎಂಬ ಸೂಚನೆ ಶಾಸನದಲ್ಲಿ ನಿರ್ದಿಷ್ಟವಾಗದೆ ಇದ್ದರೂ ಅವುಗಳನ್ನು ತ್ರಿಪದಿಯ ಪಡಿಕಟ್ಟಿನಲ್ಲಿ ಕೂರಿಸಬಹುದು*.

ನಾಗವರ್ಮನು ಛಂದೋಂಬುಧಿಯಲ್ಲಿ 'ಬಿಸರುಹೋದ್ಭವಗಣಂ—' ಮುಂತಾಗಿ ತ್ರಿಪದಿಯ ಲಕ್ಷಣಗಳನ್ನು ಹೇಳಿದ್ದಾನೆ. ಈ ಲಕ್ಷಣಗಳ ಕಟ್ಟುನಿಟ್ಟಿನಲ್ಲಿ ಸಿಲುಕಿಯೂ ಸಿಲುಕದೆಯೂ ವಿಧವಿಧವಾಗಿ ವಿಸ್ತಾರಗೊಂಡ ತ್ರಿಪದಿಯ ರಚನೆ ವಾಙ್ಮಯದಲ್ಲಿ ದೊರಕುತ್ತದೆ. ಇವೆಲ್ಲವುಗಳಿಗೆ ಮೂಲವೂ ಮುಖ್ಯವೂ ಆದುದು ಜಾನಪದ ತ್ರಿಪದಿ, ತಾಳ ಪ್ರಧಾನವಾದ ಗೇಯ ತ್ರಿಪದಿ. ಇದರ ಸ್ಥೂಲ ಲಕ್ಷಣವು ಇಂತು: ಇದರ ಎರಡು ಪಾದಗಳಲ್ಲಿ ೫।೫ ಮಾತ್ರೆಯ ನಾಲ್ಕು ಗಣಗಳು ಮತ್ತು ಮೂರನೆಯ ಪಾದದಲ್ಲಿ ಮೂರು ಗಣಗಳು ಇರುವುವು. 'ಇವುಗಳಲ್ಲಿ ಮಾತ್ರಾಗಣಗಳು ಕೆಲವೆಡೆ ಸ್ಪಷ್ಟವಾಗಿ ತೋರುವುವು. ಮತ್ತೆ ಕೆಲವೆಡೆಯಲ್ಲಿ ಹೇಳುವಾಗ ಲಯವನ್ನು ಅನುಸರಿಸಿ ಅಕ್ಷರಗಳನ್ನು ಎಳೆಯುವುದರಿಂದ ಮಾತ್ರಾಗಣಗಳನ್ನು ತಿಳಿಯಬೇಕು.' (ಕನ್ನಡ ಕೈಪಿಡಿ)

ನಿಜವಾಗಿ ನೋಡಿದರೆ, ಮೊದಲು ಜನತೆಯ ಬಾಯಲ್ಲಿ ಹಾಡಿನ ರೂಪವಾಗಿ ತಲತಲಾಂತರಗಳಿಂದ ಬಳಕೆಯಾಗಿದ್ದ ಈ ರಚನೆಯನ್ನು ವಿದ್ಯಾವಂತರು ಎತ್ತಿಕೊಂಡು, ಅದಕ್ಕೆ ತ್ರಿಪದಿ ಎಂಬ ಸಂಸ್ಕೃತ ಹೆಸರನ್ನು ಕೊಟ್ಟು ಅದಕ್ಕೆ ಲಕ್ಷಣಗಳ ನಿರ್ಬಂಧವನ್ನು ಹಾಕಲು ಪ್ರಯತ್ನಿಸಿದರು ಎಂದು ತೋರುತ್ತದೆ. ಇದು ಹಾಡಿನ ರೂಪದಲ್ಲಿ ಇದ್ದುದರ ಮೂಲಕ ಮಾತ್ರಾದಿ ನಿಯಮಗಳ ಕಟ್ಟುಪಾಡಿಗೆ ಅಷ್ಟು ಸರಿಯಾಗಿ ಸಿಲುಕಲಾರದು ಎಂಬುದನ್ನು ಕಂಡ ಲಕ್ಷಣಕಾರರು ಬ್ರಹ್ಮ, ವಿಷ್ಣು, ಎಂಬೀ ವೈಕಲ್ಪಿಕ ಮಾತ್ರಾಗಣಗಳ ಸೌಕರ್ಯವನ್ನು ಕಲ್ಪಿಸಿಕೊಟ್ಟು ಇದರ ಸ್ವಾತಂತ್ರ್ಯಕ್ಕೆ ಮಾರ್ಗವನ್ನು ನೀಡಿದರು. ಆದರೂ ಇದು ಜಾನಪದ ಗೀತಗಳಲ್ಲಿ ತನ್ನದೆ ಆದ ರೀತಿಯಿಂದ ನಡೆದುಕೊಂಡು ಹೋಗಿರಬೇಕು.

---

* ಈ ವಿಚಾರವಾಗಿ ಹಿಂದೆ 'ಜಯಕರ್ನಾಟಕ' ಪತ್ರಿಕೆಯಲ್ಲಿ ಒಂದು ಲೇಖನ ಪ್ರಕಟವಾಗಿದೆ ಎಂದು ತಿಳಿಯಿತು. ಆದರೆ ಆ ಲೇಖನ ನನಗೆ ನೋಡಲು ಸಿಕ್ಕಲಿಲ್ಲ.

ಆದುದರಿಂದಲೇ ಜಾನಪದ ತ್ರಿಪದಿಗಳು ಎಲ್ಲವು ಲಕ್ಷಣಕಾರರ ಲಕ್ಷಣಗಳಿಗೆ ಸಮಗ್ರವಾ ಅನ್ವಯಿಸುವಂತೆ ಕಂಡುಬರುವುದಿಲ್ಲ.†

ಈ ಶಾಸನದಲ್ಲಿ ಕಾಲವು ನಿರ್ದಿಷ್ಟವಾಗಿಲ್ಲ. ಆದರೂ ಪ್ರಾಚೀನ ಲಿಪಿಶಾಸ್ತ್ರ ಸಹಾಯದಿಂದ ಇದನ್ನು ಸುಮಾರು ೮ನೆಯ ಶತಮಾನದ ಆರಂಭದಲ್ಲಿ ಇರಿಸ ಬಹುದು. ಎಂದರೆ ಇದು ಕನ್ನಡದ ಮೊದಲನೆಯ ಲಕ್ಷಣಕಾರನಾದ ನೃಪತುಂಗನಿಗಿಂತ ಒಂದು ಶತಮಾನ, ಆದಿಕವಿ ಪಂಪನಿಗಿಂತ ಎರಡು ಶತಮಾನ ಹಿಂದಿನದು. ಈ ತ್ರಿಪದಿಯ ರಚನೆಯಾಗಿ ಸು. ಎರಡೂವರೆ ಶತಮಾನಗಳು ಉರುಳಿದ ಬಳಿಕ ನಾಗವರ್ಮನು ಇಂತಹ ತ್ರಿಪದಿಗೆ ಲಕ್ಷಣಗಳನ್ನು ಹೇಳಹೊರಟನು. ಇದು ಇದುವರೆಗೆ ಉಪಲಬ್ಧವಾಗಿರುವ ಕನ್ನಡ ಸಾಹಿತ್ಯದ ಮೊದಲನೆಯ ಪದ್ಯರಚನೆಗಳಲ್ಲಿ ಒಂದು ಎನ್ನಬಹುದು. ಇಂತಹ ಈ ಪದ್ಯರಚನೆ ಜಾನಪದ ಹಾಡಿನ ತ್ರಿಪದಿಯ ರೂಪವಾಗಿ ದೊರೆತುದು ಸಂಸ್ಮರಣೀಯವಾಗಿದೆ. ಇದರ ಮೇಲಿಂದ ಕನ್ನಡದ ಆದಿಕವಿಗಳಿಗೆ ಕಾವ್ಯ ಸ್ಫೂರ್ತಿಯನ್ನು ನೀಡಿದುವು ಜಾನಪದ ಗೀತ ಗಳೆಂದೂ ಅವರು ಮೊದಮೊದಲು ಹೆಚ್ಚಾಗಿ ಈ ದೇಸಿಯ ದಾರಿಯನ್ನೇ ಅನುಸರಿಸಿರ ಬೇಕೆಂದೂ ಊಹಿಸುವಂತಿದೆ. ಇದು ಸ್ವಾಭಾವಿಕವಾದುದೆ. ಮುಂದೆ ದೇಸಿ ಹಿಂದೆ ಬಿದ್ದು ಮಾರ್ಗವು ಪ್ರಬಲಿಸಿತು. ಆದರೂ ಪಂಪನಂತಹ ಉದ್ದಾಮ ಕವಿಗಳ ಪ್ರತಿಭೆ ಕೆಲಮಟ್ಟಿಗಾದರೂ ದೇಸಿಯತ್ತ ಒಲೆಯುತ್ತಲೆ ಇದ್ದಿತು ಎಂಬುದಕ್ಕೆ ಆ ಕವಿಗಳ ಕಾವ್ಯ ಗಳಲ್ಲಿ ದೊರೆಯುವ ದೇಸಿಯ ಬಗೆಗಳು ನಿದರ್ಶನವಾಗಿವೆ.

ಇದೇ ವಿಧವಾಗಿ ಪ್ರಾಚೀನ ತೆಲುಗು ಸಾಹಿತ್ಯದ ಪ್ರಥಮ ಕುರುಹುಗಳಾದ ಪ್ರಾಚೀನ ತೆಲುಗು ಶಾಸನಗಳಲ್ಲಿಯ ಮೊತ್ತ ಮೊದಲಿನ ಪದ್ಯಗಳು ದೇಸಿಯ ರಚನೆಯಾಗಿವೆ ಎಂಬುದನ್ನು ಈ ಪ್ರಬಂಧದ ಮುಂದಿನ ಭಾಗದಲ್ಲಿ ವಿವೇಚಿಸಲಿರುವೆನು.

ಈ ಶಾಸನ ಪಂಕ್ತಿಗಳಲ್ಲಿ ಎರಡು ಸಮಗ್ರ ಕನ್ನಡ ತ್ರಿಪದಿಗಳು ಅಡಕವಾಗಿವೆ. ಅವುಗಳನ್ನು ಇಲ್ಲಿ ಎತ್ತಿ ತೋರಿಸುವೆ:

ಸಾಧುಗೆ ಸಾಧು ಮಾಧುರ್ಯ್ಯನ್ಗೆ ಮಾಧುರ್ಯ್ಯಂ ।
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್ ।
ಮಾಧವನೀತನ್ ಪೆಱನಲ್ಲ ॥೧

ಕಟ್ಟಿದ ಸಿಂಘಮನ್ ಕೆಟ್ಟೊಡೇನೆಮಗೆನ್ದು ।
ಬಿಟ್ಟವೋಲ್ ಕಲಿಗೆ ವಿಪರೀತಂಗಹಿತರ್ಕ್ಕಳ್ ।
ಕೆಟ್ಟರ್ಮೇಣ್ ಸತ್ತರವಿಚಾರವರ್ ॥೨

ಹಾಡಿನ ತ್ರಿಪದಿಗೂ ಸಾಂಗತ್ಯಕ್ಕೂ ನಿಕಟ ಸಂಬಂಧವಿದೆ. ತ್ರಿಪದಿಯನ್ನು ಹೇಳುವ ಒಂದು ವಿಶಿಷ್ಟ ರೀತಿಯಲ್ಲಿಯೆ ಸಾಂಗತ್ಯವು ಉಂಟಾಗಿರಬೇಕು. ಅದು ಹೇಗೆ ಎಂಬುದನ್ನು ಈ ಮುಂದಿನ ಇನ್ನೊಂದು ಶಾಸನದ ಉದಾಹರಣೆಯಲ್ಲಿ ತೋರಿಸಲಿರುವೆ. ಇದರಿಂದ

---

† ತ್ರಿಪದಿಯ ಲಕ್ಷಣವನ್ನು ಕುರಿತು ಭಿನ್ನಾಭಿಪ್ರಾಯಗಳಿವೆ. ಇಲ್ಲಿ ಬರುವ ಗಣಗಳು ಮಾತ್ರಾಗಣ ಗಳಲ್ಲವೆಂದೂ ದ್ರಾವಿಡ ಛಂದಸ್ಸಿಗೇ ಮೂಲವಾದ ಅಂಶಗಣಗಳೆಂದೂ ಇವನ್ನೇ ನಾಗವರ್ಮನು ತನ್ನ 'ಕರ್ಣಾಟಕ ವಿಷಯ ಜಾತಿ' ಪ್ರಕರಣದಲ್ಲಿ ನಿರೂಪಿಸಿದ್ದಾನೆಂದೂ ಇರುವ ಅಭಿಪ್ರಾಯದಲ್ಲಿ ಸಾರವಿರುವಂತಿದೆ. ಶಾಸನಗಳಲ್ಲೂ ಪಂಪಾದಿಗಳ ಕಾವ್ಯಗಳಲ್ಲೂ ದೊರಕುವ ತ್ರಿಪದಿಗಳು ನಾಗವರ್ಮನ ಲಕ್ಷಣಕ್ಕೆ ಅನುಸಾರವಾಗಿವೆ. ಈ ವಿಷಯದಲ್ಲಿ 'ಕನ್ನಡ ಕೈಪಿಡಿ'ಯಲ್ಲಿರುವ ಚರ್ಚೆಯನ್ನು ನೋಡಬಹುದು. (ಸಂ)

ಸಾಂಗತ್ಯದ ಪ್ರಾಚೀನತೆಯಾದರೂ ತ್ರಿಪದಿಯಷ್ಟು ಹಿಂದಕ್ಕೆ ಹೋಗುತ್ತದೆ. ಈ ಮೇಲಿನ ತ್ರಿಪದಿಯ ಪದ್ಯಗಳನ್ನು ಸಾಂಗತ್ಯರೂಪವಾಗಿಯೂ ಹಾಡಬಹುದು. ಅದರ ಪರಿ ಹೀಗೆ :

ಸಾಧುಗೆ ಸಾಧು ಮಾಧುರ್ಯ್ಯಂಗೆ ಮಾಧುರ್ಯ್ಯಂ ।
ಬಾಧಿಪ್ಪ ಕಲಿಗೆ ಕಲಿಯುಗ॥
ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್ ।
ಮಾಧವನೀತನ್ ಪೆಱನಲ್ಲ ॥೧

ಕಟ್ಟಿದ ಸಿಂಘಮನ್ ಕೆಟ್ಟೊಡೇನೆಮಗೆನ್ದು ।
ಬಿಟ್ಟವ್ರೋಲ್ ಕಲಿಗೆ ವಿಪರೀತಂ ॥
ಬಿಟ್ಟವ್ರೋಲ್ ಕಲಿಗೆ ವಿಪರೀತಂಗಹಿತರ್ಕಳ್ ।
ಕೆಟ್ಟಮೆರ್ೞಿಣ್ ಸತ್ತರವಿಚಾರಂ ॥೨

ಇದಾದ ಬಳಿಕ ಸುಮಾರು ಮೂರು ಶತಮಾನಗಳ ಈಚೆಗೆ ಬಂದು ನೃಪತುಂಗಾದಿ ಲಕ್ಷಣಕಾರರಿಂದ ನಿಯಮಿತವಾದ ಸಾಹಿತ್ಯಯುಗದಲ್ಲಿ ಪ್ರವೇಶಿಸುವ. ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ತಾಲೂಕಿನ ನೀಲಗುಂದ ಗ್ರಾಮದ ಒಂದು ಶಾಸನದಲ್ಲಿ ತ್ರಿಪದಿ ರೂಪವಾಗಿ ರಚಿತವಾದ ಪದ್ಯಗಳು ಸಿಕ್ಕುತ್ತವೆ. (*S. I. I.* Vol. IX, pt. I, No. 141). ಈ ಶಾಸನ ಕಾಲ ಕ್ರಿ.ವ. ೧೦೭೯. ಈ ಪದ್ಯಗಳು ಇಂತು :

ನಾಡುಗಳೊಳಗೆಲ್ಲ ಗಾಡಿವೆತ್ತ ಸಮುದ
ನಾಡುಗಳರಸನತಿಚೆಲ್ವ ಕೋಗಳಿ
ನಾಡು ನೋಡಲ್ಕೆ ಸೊಗಯಿಕ್ಕುಂ ॥

ಆ ನಾಡೊಳೆಸೆವುದು ನಾನಾವಿದ್ವಜ್ಜನ
ಸ್ಥಾನಂ ನೀರ್ಗುಂದವೆಸಿಪಗ್ರಹಾರವ
ತ್ಯಾನಂದಕಾರಿ ಜಗಕೆಲ್ಲಂ ॥

(ಪಂಕ್ತಿಗಳು ೧೦–೧೨)

ಶಾಸನದಲ್ಲಿ ಇದು ತ್ರಿಪದಿಯೆಂದು ಕಂಠೋಕ್ತವಾಗಿ ಹೇಳಿದೆ. ನಾಗವರ್ಮನ ತ್ರಿಪದಿಯ ಲಕ್ಷಣಕ್ಕೆ ಇದು ಸರಿಯಾಗಿ ಅನ್ವಯಿಸುವುದಿಲ್ಲವಾದರೂ* ಈ ಮೇಲೆ ವಿವೇಚಿಸಿದಂತೆ ಮುಖ್ಯವಾಗಿ ಹಾಡಿನ ರೂಪದಿಂದ ಜಾನಪದ ಪ್ರಪಂಚದಲ್ಲಿ ಹುಟ್ಟಿ ಬೆಳೆದು ಆಮೇಲೆ ಲಕ್ಷಣಕಾರರ ಕೈಗೆ ಬಿದ್ದ, ಇಂತಹ ತಾಳ ಲಯ ಗತಿಗಳ ಪ್ರಾಧಾನ್ಯವುಳ್ಳ, ವೃತ್ತಗಳಲ್ಲಿ ಕಟ್ಟುನಿಟ್ಟಿನ ಮಾತ್ರಾನಿಯಮಗಳನ್ನಾಗಲಿ, ಬ್ರಹ್ಮ, ವಿಷ್ಣು, ಮೊದಲಾದ ಗಣಗಳ ಸಾಂಕೇತಿಕ ನಿರ್ಬಂಧಗಳನ್ನಾಗಲಿ, ನಿರೀಕ್ಷಿಸಿ ಅವುಗಳ ಒರೆಗಲ್ಲಿನ ಮೇಲೆ ಈ ರಚನೆಗಳ ಔಚಿತ್ಯವನ್ನು ನಿರ್ಧರಿಸುವುದು ಸಮಂಜಸವಾಗಲಾರದು. ಮೇಲಾಗಿ ಮೇಲಿನ ತ್ರಿಪದಿಯ ಪದ್ಯಗಳನ್ನು ಲಕ್ಷ್ಯಪೂರ್ವಕವಾಗಿ ಓದಿದರೆ ಅವು ಹಾಡಿನ ರೂಪವಾಗಿಯೆ ರಚಿಸಲಾಗಿದ್ದು, ಗೇಯದ ರೀತಿಯಿಂದಲೆ ಅವುಗಳನ್ನು ಅವಲೋಕಿಸುವುದು ಯುಕ್ತ ಎಂಬ ಅಭಿಪ್ರಾಯವು ನಿಶ್ಚಿತವಾಗುತ್ತದೆ.

ಇನ್ನಿಷ್ಟು ವಿಮರ್ಶನ ಪೂರ್ವಕವಾಗಿ ನೋಡಿದರೆ ಮೇಲಿನ ತ್ರಿಪದಿಯ ಪದ್ಯಗಳು

---

* ಈ ಪದ್ಯಗಳಲ್ಲಿ ಛಂದಸ್ಸಿನ ಕ್ಲೇಶವೇನೂ ಇರುವಂತೆ ಕಾಣುವುದಿಲ್ಲ. (ಸಂ)

ಈಚೆಯ ಕಾಲದ ಸಾಹಿತ್ಯದಲ್ಲಿ ಹೆಚ್ಚಾಗಿ ಬಳಕೆಗೆ ಬಂದ ಸಾಂಗತ್ಯದ ಧಾಟಿಗೆ ಸೇರು ವಂತಹವು ಆಗಿವೆ ಎಂಬ ಸಂಗತಿಯೂ ಅವಗಾಹನೆಗೆ ಬರುತ್ತದೆ. ಈ ಅಂಶವನ್ನು ವಿಶ ಗೊಳಿಸಲು ಈ ಪದ್ಯಗಳನ್ನು ಸಾಂಗತ್ಯರೂಪದಲ್ಲಿ ಹೀಗೆ ಬರೆದು ತೋರಿಸಬಹುದು.

ನಾಡುಗಳೊಳಗೆಲ್ಲ ಗಾಡಿವೆತ್ತಸಮುದ ।
ನಾಡುಗಳರಸನತಿಚೆಲ್ವ ॥
ನಾಡುಗಳರಸ ನತಿಚೆಲ್ವ ಕೋಗಳಿ ।
ನಾಡು ನೋಡಲ್ಕೆ ಸೊಗಯಿಕ್ಕುಂ ॥

ಆ ನಾಡೊಳೆಸೆವುದು ನಾನಾ ವಿದ್ವಜ್ಜನ ।
ಸ್ಥಾನಂ ನೀರ್ಗುಂದವೆನಿಪ ॥
ಸ್ಥಾನಂ ನೀರ್ಗುಂದವೆನಿಪಗ್ರಹಾರವ ।
ತ್ಯಾನಂದಕಾರಿ ಜಗಕೆಲ್ಲಂ ॥

ಸಾಂಗತ್ಯ ರೂಪದಲ್ಲಿ ಬರೆದ ಈ ಮೇಲಿನ ಪದ್ಯಗಳನ್ನು ಓದಿದರೆ, ಇವುಗಳಿಗೂ ಈಚೆಯ ಕಾಲದ ಸಾಂಗತ್ಯ ರಚನೆಗೂ ಅಂತಹ ವ್ಯತ್ಯಾಸವು ಕಂಡುಬರುವುದಿಲ್ಲ.† ನಮ್ಮ ಜಾನಪದ 'ಗೀತಗಳೆಲ್ಲ ಪ್ರಾಯಿಕವಾಗಿ ತ್ರಿಪದಿಯ ಮಟ್ಟನ್ನೇ ಅನುಸರಿಸಿರುವುವು. ಗೇಯವಾದ ತ್ರಿಪದಿಗಳನ್ನು ಹಾಡಿನ ರೂಪವಾಗಿ ಹೇಳುವ ಸಂಪ್ರದಾಯವಿದ್ದು, ಹೀಗೆ ಹೇಳುವಾಗ ಅದರ ಎರಡನೆಯ ಪಾದವನ್ನು ಮೂರು ಗಣಗಳವರೆಗೆ ಉಚ್ಚರಿಸಿ, ತಿರುಗಿ ಆ ಎರಡನೆಯ ಪಾದವನ್ನು ಮೊದಲಿನಿಂದ ಕೊನೆಯವರೆಗೆ ಹಾಡಿ ಆಮೇಲೆ ಮೂರನೆಯ ಪಾದವನ್ನು ಎತ್ತಿಕೊಳ್ಳುವುದು ಪೂರ್ವದಿಂದ ಬಂದ ಪದ್ಧತಿಯಾಗಿದೆ (ಕನ್ನಡ ಕೈಪಿಡಿ, ಪು. ೧೩೨–೩೩). ಇದರಿಂದ ಮೂರು ಪಾದಗಳುಳ್ಳ ತ್ರಿಪದಿ ನಾಲ್ಕು ಪಾದ ಗಳುಳ್ಳದಾಗಿ ಪರಿಣಮಿಸುವುದು; ಮಾತ್ರವಲ್ಲದೆ, ಹೀಗೆ ವಿಸ್ತಾರಗೊಂಡ ಹಾಡಿನ ತ್ರಿಪದಿಗೂ ಸಾಂಗತ್ಯಕ್ಕೂ ಮಾತ್ರಾದಿ ನಿಯಮಗಳ ರಚನಾಕ್ರಮದಲ್ಲಿ ಯಾವ ವ್ಯತ್ಯಾಸವೂ ಉಳಿಯುವುದಿಲ್ಲ. ಈ ಅಂಶಗಳನ್ನು ವಿಚಾರಿಸಿದರೆ ಹಾಡಿನ ತ್ರಿಪದಿ ಮೊದಲು ನಾಲ್ಕು ಪಾದಗಳ ಸಾಂಗತ್ಯದ ಪೂರ್ವರೂಪವೇ ಆಗಿರಬೇಕು ಎಂಬ ಸಂಗತಿ ಸ್ಫುಟವಾಗುತ್ತದೆ. ತ್ರಿಪದಿಯನ್ನು ಹಾಡುವ ಈ ಪೂರ್ವ ಸಂಪ್ರದಾಯವನ್ನು ಅನುಸರಿಸಿ, ಮೂರು ಪಾದಗಳ ಹಾಡಿನ ತ್ರಿಪದಿಯನ್ನು 'ನಾಲ್ಕು ಸ್ವತಂತ್ರ ಪಾದಗಳಾಗಿ ಹಿಗ್ಗಿಸಿ ಅದಕ್ಕೆ ಸಾಂಗತ್ಯ ಎಂಬ ಹೆಸರನ್ನೂ ಸಂಸ್ಕಾರವನ್ನೂ ಸಲ್ಲಿಸುವ ವಿಧಾನವು ಕೆಲವು ಕಾಲಾನಂತರದಲ್ಲಿ ನಡೆದಿರಬೇಕು. ಇದರಿಂದ ಸಾಂಗತ್ಯದ ರಚನೆ ಕನ್ನಡ ಸಾಹಿತ್ಯದ ಈಚೆಯ ಕಾಲದಲ್ಲಿ ಮಾತ್ರ ದೊರೆಯುತ್ತಿದ್ದರೂ ಅದರ ಪಡಿಕಟ್ಟು ಬಹು ಪೂರ್ವಕಾಲದಿಂದ ತ್ರಿಪದಿಯ ಹಾಡಿಕೆಯ ರೀತಿಯಲ್ಲಿ ನೆಲೆಗೊಂಡಿರಬೇಕು ಎಂಬ ಅಂಶವು ಸ್ಫುಟವಾಗುತ್ತದೆ.

ಈಗ ತಿಳಿದ ಮಟ್ಟಿಗೆ ಕನ್ನಡದಲ್ಲಿ ಸಾಂಗತ್ಯರೂಪದಿಂದ ಮೊತ್ತಮೊದಲು ರಚನೆ ಮಾಡಿದ ಕವಿ ಶಿಶುಮಾಯಣ. ಈತನ ಕಾಲವು ಸು. ಕ್ರಿ.ವ. ೧೨೩೩ ಆಗಿರಬಹುದು ಎಂದು ಕವಿಚರಿತೆಕಾರರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಕನ್ನಡದಲ್ಲಿ ಸಾಂಗತ್ಯ ಕಾವ್ಯಗಳು ಹೆಚ್ಚಾಗಿ ೧೫ನೆಯ ಶತಮಾನದಿಂದ ಈಚೆಗೆ ದೊರೆಯುತ್ತಿರುವುದರಿಂದ

† ಸಾಂಗತ್ಯದ ೨, ೪ನೆಯ ಪಾದಗಳ ಅಂತ್ಯದಲ್ಲಿ ಬರಬೇಕಾದ ಗಣ ಬ್ರಹ್ಮಗಣ; ಇಲ್ಲಿ ಅದು ವಿಷ್ಣು ಗಣವಾಗಿದೆ; ಅಂತ್ಯಗಣದ ಹಿಂದಿನ ಗಣವೂ ಮೂರನೆಯ ಪಾದದ ೨ನೆಯ ಗಣವೂ ಸಾಂಗತ್ಯದಲ್ಲಿ ವಿಷ್ಣುವಾದರೆ ಇಲ್ಲಿ ಬ್ರಹ್ಮ. ಇದು ವ್ಯತ್ಯಾಸ ಎರಡಕ್ಕೂ. (ಸಂ)

ಶಿಶುಮಾಯಣನ ಕಾಲವು ಅಷ್ಟು ಹಿಂದೆ ಆಗಿರಲಾರದು ಎಂದು ಕೆಲರು ಆಕ್ಷೇಪಿಸಿದ್ದಾರೆ. ಈ ಆಕ್ಷೇಪಣೆಯನ್ನು ಉತ್ತರಿಸುತ್ತ,

> "ಮೇಲೆ ಹೇಳಿದ ಕಾಲದ (ಕ್ರಿ.ಶ. ೧೨೩೩–೧೪೧೦) ಸಾಂಗತ್ಯ ಗ್ರಂಥಗಳು ಈಗ ದೃಷ್ಟಿಗೋಚರವಾಗದ ಮಾತ್ರಕ್ಕೆ ಆ ಕಾಲದಲ್ಲಿ ಅಂಥ ಗ್ರಂಥಗಳು ರಚಿತವಾಗಲೇ ಇಲ್ಲ ಎಂದು ಹೇಳಲಾಗುವುದಿಲ್ಲ. ಮುಂದೆ ಶೋಧನ ಮಾಡಿದರೆ ಅವು ದೊರೆಯಬಹುದು."
> (ಕರ್ಣಾಟಕ ಕವಿಚರಿತೆ, ಸಂ. ೩, ಅವತರಣಿಕೆ, ಪು. ೨೩)

ಎಂಬುದಾಗಿ ಕವಿಚರಿತೆಕಾರರು ಹೇಳಿದ ಮಾತುಗಳು ಅವರು ನೆನೆಸಿದುದಕ್ಕಿಂತ ಹೆಚ್ಚಿನ ಅರ್ಥದಲ್ಲಿ ಸತ್ಯವಾದುವು ಎಂದು ಮೇಲಿನ ವಿವೇಚನೆಯಿಂದ ಅರಿಕೆಯಾಗುವುದು. ಮೇಲಿನ ಶಾಸನಗಳಲ್ಲಿಯ ತ್ರಿಪದಿ–ಸಾಂಗತ್ಯದ ಉದಾಹರಣೆಗಳಿಂದಲೂ ಈ ಮುಂದೆ ನಾನು ತೋರಿಸಲಿರುವ ದೇಸಿಯ ರಚನೆಯ ಬೇರೆ ಉದಾಹರಣೆ ಮತ್ತು ವಿವೇಚನೆಗಳಿಂದಲೂ ಈ ವಿಚಾರದಲ್ಲಿ ನನಗೆ ಉಂಟಾಗಿರುವ ಗ್ರಹಿಕೆ ಇಂತು: ದ್ವಿಪದಿ, ತ್ರಿಪದಿ, ಚೌಪದಿ, ರಗಳೆ, ಸಾಂಗತ್ಯ, ಮೊದಲಾದ ದೇಸಿಯ ರಚನೆಗಳು ನಮ್ಮ ಸಾಹಿತ್ಯದ ಆರಂಭಕಾಲದಿಂದಲೂ ಸೃಷ್ಟಿಯಾಗುತ್ತ ವಿದ್ಯಾವಂತರ ಮನಸ್ಸಿನ ಮೇಲೆ ಸ್ವಲ್ಪ ಸ್ವಲ್ಪವಾಗಿ ಪರಿಣಾಮವನ್ನು ಉಂಟುಮಾಡುತ್ತ ಸಾಹಿತ್ಯ ಪ್ರಪಂಚದಲ್ಲಿಯೂ ಸ್ಥಾನಮಾನಗಳನ್ನು ಗಳಿಸಿಕೊಂಡಿರಬೇಕು; ಇದಕ್ಕೆ ಸಿಕ್ಕುವ ಕೆಲವೊಂದು ನಿದರ್ಶನಗಳಿಂದ ಈ ವಿಧ ದೇಸಿಯ ರಚನೆ ಅತ್ಯಲ್ಪ ಪ್ರಮಾಣದಲ್ಲಿ ನಡೆಯುತ್ತ ಇದ್ದಿರಬೇಕು ಎಂದು ಕಲ್ಪಿಸುವುದಕ್ಕಿಂತ, ಈ ರಚನೆಯಲ್ಲಿ ಸ್ವಲ್ಪಭಾಗವು ಲೇಖನ ಮತ್ತು ಗ್ರಂಥರೂಪದಿಂದ ಪ್ರಕಾಶಿತವಾಗಿ, ಅದರಲ್ಲಿಯ ಅತ್ಯಲ್ಪ ಅಂಶವು ಮಾತ್ರ ಕಾಲನಿಗೆ ಆಹುತಿಯಾಗದೆ ನಮ್ಮ ಕಾಲದವರೆಗೆ ಬಾಳಿ ಬಂದಿದೆ, ಎಂದು ತಿಳಿದರೆ ಅದು ಯಥಾರ್ಥವಾದೀತು.

ಇನ್ನು ರಗಳೆಯ ವಿಚಾರ. ಈಗ ತಿಳಿದ ಮಟ್ಟಿಗೆ ಕನ್ನಡ ಸಾಹಿತ್ಯದಲ್ಲಿ ರಗಳೆ ಮೊದಲು ಬಾರಿ ಕಾಣಿಸಿಕೊಳ್ಳುವುದು ಆದಿ ಪಂಪನ (ಕ್ರಿ. ಶ. ೯೪೧) ಕಾವ್ಯಗಳಲ್ಲಿ. ಆತನು ಪ್ರಯೋಗಿಸಿದ ಮಟ್ಟರಗಳೆಯಂತಹ ಕೆಲವು ರಗಳೆಗಳ ವಿಧಾನವು ಲಕ್ಷಣಕಾರರ ಕಟ್ಟುನಿಟ್ಟಿನ ನಿಯಮಗಳಿಗೆ ಅಷ್ಟು ಸರಿಯಾಗಿ ಹೊಂದಿಕೆಯಾಗದೆ ಇರುವುದನ್ನು ನೋಡಿದರೆ, ಲಕ್ಷಣಕಾರರ ಅಳವಿನ ಆಚೆಗೆ ಇದರ ಜಾನಪದಿಕ ರಚನೆ ತನ್ನದೆ ಆದ ರೀತಿಯಲ್ಲಿ ವಿವಿಧವಾಗಿಯೂ ವಿಸ್ತಾರವಾಗಿಯೂ ಹಬ್ಬಿಕೊಂಡಿರಬೇಕು ಎಂದು ತೋರುತ್ತದೆ. ಆದಿಪಂಪನ ಅನಂತರ ಶಾಂತಿನಾಥ (ಕ್ರಿ.ಶ. ೧೦೬೮), ನೇಮಿಚಂದ್ರ (೧೧೭೦), ಅಗ್ಗಳದೇವ (೧೧೮೯), ಕೆರೆಯ ಪದ್ಮರಸ (೧೨೦೦?), ಬಂಧುವರ್ಮ (೧೨೦೦), ಜನ್ನ (೧೨೦೯), ಮೊದಲಾದ ನಾಮಾಂಕಿತ ಕವಿಗಳು ತಮ್ಮ ಕಾವ್ಯಗಳಲ್ಲಿ ವಿವಿಧ ರೀತಿಯಿಂದ ರಗಳೆಯನ್ನು ಪ್ರಯೋಗಿಸಿದ್ದಾರೆ. ರಗಳೆಯಲ್ಲಿ ಗೀತದ ಮಾಧುರ್ಯವೂ ಹಾಡಿನ ಓಟವೂ ಮೈಗೂಡಿಕೊಂಡಿರುವುದರಿಂದ ವೈವಿಧ್ಯಕ್ಕಾಗಿಯೂ ರಮಣೀಯತೆಯನ್ನು ಹೆಚ್ಚಿಸುವುದಕ್ಕಾಗಿಯೂ ಕವಿಗಳು ಈ ವೃತ್ತವನ್ನು ತಮ್ಮ ಕಾವ್ಯಗಳಲ್ಲಿ ಬಳಸಿದರೆಂದು ವಿದಿತವಾಗುತ್ತದೆ.

ನಾಗವರ್ಮನು (ಕ್ರಿ.ಶ. ೯೯೦) ಮಂದಾನಿಲ, ಲಲಿತ ಮತ್ತು ಉತ್ಸಾಹ ಎಂಬೀ ಮೂರು ವಿಧವಾದ ರಗಳೆಗಳನ್ನು ಮಾತ್ರ ಹೇಳಿರುವನು (ಛಂದೋಂಬುಧಿ, ಕಿಟ್ಟೆಲ ಆವೃತ್ತಿ, ಪ. ೨೫೫). ಇವುಗಳಲ್ಲಿ ಲಲಿತ ಎಂಬುದು ೫|೫ ಮಾತ್ರೆಗಳ ನಾಲ್ಕು ಗಣಗಳಿಂದ ಕೂಡಿದ ಪಾದವುಳ್ಳದು. ಕರ್ಣಾಟಕ ಕವಿಚರಿತೆಯ ಒಂದನೆಯ ಸಂಪುಟದ ೭೫–೭೬ ಈ

6

ಪುಟಗಳಲ್ಲಿ ಶಾಂತಿನಾಥನ ಸುಕುಮಾರ ಚರಿತದಲ್ಲಿಯ ಕೆಲವು ರಗಳೆಗಳು ಉದ್ಧೃತವಾಗಿವೆ. ಅವುಗಳಲ್ಲಿ ಒಂದನ್ನು ಕುರಿತು ಲಲಿತ ರಗಳೆ ಎಂಬುದಾಗಿ ಹೆಸರಿಸಿದೆ. ಆದರೆ ಈ ಲಲಿತ ರಗಳೆ ನಾಗವರ್ಮನ ಲಲಿತರಗಳೆಯ (೨೦ ಮಾತ್ರೆಗಳ ಪಾದದ) ನಿಯಮವನ್ನು ಅನುಸರಿಸು ವಂತಹದು ಆಗಿರದೆ ಮಂದಾನಿಲ ರಗಳೆಯ (೧೬ ಮಾತ್ರೆಗಳ ಪಾದದ) ನಿಯಮವನ್ನು ಅನುಸರಿಸುವಂತೆ ತೋರುತ್ತದೆ. ಇದೀಗ ನಾನು ತೋರಿಸಲಿರುವಂತೆ ೧೧ನೆಯ ಶತಮಾನದ ಒಂದು ಶಾಸನದಲ್ಲಿ ತೋಮರ ರಗಳೆ ಎಂಬ ಅಪೂರ್ವವಾದ ಒಂದು ರಗಳೆಯ ಹೆಸರು ದೊರೆಯುತ್ತಿದ್ದು, ಅದರ ಲಕ್ಷಣವೇನೋ ನಾಗವರ್ಮನ ಲಲಿತರಗಳೆಯನ್ನೇ ಅನ್ವಯಿಸು ವುದು. ಈ ಅಂಶಗಳನ್ನು ಪರಿಶೀಲಿಸಿದರೆ ಮೇಲೆ ನಾನು ಸೂಚಿಸಿದಂತೆ ದೇಸಿಯ ರಚನೆಯಾದ ರಗಳೆಯ ಬಳಗವು ಬಗೆ ಬಗೆಯಾಗಿ ಬೆಳೆದು ಕೊಂಡಿದ್ದು, ಅದರಲ್ಲಿ ಕೆಲವು ಮಾತ್ರ ಕವಿಗಳ ಮತ್ತು ಲಕ್ಷಣಕಾರರ ಕೈಗೆ ಸೇರಿರಬೇಕು ಎಂಬ ಊಹೆ ದೃಢವಾಗುತ್ತದೆ.

ಆದಿ ಪಂಪನಿಂದ ಮೊದಲುಗೊಂಡ ಅನೇಕ ಕವಿಗಳು ರಸಕ್ಕಾಗಿಯೂ ರುಚಿ ಗಾಗಿಯೂ ತಮ್ಮ ಕಾವ್ಯಗಳಲ್ಲಿ ರಗಳೆಗಳನ್ನು ಮಿತಿಯಾಗಿ ಉಪಯೋಗಿಸಿದ್ದರೂ ಸುದೀರ್ಘ ಮತ್ತು ಸಮಗ್ರವಾದ ಕಾವ್ಯರಚನೆಗೆ ಒಂದೇ ಒಂಪಾಗಿ ಈ ವೃತ್ತವನ್ನು ಎತ್ತಿಕೊಂಡು ಅದರಲ್ಲಿ ಅನೇಕ ಕೃತಿಗಳನ್ನು ನಿರ್ಮಿಸಿದ ಯಶಸ್ಸು ಹರಿಹರಕವಿಗೆ ಸಲ್ಲುವುದು. ವೀರಶೈವದ ಉತ್ಥಾನದಿಂದ ನಮ್ಮ ಸಾಹಿತ್ಯದ ಒಲವು ಜನಜೀವನದ ಕಡೆಗೆ ಹೆಚ್ಚಾಗಿ ತಿರುಗಿತೆಂತಲೂ ಈ ನವಸ್ಫೂರ್ತಿಯಿಂದ ಮಾತಿನ ಶೈಲಿಯ ವಚನ ಮತ್ತು ಅದೇ ಮಾದರಿಯ ಓಟವುಳ್ಳ ರಗಳೆ ಈ ರೂಪಗಳಲ್ಲಿ ಕಾವ್ಯನಿರ್ಮಿತಿ ಆಗತೊಡಗಿದುದು ಇದಕ್ಕೆ ನಿದರ್ಶನವೆಂತಲೂ ಸಾಹಿತ್ಯ ವಿಮರ್ಶಕರಲ್ಲಿ ಒಂದು ಅಭಿಪ್ರಾಯವು ಪ್ರಚಲಿತವಾಗಿದೆ. ವಚನ ಸಾಹಿತ್ಯದ ಮಟ್ಟಿಗೆ ವಿಚಾರ ಮಾಡಿದರೆ ಈ ಅಭಿಪ್ರಾಯದ ಯಥಾರ್ಥತೆಯನ್ನು ಬಹುಭಾಗಕ್ಕೆ ಒಪ್ಪಿ ಕೊಳ್ಳಬೇಕಾಮದು. ಆದರೆ ರಗಳೆಯ ರಚನೆಯ ವಿಚಾರದಲ್ಲಿ ಇದನ್ನು ಇದ್ದಕ್ಕಿದ್ದಹಾಗೆ ಒಪ್ಪಿಕೊಳ್ಳುವುದು ಕಷ್ಟ. ಇದೇ ಸಂದರ್ಭದಲ್ಲಿ, ಸುದೀರ್ಘವಾದ ನಿರೂಪಣೆಯಲ್ಲಿ ರಗಳೆಗೆ ಇರುವ ಸೌಲಭ್ಯವನ್ನು ಕಂಡು ಹಿಡಿದು, ಅದನ್ನು ಮೊದಲು ಬಾರಿ ತನ್ನ ಕಥನಕಾವ್ಯಗಳಲ್ಲಿ ಧಾರಾಳವಾಗಿ ಪ್ರಯೋಗಿಸಿ, ಈ ಜಾನಪದ ವೃತ್ತಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿದ ನೂತನ ಮಾರ್ಗಪ್ರವರ್ತಕನೆಂಬ ಶ್ರೇಯಸ್ಸಿಗೆ (ಬಸವರಾಜದೇವರ ರಗಳೆ, ಪೀಠಿಕೆ, ಪು. ೨೩) ಹರಿಹರ ಕವಿ ಎಷ್ಟರಮಟ್ಟಿಗೆ ಅರ್ಹನಾಗುವನು ಎಂಬ ವಿಷಯವಾದರೂ ವಿಚಾರಣೀಯವಾದುದು.

ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕಿನ ಕೋಗಳಿ ಎಂಬ ಗ್ರಾಮದಲ್ಲಿ ಜೈನ ಬಸದಿಯ ಮುಂದೆ ಒಂದು ಶಿಲಾಶಾಸನವು ನಿಂತಿದೆ. ಈ ಶಾಸನವು ಕಲ್ಯಾಣಚಾಲುಕ್ಯರ ತ್ರೈಲೋಕ್ಯಮಲ್ಲನ ಆಳಿಕೆಯ ಶಕವರ್ಷ ೯೭೬ ಎಂದರೆ ಕ್ರಿ.ಶ. ೧೦೫೪ರಲ್ಲಿ ಬರೆದುದು (*South Indian Inscriptions*, Vol. X, Pt. I, No. 117). ಇದರಲ್ಲಿ ಇಂದ್ರಕೀರ್ತಿ ಎಂಬ ಜೈನ ಮುನಿ ವಿದ್ಯಾದಾನಕ್ಕಾಗಿ ಭೂಮಿಯನ್ನು ದತ್ತಿಯಾಗಿ ಬಿಟ್ಟ ಸಂಗತಿ ಹೇಳಿದೆ. ಆ ಮೇಲೆ ತೋಮರ ರಗಳೆ ಎಂಬುದಾಗಿ ನಿರ್ದೇಶಿಸಿ ರಗಳೆಯ ವೃತ್ತದಲ್ಲಿ ರಚಿತವಾದ, ಇಂದ್ರಕೀರ್ತಿಮುನಿಯನ್ನು ಸ್ತುತಿಸುವ ಪದ್ಯಗಳು ಉಕ್ತವಾಗಿವೆ. ಅವುಗಳಲ್ಲಿ ಕೆಲ ಪಂಕ್ತಿ ಗಳನ್ನು ಇಲ್ಲಿ ಉದ್ಧರಿಸುವೆ.

ಶ್ರೀಮದರುಹಚ್ಚರಣಸರಸಿರುಹಭೃಂಗನಂ ।
ಭೂಮಿ ಕೀರ್ತಿಸೆ ನೆಗಳ್ದ ಗುಣಗಣೋತ್ತುಂಗನಂ ॥

ಪುನುಚರಿತನಿರತನಂ ಗುರುಚರಣಭಕ್ತನಂ ।
ವಿನಮಿತಜಗಜ್ಜನಂ ಧರ್ಮಾನುರಕ್ತನಂ ॥
ಪರಹಿತದಿಳೀಪನಂ ನ್ನಗಭೂಪಚರಿತನಂ ।
ಸುರುಚಿರಯಶೋಧರನನಕಳಂಕಚರಿತನಂ ॥
ಪಣ್ಡಿತಮುಖಾಂಬುರುಹಶ(ಷ)ಂಡ ಮಾರ್ತಣ್ಡನಂ ।
ಕೊಣ್ಡಕುನ್ದಾನ್ವಯ ಸಮೂಹ ಮುಖಮಣ್ಡನಂ ॥
ದೇಸೀಯಗಣಕುಮುದವನಶರಚ್ಚಂದ್ರನಂ ।
(ಇಲ್ಲಿ ಒಂದು ಪಾದವು ಬಿಟ್ಟು ಹೋದಂತೆ ತೋರುತ್ತದೆ)
ತ್ರೈಲೋಕ್ಯಮಲ್ಲಸದಸರಸಿಕಳಹಂಸನಂ ।
ಭೂಲೋಕತಿಳಕನಂ ಕರ್ಮವಿಧ್ವಂಸನಂ ॥
ಸರ್ವತೋಭದ್ರಜಿನಗೃಹಸಮುದ್ಧರಣನಂ ।
ಸರ್ವಶಾಸ್ತ್ರಜ್ಞನಂ ವಿಕಳಜನಶರಣನಂ ॥

ಈ ಅವತರಣಿಕೆಯನ್ನು ವಿಸ್ತಾರಭಯದಿಂದ ಇಲ್ಲಿಗೆ ಮುಗಿಸುವೆ. ಆದರೆ ಜಿಜ್ಞಾಸುಗಳು ಇದನ್ನು ಪೂರ್ತಿಯಾಗಿ ಮೇಲೆ ಸಂದರ್ಭಿಸಿದ ಮೂಲಶಾಸನಪಾಠದಲ್ಲಿ ನೋಡುವುದು. ಈ ರಗಳೆ ಅನೇಕ ದೃಷ್ಟಿಯಿಂದ ಮನನೀಯವಾಗಿದೆ. ಅದು ಹೇಗೆ ಎಂಬುದನ್ನು ಸ್ಫುಟವಾಗಿ ಪರಿಶೀಲಿಸುವ.

೧. ಇದಕ್ಕೆ ಉಕ್ತವಾದ 'ತೋಮರ ರಗಳೆ' ಎಂಬ ಹೆಸರು ಅಪೂರ್ವವಾದುದು. ಈ ಹೆಸರು ಯಾವ ಲಕ್ಷಣಗ್ರಂಥದಲ್ಲಿಯೂ ನಿರ್ದಿಷ್ಟವಾಗಿಲ್ಲ.*

೨. ತೋಮರ ರಗಳೆ ಎಂಬ ಹೆಸರು ಅಪರಿಚಿತವಾಗಿದ್ದರೂ ಇದರ ವಿಧಾನವು ಅಪರಿಚಿತವಾಗಿಲ್ಲ. ಅದು ಸುಪರಿಚಿತವಾದುದೇ. ಇದರ ಪ್ರತಿಪಾದವು ೫|೫ ಮಾತ್ರೆಗಳ ನಾಲ್ಕು ಗಣಗಳಿಂದ ಕೂಡಿ ೨೦ ಮಾತ್ರೆಗಳುಳ್ಳುದು ಆಗಿರುವುದರಿಂದ ಇದು ನಾಗವರ್ಮನು ಲಕ್ಷಿಸಿದ ಲಲಿತರಗಳೆಯ ಲಕ್ಷಣದಿಂದ ಯುಕ್ತವಾದುದು. ಪಂಪನು ಮೊದಲು ಆದಿಪುರಾಣದ ಸಪ್ತಮಾಶ್ವಾಸದಲ್ಲಿಯೂ ಈಚೆಗೆ ಹರಿಹರಕವಿ ಶಿವಶರಣರ ರಗಳೆಗಳ ರಚನೆಯಲ್ಲಿಯೂ ಪ್ರಯೋಗಿಸಿದ ಲಲಿತರಗಳೆಯ ರೀತಿಯನ್ನು ಇದು ಪೂರ್ಣವಾಗಿ ಹೋಲುವುದು. ಎರಡೆರಡು ಪಾದಗಳನ್ನು ಒಂದು ಪದವಾಗಿ ಎಣಿಸಿ ಅವುಗಳಲ್ಲಿ ದ್ವಿತೀಯಾಕ್ಷರ ಮತ್ತು ಅಂತ್ಯಾಕ್ಷರ ಪ್ರಾಸಗಳನ್ನು ಎಡೆಬಿಡದೆ ಸಾಧಿಸಿದುದನ್ನು ಇಲ್ಲಿಯೂ ಕಾಣಬಹುದಾಗಿದೆ.

೩. ಹರಿಹರಕವಿಯ ರಗಳೆಯ ಆ ವೈಭವವೆಲ್ಲವು ಇದರಲ್ಲಿ ಮೈಗೂಡಿಕೊಂಡಿದೆ. ಆ ಸರಲತೆ, ಆ ಅನರ್ಗಳಧಾರಾವಾಹಿತ್ವ, ಆ ನಾದ, ಆ ಕುಣಿತ, ಆ ತಾಳ, ಆ ಸ್ಫುಟತೆ, ಆ ಮಾಧುರ್ಯ, ಎಲ್ಲವು ಇದರಲ್ಲಿ ಬಂದಿದೆ. ಈ ರಗಳೆ ಸಾಕಷ್ಟು ದೀರ್ಘವೂ ಆಗಿದೆ. ಯಾವುದೇ ಒಂದು ಕಾವ್ಯದ ಸ್ವತಂತ್ರ ಆಶ್ವಾಸನಾಗಿ ಒಪ್ಪುವಷ್ಟು ವಿಸ್ತೃತವಾಗಿದೆ.

ಈ ರಗಳೆಯ ಕೊನೆಗೆ 'ಮಂಗಳಂ' ಎಂಬುದಾಗಿ ಹೇಳಿ ಈ ರಚನೆಯನ್ನು

---

* ವಿರಹಾಂಕನ 'ವೃತ್ತಜಾತಿ ಸಮುಚ್ಚಯ' ಎಂಬ ಛಂದೋಗ್ರಂಥ ಪ್ರೊ॥ ಎಚ್. ಡಿ. ವೇಲಣಕರರಿಂದ ಪ್ರಕಾಶಿತವಾಗಿದೆ. (J. B. B. R. A. S. New Series, Vol. V, pp. 34 ff.) ಇದರ ಕಾಲ ೯–೧೦ನೆಯ ಶತಮಾನಗಳೋ ಅಥವಾ ಅದಕ್ಕಿಂತ ಪ್ರಾಚೀನವೋ ಆಗಿರಬೇಕೆಂದು ಪ್ರೊ॥ ವೇಲಣಕರರ ಅಭಿಪ್ರಾಯ. ಈ ಗ್ರಂಥದಲ್ಲಿ ಚತುಷ್ಕಲಗಳನ್ನು ನಿರ್ದೇಶ ಮಾಡುವುದಕ್ಕೆ ಗಜ, ರಥ, ತುರಗ, ಪದಾತಿ, ಮುಂತಾದ ಪದಗಳನ್ನೋ ಅವುಗಳ ಪರ್ಯಾಯ ನಾಮುಗಳನ್ನೋ ಬಳಸಿದೆ; ಹಾಗೆಯೇ ಪಂಚಮಾತ್ರಾಗಣಗಳ ನಿರ್ದೇಶಕ್ಕೆ ಅಸಿ, ಅಶನಿ, ತೋಮರ, ಕನಕ, ಕರವಾಲ, ಕ್ಷುರಪ್ರ, ಬಾಣ, ಬಾಣಾಸನ, ಧನುಃ, ಮುಂತಾದ ಆಯುಧವಾಚಿ ಶಬ್ದಗಳನ್ನು ಬಳಸಿದೆ. "ಬಹುವಿವಿಹ ಪಹರಣಾಣಂ ಚ ಪಂಚಮತ್ತಂ ಪಿಹುಲಸೋಣಿ." ಆದ್ದರಿಂದ 'ತೋಮರ ರಗಳೆ' ಎಂದರೆ ಪಂಚ ಮಾತ್ರಾಗಣಗಳಿಂದ ರಚಿತವಾದ ರಗಳೆಯೆಂದು ಅರ್ಥ (ಸಂ).

ಮುಗಿಸಿದೆ. ಆ ಮೇಲೆ ಮತ್ತೆ ಕೆಲ ಪದ್ಯಗಳು ಶಾಸನದಲ್ಲಿ ಬರುತ್ತವೆ. ಸಾಮಾನ್ಯವಾ ಶಾಸನವು ಪೂರ್ತಿಯಾಗಿ ಮುಗಿದ ಬಳಿಕ 'ಮಂಗಳ ಮಹಾಶ್ರೀ' ಎಂಬುದಾಗಿ ಮುಗಿತಾ ವನ್ನು ಸೂಚಿಸುವ ವಾಡಿಕೆ ಇದೆ. ಆದುದರಿಂದ ಮೇಲಿನ 'ಮಂಗಳಂ' ಎಂಬ ಪದವು ಕ ತಾನು ರಚಿಸಿ ಮುಗಿಸಿದ ಈ ಕೃತಿಯನ್ನು ಕುರಿತು ಮಾತ್ರ ಪ್ರತ್ಯೇಕವಾಗಿ ಹೇಳಿರುವ ಎಂದು ಸ್ಪಷ್ಟವಾಗುತ್ತದೆ. ನಿಜವಾಗಿ ನೋಡಿದರೆ ಈ ರಗಳೆಗೂ ಸ್ವಲ್ಪ ಮಿತಿ ಮೀರಿ ಹೊಗಳಿದ ಇದರಲ್ಲಿಯ ವರ್ಣನೆಗೂ ಈ ಶಾಸನದಲ್ಲಿ ಆಸ್ಪದವಿಲ್ಲ. ಶಾಸನವನ್ನು ಬರೆಯು ಸಂಧಿಯನ್ನು ಉಪಯೋಗಿಸಿಕೊಂಡು ಹೇಗೋ ತನ್ನ ಕಾವ್ಯ ಸ್ಫೂರ್ತಿಯನ್ನೂ ರಚನಾ ಯನ್ನೂ ಪ್ರದರ್ಶಿಸಲು ಈ ಶಾಸನಕವಿ ಉದ್ಯುಕ್ತನಾದಂತೆ ತೋರುತ್ತದೆ.

೫. ಇದನ್ನು ರಚಿಸಿದ ಕವಿ ಪಳಗಿದ ಕೈ. ಈತನು ಇಂತಹ ರಗಳೆಗಳನ್ನ ಬಹುವಾಗಿ ರಚಿಸಿ ಅದರಲ್ಲಿ ಪ್ರಭುತ್ವವನ್ನೂ ಸಿದ್ಧಿಯನ್ನೂ ಪಡೆದಿರಬೇಕು. ಆದುದರಿಂದ ತನ್ನಾಕಲೆಯನ್ನು ಇಲ್ಲಿಯೂ ತೋರಿಸುವ ಮೋಹವು ಆತನಿಗೆ ಬಲವಾಗಿ ಉಂಟಾಗಿರುವು ಸ್ವಾಭಾವಿಕ. ಇದಲ್ಲದೆ ಈ ಕಾಲದಲ್ಲಿ ಈ ಪ್ರದೇಶದಲ್ಲಿ ಈ ವಿಧದ ರಗಳೆ ವೃತ್ತದಲ್ಲಿ ರಚನೆಗಳು ಬೇರೆ ಕವಿಗಳಿಂದಲೂ ನಡೆಯುತ್ತಿದ್ದು ಅವುಗಳನ್ನು ಕೇಳಿ ಓದಿ ಆನಂ ಪಡುವಷ್ಟು ಜನಗಳಿಗೆ ಅಭ್ಯಾಸವಾಗಿರಬೇಕು. ಏಕೆಂದರೆ ಜನತಾಪ್ರಿಯನಾದ ಕ ಅರಣ್ಯರೋದನವನ್ನು ಮಾಡಲಾರನು; ಅದರಲ್ಲಿಯೂ ಶಾಸನಪ್ರಪಂಚದಲ್ಲಿ.

೬. ಹರಿಹರಕವಿಯ ಕಾಲವನ್ನು ಕುರಿತು ಏಕಾಭಿಪ್ರಾಯವಿಲ್ಲ. ಆದ ಸ್ಥೂಲವಾಗಿ ಅದು ಕ್ರಿ.ಶ. ೧೨೦೦ ಎಂದು ಇಟ್ಟುಕೊಳ್ಳಬಹುದು. ಈ ರಗಳೆಯ ಕಾ ೧೦೫೫; ಎಂದರೆ ಹರಿಹರನಿಂದ ೧೫೦ ವರ್ಷ ಪ್ರಾಚೀನವಾದದು. ಇದರಿಂದ ಹರಿಹರನಿ ಮುಂಚೆ ಸುಮಾರು ಎರಡು ಶತಮಾನಗಳಿಂದಲಾದರೂ ಆತನು ತನ್ನ ಶಿವಶರಣ ರಗಳೆಗಾಗಿ ಎತ್ತಿಕೊಂಡ ರಗಳೆಯ ವೃತ್ತದಲ್ಲಿ ಕಾವ್ಯರಚನೆ ನಡೆಯುತ್ತಿದ್ದು, ಅದು ಜನರನ್ನ ಮೆಚ್ಚಿಸುತ್ತಿದ್ದಿತು ಎಂದು ತಿಳಿಯಬೇಕಾಗುತ್ತದೆ. ಇದರಲ್ಲಿ ಇನ್ನೊಂದು ವಿಶೇಷವೆಂದ ಹರಿಹರಕವಿಯ ಪ್ರೀತಿಸ್ಥಾನವಾದ ಹಂಪೆಯ ಪ್ರದೇಶದಲ್ಲಿಯೇ ಈ ರಗಳೆ ದೊರೆತುದು. ಪ್ರತಿಭಾಶಾಲಿಯಾದ ಹರಿಹರದೇವನು ಈ ಪ್ರದೇಶದ ಈ ವಿಧವಾದ ಕಾವ್ಯ ಸಂಸ್ಕೃತಿ ಮನಸೋತು ಅದರ ಪರಂಪರೆಯನ್ನು ಆತ್ಮಸಾತ್ ಮಾಡಿಕೊಂಡಿರುವುದು ಅಸಂಭವ ನೀಯವಲ್ಲ.

೭. ಈ ರಗಳೆ ಸಮಕಾಲಿಕನಾದ ಒಬ್ಬ ಜೈನಮುನಿಯನ್ನು ಕುರಿತು ರಚಿತ ವಾದುದು. ಇದನ್ನು ರಚಿಸಿದ ಕವಿಯೂ ದರೂ ಜೈನ ಮತಾವಲಂಬಿಯಾಗಿರುವುದು ಚೋದ್ಯವಲ್ಲ. ಮುಂದೆ ನೂರಿನ್ನೂರು ವರ್ಷಗಳ ತರುವಾಯ ವೀರಶೈವ ಆವರಣದಲ್ಲಿ ಬೆಳೆದು ನಿಂತಂತಹ ರಗಳೆಯ ಕವಿತ್ವವು ಜೈನ ಆವರಣದಲ್ಲಿ ವಿಕಸನಗೊಂಡುದನ್ನು ನಾವ ಇಲ್ಲಿ ನೋಡಬಹುದು. ಕಾವ್ಯಪ್ರತಿಭೆಗೂ ಒಂದು ಮತವಿವೇಕವಿದೆಯೆ!

ಶಾಸನ ಸಾಹಿತ್ಯದಲ್ಲಿ ಮೊದಲುಬಾರಿ ರಗಳೆಯನ್ನು ಕಂಡುದು ಇದುವೆ. ಅನಂತರ ಅದೇ ಬಳ್ಳಾರಿ ತಾಲೂಕಿನ ಕುರುಗೋಡು ಗ್ರಾಮದ ಒಂದು ಶಾಸನದಲ್ಲಿ ಆ ಗ್ರಾಮನಿವಾಸಿ ಗಳಾದ 'ಮುಂಮುರಿದಂಡ' ಗಳನ್ನು ರಗಳೆಯ ವೃತ್ತದಲ್ಲಿ ವರ್ಣಿಸಿದೆ (*S. I. I.* Vol. IX, Pt. I. No. 296). ಅದರ ಕೆಲ ಪಂಕ್ತಿಗಳನ್ನು ಇಲ್ಲಿ ಉದಾಹರಿಸುವೆ.

ಸ್ವಸ್ತಿ ಗವಟೀಶಪದ ಪದ್ಮಷಟ್ಚರಣರುಂ |
ವಿಸ್ತೀರ್ಣವಸ್ತು ಗುಣ ವಿನಿಹಿತಾಚರಣರುಂ ||

ಪಂಚಶತವೀರಶಾಸನಗುಣೋದ್ಧರಣರುಂ ।
ಸಂಚಿತಸಮಸ್ತಧರ್ಮೈಕನಿಸ್ತರಣರುಂ ॥
ಬ್ಯವಹಾರ ನಯವಿನಯ ವಿಜ್ಞಾನವಿದ್ಯರುಂ ।
ನವರತ್ನ ವಾಹನಪರೀಕ್ಷಾನವದ್ಯರುಂ ॥

ಅದೇ ಗ್ರಾಮದ ಇನ್ನೊಂದು ಶಾಸನದಲ್ಲಿ (No. 297) ಮತ್ತೆ ಈ 'ಮುಂಮುರಿದಂಡ'ಗಳನ್ನು ವರ್ಣಿಸಿದೆ. ಇದಾದರೂ ರಗಳೆಯಲ್ಲಿದೆ. ಈ ವರ್ಣನೆಯ ಸ್ವಲ್ಪ ಭಾಗವನ್ನು ಇಲ್ಲಿ ಉದ್ಧರಿಸುವೆ.

ಶ್ರೀಮದಾರ್ಯಾನಾಮಪುರಮುಖ್ಯಭೂತರೆನಿ।
ಪಯ್ನೂರ್ವರಿಂದೊದವಿದನ್ವಯಾಯಾತರುಂ ॥
ಭಗವತೀಲಬ್ಧವರದಾನಪ್ರಸಾದರುಂ ।
ಅಗಣಿತಮಹಶ್ಸೌಖ್ಯ ಸಂಪತ್ಪ್ರಮೋದರುಂ ॥
ಚಕ್ರಧರದತ್ತ ಚಕ್ರಧ್ವಜ ವಿರಾಜರುಂ ।
ಪ್ರಾರ್ಥಿತಾರ್ಥಪ್ರಕರ ಸುರರಾಜ ಭೂಜರುಂ ॥

ಈ 'ಮುಂಮುರಿದಂಡ' ಗಳನ್ನು ಇದೇ ವಿಧವಾದ ವಿಶೇಷಣಗಳಿಂದ ವರ್ಣಿಸುವ ಪಂಕ್ತಿಗಳು ಶಾಸನಗಳಲ್ಲಿ ಆಗಾಗ ಗೋಚರವಾಗುತ್ತವೆ. ಆದರೆ ಆ ಪಂಕ್ತಿಗಳು ಸಾಮಾನ್ಯವಾಗಿ ಗದ್ಯರೂಪದಲ್ಲಿ ಸಿಕ್ಕುತ್ತಿದ್ದು, ಇಲ್ಲಿ ಅವುಗಳನ್ನು ಪದ್ಯೀಕರಿಸಿದುದು ಒಂದು ವಿಶೇಷ. ಕುರುಗೋಡ ಶಾಸನಗಳಲ್ಲಿಯ ಈ ಪದ್ಯಗಳು ಆ ಮೊದಲಿನ ಕೋಗಳಿಯ ಶಾಸನದ ರಗಳೆಯಂತೆ ಲಲಿತ ರಗಳೆಯಲ್ಲಿ ರಚಿತವಾಗಿವೆ. ಇವುಗಳ ಕಾಲವೋ ಕ್ರಿ.ವ. ೧೧೭೬–೭೭ ; ಎಂದರೆ ಹೆಚ್ಚುಕಡಿಮೆ ಹರಿಹರ ಕವಿಯ ಕಾಲ. ಸ್ವಲ್ಪ ಮುಂಚೆಯೂ ಆಗಬಹುದು. ಪ್ರವೇಶವು ಅದೇ ಹಂಪೆಯ ನಾಡು. ಇದರಿಂದ ಮೇಲೆ ನಾನು ೫–೬ ಅಂಕದ ವಿವೇಚನೆಯಲ್ಲಿ ಮಾಡಿದ ಊಹೆಗಳು ಯಥಾರ್ಥವಾಗಿರಬೇಕು ಎಂಬ ವಿಚಾರವು ಸ್ಥಿರಗೊಳ್ಳುತ್ತದೆ. ಮೇಲಿನ ವಿವೇಚನೆಯಿಂದ ನಿಷ್ಪನ್ನವಾಗುವುದೇನೆಂದರೆ ಸು. ೧೦ರಿಂದ ೧೨ ಈ ಶತಮಾನಗಳಲ್ಲಿ ವರ್ಣಕ ಕಾವ್ಯಗಳಿಗೆ ರಗಳೆಯನ್ನು ಉಪಯೋಗಿಸುವ ಪ್ರವೃತ್ತಿ ನಮ್ಮ ಸಾಹಿತ್ಯದಲ್ಲಿ ಸ್ಫುಟವಾಗಿ ಕಂಡುಬರುತ್ತಿದ್ದು, ಈ ಪರಂಪರೆಯನ್ನೇ ಹರಿಹರಕವಿ ಮುಂದುವರಿಸಿದನು. ಇದರಿಂದ ಹರಿಹರಕವಿಯ ಗೌರವಕ್ಕೆ ಯಾವ ವಿಧದಿಂಧಲೂ ಹಾನಿ ಉಂಟಾಗುವಂತಿಲ್ಲ. ಶೆಕ್ಸಪಿಯರ್, ಕಾಲಿದಾಸ, ಪಂಪ, ಮೊದಲಾದ ಮಹಾಕವಿಗಳನೇಕರು ಕಥಾವಸ್ತು, ಕಾವ್ಯರಚನೆ, ಮೊದಲಾದ ವಿಧಾನಗಳಲ್ಲಿ ಪೂರ್ವ ಪರಂಪರೆಯನ್ನು ಅನುಸರಿಸಿಯೂ ಲೋಕೋತ್ತರ ಪ್ರತಿಭೆಯನ್ನು ಬೀರಿದುದು ಸುಪರಿಚಿತವಾದ ವಿಷಯ.

ಶಾಸನ ಸಾಹಿತ್ಯದಲ್ಲಿಯ ರಗಳೆಯ ಪ್ರಾಚೀನತೆ ಇನ್ನೂ ಒಂದು ಅಪೂರ್ವ ನಿದರ್ಶನದಿಂದ ಪೋಷಿತವಾಗುತ್ತದೆ. ಇದುವರೆಗೆ ನಾವು ಕಂಡ ರಗಳೆಯ ಉದಾಹರಣೆಗಳು ಕನ್ನಡ ನಾಡಿನ ಕನ್ನಡ ಶಿಲಾಶಾಸನಗಳಲ್ಲಿ ದೊರೆತುವು. ಈ ಪ್ರಸ್ತುತ ನಿದರ್ಶನವೋ ಆಂಧ್ರದೇಶದಲ್ಲಿ ದೊರೆತ ಒಂದು ತಾಮ್ರಶಾಸನದಲ್ಲಿಯದು ! ಈ ತಾಮ್ರಶಾಸನದ ಭಾಷೆ ಸಂಸ್ಕೃತ. ಇದು ಪೂರ್ವ ಚಾಲುಕ್ಯರ ಇಮ್ಮಡಿ ರಾಜರಾಜನ (ಕ್ರಿ.ವ. ೧೦೨೨–೧೦೬೦) ಆಳಿಕೆಯಲ್ಲಿ ಹುಟ್ಟಿದುದು. ಇದರಲ್ಲಿ ಚೀಡಮಾರ್ಯನೆಂಬ ಬ್ರಾಹ್ಮಣನಿಗೆ ದತ್ತಿಯನ್ನು ಸಲ್ಲಿಸಿದ ಸಂಗತಿಯನ್ನು ಹೇಳಿ ಆ ಬಳಿಕ ಈ ಪ್ರತಿಗ್ರಹೀತೃವಿನ ವರ್ಣನೆ ಬರುತ್ತದೆ. ಅದರ ಕೆಲವು ಪಂಕ್ತಿಗಳನ್ನು ಇಲ್ಲಿ ಎತ್ತಿ ಬರೆಯುವೆ :

ತಸ್ಮೈ ಸಮಸ್ತ ಜನತಾ ವಿಶೇಷಗುಣಾಯ |
ರೈ ಸುತರ್ಪಿತ ಮಹೀದೇವ ದೇವಣಾಯ ||
ವಿಪ್ರಾನ್ವಯಾಬ್ಧಿಶಶಭೃತ್ಪ್ರೀತಿಜನ್ಸ್ವಾಯ |
ವಿದ್ವಜ್ಜನಾಂಗೀಕೃತವಿಶ್ರುತಾನನ್ವಾಯ ||
ಜನ್ಮಪ್ರಭೃತಿಗೀತವೇಪಾರ್ಥತತ್ವಾಯ |
ಸನ್ಮನೋವಸತಿವಾಸ್ತವ್ಯಾತ್ಮಸತ್ವಾಯ ||
ಲಂಭಿತಗುರುತ್ತಪರಿಲಾಲಿತಚರಿತ್ರಾಯ |
ಶುಂಭಿತಮತಿಶ್ವಸಿತಜೀವಭೃಗುಪುತ್ರಾಯ ||

(ವಿಸ್ತಾರಭಯದಿಂದ ಇದನ್ನು ಪೂರ್ತಿಯಾಗಿ ಕೊಡುವುದಿಲ್ಲ. ಜಿಜ್ಞಾಸುಗಳು *Indian Antiquary* Vol, XIV, P p. 54-55ರಲ್ಲಿ ಇದನ್ನು ಪೂರ್ತಿಯಾಗಿ ಕಾಣಬಹುದು. ಈ ಶಾಸನವನ್ನು ಓದಿದ ಫ್ಲೀಟ ಸಾಹೇಬರು ಕೆಲವು ತಪ್ಪುಗಳನ್ನು ಮಾಡಿದ್ದಾರೆ. ಶಾಸನದ ಪ್ರತಿಚ್ಛಾಯೆಯ ಸಹಾಯದಿಂದ ಅವುಗಳನ್ನು ತಿದ್ದಿ ಶುದ್ಧವಾದ ಪಾಠವನ್ನು ನಾನು ಇಲ್ಲಿ ಕೊಟ್ಟಿದ್ದೇನೆ.)

ಈ ಶಾಸನದ ಸಂಪಾದಕರಾದ ಫ್ಲೀಟ ಸಾಹೇಬರಿಗೆ ಶಾಸನದ ಈ ಭಾಗದ ರಚನೆಯ ಬಗೆಗೆ ಸರಿಯಾದ ಕಲ್ಪನೆ ಆಗಿರಲಿಲ್ಲ. ಆದುದರಿಂದ ಅವರು ಹೀಗೆ ಹೇಳಿದರು: This passage is *gadya* or rhythmical and alliterative prose. ಆದರೆ ಇದು ಮೇಲಿನ ಅನೇಕ ಉದಾಹರಣೆಗಳಲ್ಲಿಯೂ ಹರಿಹರನ ಕೃತಿಗಳಲ್ಲಿಯೂ ಕಾಣುವ ಮತ್ತು ಮಾತ್ರಾನಿಯಮ, ಆದ್ಯಂತ ಪ್ರಾಸವೇ ಮೊದಲಾದ ಲಕ್ಷಣಗಳಿಂದ ಕೂಡಿದ, ಲಲಿತರಗಳೆಯೇ ಆಗಿದೆ ಎಂಬುದನ್ನು ಪರಿಶೀಲಿಸಬಹುದಾಗಿದೆ. ಈ ಸಂಸ್ಕೃತ ರಗಳೆಯ ಕಾಲವು ಕೋಗಳಿಯ ಜೈನಬಸದಿ ಶಾಸನದ ರಗಳೆಗಿಂತ ಸ್ವಲ್ಪ ಮುಂಚೆ ಆಗಬಹುದು. ಈ ತಾಮ್ರಶಾಸನವನ್ನು ಬರೆದ ಕವಿಯ ಹೆಸರು ಭೀಮನಭಟ್ಟ. ಈ ಶಾಸನವು ಕೋರುಮಿಲ್ಲಿ ಶಾಸನ ಎಂಬುದಾಗಿ ಹೆಸರುವಡೆದಿದೆ.

## ೩ ತೆಲುಗಿನಿಂದ ಬೆಳಕು

ಕೋರುಮಿಲ್ಲಿ ಶಾಸನದಲ್ಲಿಯ ಈ ರಗಳೆ ಸಂಸ್ಕೃತ, ಆಂಧ್ರ ಮತ್ತು ಕನ್ನಡ ಸಾಹಿತ್ಯಗಳ ವಿಮರ್ಶೆಯಲ್ಲಿ ನೂತನವಾದ ಕೆಲ ಸಮಸ್ಯೆಗಳನ್ನು ಉಂಟುಮಾಡುತ್ತದೆ. ಮೊದಲು ಸಂಸ್ಕೃತ ಸಾಹಿತ್ಯವನ್ನು ಪರೀಕ್ಷಿಸುವ. ಹಾಡಿನ ರೂಪವಾದ ವೈತಾಲೀಯ, ಮಾತ್ರಾಸಮಕ, ಗಾಥಾ, ಮೊದಲಾದ ಜಾತಿಯ ವೃತ್ತಗಳಲ್ಲಿ ಜಾನಪದ ಗೀತಗಳ ಪ್ರಭಾವವು ಕಂಡು ಬರುತ್ತಿದ್ದರೂ ಮೇಲಿನಂತಹ ವೃತ್ತವಾಗಲಿ, ಅದರ ಲಕ್ಷಣವಾಗಲಿ ಸಂಸ್ಕೃತ ಸಾಹಿತ್ಯ ಮತ್ತು ಲಕ್ಷಣಗ್ರಂಥಗಳಲ್ಲಿ ಎಲ್ಲಿಯೂ ದೊರೆಯುವುದಿಲ್ಲ. 'ಪದ್ಯಂ ಚತುಷ್ಪಯಂ' (ಹಲಾಯುಧ) ಎಂಬ ವಿಧಿಯಿಂದ ಬದ್ಧವಾದ ಸಂಸ್ಕೃತ ಪದ್ಯ ಪ್ರಪಂಚವೆಲ್ಲವು ನಾಲ್ಕು ಪಾದಗಳುಳ್ಳುದು ಆಗಿರುವುದರಿಂದ, ಎರಡು ಪಾದಗಳು ಮತ್ತು ಆದ್ಯಂತಪ್ರಾಸವೇ ಮೊದಲಾದ ಲಕ್ಷಣಗಳಿಂದ ಒಪ್ಪುವಂತಹದಾದ ಈ ರಚನೆ ದೇಶ್ಯವೇ ಆಗಿರಬೇಕು ಎಂಬ ಬಗೆಗೆ ಸಂದೇಹವು ಉಳಿಯುವುದಿಲ್ಲ.

ಮೇಲೆ ನಿರೂಪಿಸಿದಂತೆ ಇದು ನಾಗವರ್ಮಾದಿ ಕನ್ನಡ ಲಕ್ಷಣಕಾರರು ಹೇಳಿದ ಲಲಿತರಗಳೆಯ ರೀತಿಯದಾಗಿದೆ. ಆದರೆ ತೆಲುಗಿನಲ್ಲಿಯೂ ರಗಳೆ (ರಗಡ) ದೊರಕುತ್ತಿದ್ದುದರಿಂದಲೂ ಈ ಶಾಸನವು ತೆಲುಗು ದೇಶದಲ್ಲಿ ದೊರೆತುದುದರಿಂದಲೂ ತೆಲುಗಿನ ರಚನೆಯನ್ನು ಅನುಸರಿಸಿ ಇದನ್ನು ಸಂಸ್ಕೃತದಲ್ಲಿ ರಚಿಸಿರಬಹುದಲ್ಲವೆ ಎಂಬ ವಿಚಾರವು

ಸ್ವಾಭಾವಿಕವಾಗಿಯೇ ಬಂದುನಿಲ್ಲುತ್ತದೆ. ಆದಕ್ಕಾಗಿ ಈ ಸಂಸ್ಕೃತ ರಗಳೆಯ ಮೇಲೆ ತೆಲುಗಿನ ಪ್ರಭಾವವು ಎಷ್ಟರಮಟ್ಟಿಗೆ ಬಿದ್ದಿರಬಹುದು ಎಂಬುದನ್ನು ಪರೀಕ್ಷಿಸುವ.

ಯಾವ ಇಮ್ಮಡಿ ರಾಜರಾಜನ ಕಾಲದ ಪ್ರಸ್ತುತ ಶಾಸನದಲ್ಲಿ ಈ ಸಂಸ್ಕೃತ ರಗಳೆ ಕಾಣಿಸಿಕೊಂಡಿದೆಯೋ ಅದೇ ರಾಜನ ಆಸ್ಥಾನ ಕವಿ ನನ್ನಯಭಟ್ಟ; ಈತನು ತೆಲುಗಿನ ಆದ್ಯಕವಿ.. ಈತನು ತನ್ನ ಭಾರತದಲ್ಲಿ ಅಕ್ಕರ, ತರುವೋಜ, ಸೀಸ, ಎಂಬೀ ದೇಶೀಯ ಛಂದಸ್ಸುಗಳನ್ನು ಬಳಸಿದ್ದರೂ ರಗಡವನ್ನು (ರಗಳೆಯನ್ನು) ಮಾತ್ರ ಎಲ್ಲಿಯೂ ಬಳಸಿಲ್ಲ. ನನ್ನಯ ಭಟ್ಟನ ತರುವಾಯ ಸ್ವಲ್ಪಕಾಲದಲ್ಲಿ ಬಾಳಿದ ವೇಮುಲವಾಡ ಭೀಮಕವಿ ಕವಿ ಜನಾಶ್ರಯಮು ಎಂಬ ಛಂದಶ್ಶಾಸ್ತ್ರ ಗ್ರಂಥವನ್ನು ರಚಿಸಿರುವನು. ಅದರಲ್ಲಿ 'ತೆನುಗು ಜಾತುಲು' ಎಂಬ ಪ್ರಕರಣದಲ್ಲಿ ದೇಸಿರಚನೆಗಳನ್ನು ವಿವರಿಸುತ್ತ ಸೀಸಪದ್ಯ, ತರುವೋಜ, ಅಕ್ಕರ, ಮೊದಲಾದ ವೃತ್ತಗಳ ಲಕ್ಷಣವನ್ನು ಹೇಳಿದ್ದರೂ ರಗಡದ ಪ್ರಸ್ತಾವವೇ ಇಲ್ಲ. (ದಿವಂಗತ ಜಯಂತೀ ರಾಮಯ್ಯ ಪಂತುಲು ಸಂಪಾದಿತ ಕವಿಜನಾಶ್ರಯಮು ಪು. ೬೩–೭೫) ಈ ಲಕ್ಷಣಗ್ರಂಥದ ಕಾಲವಿಚಾರದಲ್ಲಿ ಭಿನ್ನಾಭಿಪ್ರಾಯವಿದೆ. ಭೀಮಕವಿ ೧೨ನೆಯ ಶತಮಾನದ ಆರಂಭದಲ್ಲಿ ಜೀವಿಸಿರಬೇಕು ಎಂಬುದಾಗಿ ಪ್ರತಿಪಾದಿಸಿದ ದಿವಂಗತ ರಾಮಯ್ಯ ಪಂತುಲು ಅವರ ಅಭಿಪ್ರಾಯವು ಸಮರ್ಪಕವೆಂದು ನನಗೆ ತೋರುತ್ತಿದ್ದುದರಿಂದ ಅದನ್ನು ನಾನಿಲ್ಲಿ ಸ್ವೀಕರಿಸಿದ್ದೇನೆ. (ತೆಲುಗು ಪೀಠಿಕೆಯ ಪು. ೨೦.) ತೆಲುಗಿನಲ್ಲಿ ರಗಡ ಹೆಚ್ಚಾಗಿ ಪ್ರಚುರವಾದುದು ಈಚೆಯ ಕಾಲದಲ್ಲಿ. ಅದು ೧೧ನೆಯ ಶತಮಾನದಷ್ಟು ಪ್ರಾಚೀನಕಾಲದ ತೆಲುಗು ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವುದಿಲ್ಲ.

ಆದರೆ ೧೦ನೆಯ ಶತಮಾನದ ಪೂರ್ವದಿಂದ ಕನ್ನಡ ಸಾಹಿತ್ಯದಲ್ಲಿ ರಗಳೆ ಬಳಕೆಗೆ ಬಂದಿತ್ತು ಎಂಬುದಕ್ಕೆ ಛಂದೋಂಬುಧಿಯ ಸಾಕ್ಷ್ಯವು ದೊರೆಯುತ್ತದೆ. ಆದುದರಿಂದ ಕೋರುಮಿಲ್ಲಿ ಶಾಸನದಲ್ಲಿಯ ಸಂಸ್ಕೃತ ರಗಳೆ ಕನ್ನಡನಾಡಿನ ರಘಟಾಬಂಧದ ಪ್ರಭಾವದಿಂದ ಸೃಷ್ಟಿಯಾಗಿರಬೇಕು ಎಂದು ನಿರ್ಧರಿಸುವುದು ಕ್ರಮಪ್ರಾಪ್ತವಾಗಿದೆ. ತೆಲುಗಿನ ಆದ್ಯಕವಿ ನನ್ನಯ ಭಟ್ಟನಿಗೆ ಕನ್ನಡ ಸಾಹಿತ್ಯವೂ ಕನ್ನಡ ಸಾಹಿತ್ಯ ಧುರೀಣನಾದ ಕವಿರಾಜಶೇಖರ ನಾರಾಯಣಭಟ್ಟನೂ ಮಾರ್ಗದರ್ಶಿಯಾದ ಸಂಗತಿ ಸುವಿಶ್ರುತವಾಗಿದೆ. (ವೀರೇಶಲಿಂಗಕೃತ ಆಂಧ್ರಕವುಲ ಚರಿತ್ರಮು, ಪು. ೧೦–೧೧; ಕರ್ಣಾಟಕ ಕವಿಚರಿತೆ, ಸಂ. ೧, ಪು. ೭೪.) ತೆಲುಗಿನ ಪ್ರಥಮ ಲಕ್ಷಣಗ್ರಂಥವಾದ ಕವಿಜನಾಶ್ರಯಮು ಇದರ ಮೇಲೆ ಕನ್ನಡಲಕ್ಷಣ ಗ್ರಂಥಗಳ, ವಿಶೇಷವಾಗಿ ನಾಗವರ್ಮನ ಛಂದೋಂಬುಧಿಯ ಮುದ್ರೆ ಸ್ಪಷ್ಟವಾಗಿ ಮೂಡಿದೆ. (ಇದನ್ನು ಸಂಪಾದಿಸಿದ ರಾಮಯ್ಯ ಪಂತುಲುಗಾರು ಕೆಲವು ಅಂಶಗಳನ್ನು ತೋರಿಸಿದ್ದಾರೆ; ಇನ್ನೂ ಕೆಲ ಅಂಶಗಳನ್ನು ಎತ್ತಿ ತೋರಿಸಬಹುದಾಗಿದೆ.) ಪಾಲ್ಕುರಿಕೆ ಸೋಮನಾಥನೇ ಮೊದಲಾದ ಆಂಧ್ರಕವಿಗಳ ಕೃತಿಗಳ ಮೇಲೆ ಕನ್ನಡ ಸಾಹಿತ್ಯದ ಛಾಯೆ (ಹರಿಹರಕವಿಯ ಬಸವರಾಜದೇವರ ರಗಳೆ ಮತ್ತು ಸೋಮನಾಥನ ಬಸವಪುರಾಣಮು ಇವುಗಳಲ್ಲಿಯ ಹೋಲಿಕೆಗಳನ್ನು ಕುರಿತು ಇನ್ನೊಮ್ಮೆ ಸ್ವತಂತ್ರವಾಗಿ ಪ್ರಸ್ತಾವಿಸಲಿರುವೆ) ಕಂಡು ಬರುವುದು. ತೆಲುಗು ಕಾವ್ಯಗಳಲ್ಲಿ ಪ್ರಯೋಗವಾದ ತರುವೋಜ, ಉತ್ಸಾಹ ಮತ್ತು ಅಕ್ಕರ ಈ ವೃತ್ತಗಳು ಮೂಲದಲ್ಲಿ ಕನ್ನಡವಾಗಿದ್ದು ತೆಲುಗು ಕವಿಗಳು ಎರವಲಾಗಿ ಅವುಗಳನ್ನು ಎತ್ತಿಕೊಂಡು ತಮ್ಮ ಕಾವ್ಯಗಳಲ್ಲಿ ಬಳಸಿದರು ಎಂಬುದಾಗಿ ಅನ್ವೇಷಕರು ಪ್ರತಿಪಾದಿಸಿದ್ದಾರೆ (ಕಿಟ್ಟೆಲ ಸಂಪಾದಿತ ಛಂದೋಂಬುಧಿಯ ಇಂಗ್ಲಿಶ ಅವತರಣಿಕೆ, ಪು. ೨೩). ಇದೇ ಮಾತು ರಗಳೆಗೂ ಅನ್ವಯಿಸುವುದು. ಮೊದಲು ಕನ್ನಡ ನಾಡಿನಿಂದ ತೆಲುಗು ದೇಶಕ್ಕೆ ವಲಸೆ ಹೋದ ಈ ರಚನೆ ಹಲವು ಸಂಸ್ಕಾರಗಳನ್ನು ಪಡೆದು

ಹಯಪ್ರಚಾರಮು, ತುರಗವಲ್ಗನಮು. ವಿಜಯಮಂಗಳಮು, ಮೊದಲಾದ ನವವಿಧರಗಳ ಗಳಾಗಿ ಶೋಭಿವೆತ್ತು, ತೆಲುಗು ಯಕ್ಷಗಾನಗಳಲ್ಲಿಯೂ ಸ್ಥಾನವನ್ನು ಗಳಿಸಿಕೊಂಡಿವೆ. (ಅಪ್ಪಕವೀಯಮು, ಪದ್ಯಗಳು ೨೯೦-೩೦೪.) 'ಕರ್ಣಾಟ ಚತುಷ್ಪದ' ಎಂಬ ಚತುಷ್ಪದಿಯ ಪ್ರಕಾರವು ತೆಲುಗು ಲಕ್ಷಣಕಾರರಿಂದ ನಿರ್ದಿಷ್ಟವಾಗಿದೆ (ಅದೇ ಗ್ರಂಥ, ಪದ್ಯ ೨೮೬).

ತರುವೋಜ, ಉತ್ಸಾಹ ಮತ್ತು ಅಕ್ಕರ ಈ ವೃತ್ತಗಳು ಮೂಲದಲ್ಲಿ ಕನ್ನಡವೆಂಬ ಅಂಶವನ್ನು ಮೇಲೆ ನಿರೂಪಿತವಾಗಿದೆಯಷ್ಟೆ. ಈ ಮೂರು ವೃತ್ತಗಳು ರಗಳೆಯ ಜೊತೆಗೆ ಕನ್ನಡ ಸಾಹಿತ್ಯದಲ್ಲಿ ಮೊದಲು ಬಾರಿ ದೊರೆಯುವುದು ಆದಿಪಂಪನ ಕೃತಿಗಳಲ್ಲಿ(ಕ್ರಿ.ವ.೯೪೧). ಆದುದರಿಂದ ಇವು ಇದಕ್ಕೂ ಹಿಂದೆಯೆ ಜಾನಪದ ಪ್ರದೇಶದಿಂದ ಸಾಹಿತ್ಯರಂಗಕ್ಕೆ ಕಾಲಿಟ್ಟಿರಬೇಕು ಎಂದು ಇಟ್ಟುಕೊಳ್ಳುವಂತಿದೆ. ಆದರೆ ಈಗ ಬೆಳಕು ಕಂಡ ಕನ್ನಡ ಶಾಸನ ಗಳಲ್ಲಿ ಎಲ್ಲಿಯೂ ಇವು ಕಾಣಿಸಿಕೊಳ್ಳುವುದಿಲ್ಲ. ಶಾಸನ ಸಾಹಿತ್ಯದಲ್ಲಿ ಅವುಗಳನ್ನು ಗುರುತಿಸ ಬೇಕಾದರೆ ನಾವು ಬೆಜವಾಡ, ಗುಂಟೂರ ಕಡೆಯ ಆಂಧ್ರದೇಶಕ್ಕೆ ಪ್ರಯಾಣಮಾಡಬೇಕು. ಇದೊಂದು ಸೋಜಿಗವೆಂಬಂತೆ ತೋರಿದರೂ ಸತ್ಯವಾಗಿದೆ.

ತೆಲುಗು ಸಾಹಿತ್ಯದ ಪ್ರಾರಂಭವು ನನ್ನಯಭಟ್ಟನಿಂದ (ಕ್ರಿ.ವ. ೧೦೫೦) ಆಯಿತು ಎಂದು ಮೊದಮೊದಲು ಎಣಿಸಲಾಗುತ್ತಿತ್ತು. ತೆಲುಗು ಶಾಸನಗಳ ಪರಿಶೋಧನೆಯಲ್ಲಿ ಬೆಜವಾಡದ ಯುದ್ಧಮಲ್ಲನ ಸ್ತಂಭಶಾಸನವು ದೊರೆತಿತು. (*Ep. Ind.* XV, p. 150.) ಈ ಶಾಸನವು ಮಧ್ಯಾಕ್ಕರ ವೃತ್ತದ ತೆಲುಗು ಪದ್ಯದಲ್ಲಿ ರಚಿತವಾಗಿದೆ. ಈ ವೃತ್ತವು ನಾಗವರ್ಮನು ನಿರೂಪಿಸಿದ ದೊರೆ ಅಕ್ಕರ ವೃತ್ತದ ಲಕ್ಷಣಗಳಿಂದ ಕೂಡಿದ್ದು, ಯತಿ, ಮೊದಲಾದ ನಿಯಮಗಳಲ್ಲಿ ಇದು ಈಚೆಯ ತೆಲುಗು ರಚನೆಗೆ ಸರಿಹೊಂದದೆ ಪ್ರಾಚೀನ ಕನ್ನಡ ರಚನೆಗೆ ಸರಿಹೊಂದುವುದು. ಈ ಶಾಸನದ ಕಾಲ ಸು.ಕ್ರಿ.ವ. ೯೩೦; ಎಂದರೆ ನನ್ನಯ ಭಟ್ಟನಿಗಿಂತ ಸು. ಒಂದೂವರೆ ನೂರು ವರ್ಷ ಹಿಂದಿನದು. ಇದು ಆದಿ ಪಂಪನಿಗಿಂತ ಸು. ಅರ್ಧ ಶತಮಾನ ಮುಂಚಿತವಾಗುವುದು.

ಗುಂಟೂರ ಜಿಲ್ಲೆಯ ಅದ್ದಂಕಿ ಗ್ರಾಮದಲ್ಲಿ ದೊರೆತ ಪಂಡರಂಗನ ಶಿಲಾಶಾಸನವು (*Ep. Ind.* Vol. XIX, p. 274) ತೆಲುಗು ಸಾಹಿತ್ಯದ ಪ್ರಾರಂಭಕಾಲವನ್ನು ಇನ್ನೂ ಅರ್ಧ ಶತಮಾನ ಹಿಂದಕ್ಕೆ ತಳ್ಳಿದೆ. ಈ ಶಾಸನದಲ್ಲಿ ಪಂಡರಂಗನೆಂಬ ಒಬ್ಬ ನಾಯಕನ ಕರ್ತೃತ್ವ ವನ್ನು ಕಾವ್ಯ ಬದ್ಧವಾಗಿ ತರುವೋಜ ವೃತ್ತದಲ್ಲಿ ಬಣ್ಣಿಸಿದೆ. ಈ ವೃತ್ತವು ನಾಲ್ಕು ದ್ವಿಪದಿ ಗಳಿಂದಕೂಡಿದ ಎಂಟು ಪಾದಗಳುಳ್ಳುದು. ಈ ಶಾಸನದ ಕಾಲ ಸು. ಕ್ರಿ.ವ. ೮೫೦; ಎಂದರೆ ಆದಿಪಂಪನಿಂದ ಸುಮಾರು ಒಂದು ಶತಮಾನ ಹಿಂದಿನದು.

ದ್ವಿಪದಿ ದೇಸಿಯ ರಚನೆ; ಇದು ಹಾಡಿನ ರೂಪವಾದುದು. ಜಾನಪದ ಗೀತಗಳಲ್ಲಿ ರೂಢವಾಗಿದ್ದ ಈ ರಚನೆಯನ್ನು ಪಂಡಿತಕವಿಗಳು ಎತ್ತಿಕೊಂಡು, ಪ್ರೌಢಕಾವ್ಯಸಂಸ್ಕಾರ ದಿಂದ ಅಭಿವೃದ್ಧಿಗೊಳಿಸಿ 'ತರುವೋಜ'ಎಂಬ ದೀರ್ಘವೃತ್ತವನ್ನಾಗಿ ಮಾಡಿದರು. ಈ ಮೇರೆಗೆ ಮೊದಲಿನ ಲಘು-ಸುಲಭವಾದ ದ್ವಿಪದಿ ಈ ಸ್ವರೂಪವನ್ನು ಹೊಂದಲು ಸ್ವಲ್ಪ ಕಾಲವಾದರೂ ಗತಿಸಿರಬೇಕು. ಆದರೆ ತೆಲುಗು ಸಾಹಿತ್ಯದಲ್ಲಿ ಆಗಲಿ ಕನ್ನಡ ಸಾಹಿತ್ಯದಲ್ಲಿ ಆಗಲಿ ಇಷ್ಟು ಹಿಂದಿನ ಕಾಲದಲ್ಲಿ ದ್ವಿಪದಿಗಳು ಉಪಲಬ್ಧವಾಗಿಲ್ಲ. ಮೊದಲು ಬಾರಿ ತನ್ನ ಇಡಿಯ ಕಾವ್ಯ ವನ್ನು ದ್ವಿಪದಿಯಲ್ಲಿ ರಚಿಸಿದವನು ತೆಲುಗು ಕವಿ ಪಾಲ್ಕುರಿಕೆ ಸೋಮನಾಥ.

ನಾಗವರ್ಮನು ದ್ವಿಪದಿ, ತ್ರಿಪದಿ, ಷಟ್ಪದಿ, ರಗಳೆ, ಅಕ್ಕರ, ತರುವೋಜ ಮೊದಲಾದ ಹಲವು ವೃತ್ತಗಳನ್ನು ಕರ್ಣಾಟಕ ಜಾತಿಗಳೆಂದು ನಿರ್ದೇಶಿಸಿ ಅವುಗಳ

ಲಕ್ಷಣವನ್ನು ವಿವರಿಸಿರುವನು (ಛಂದೋಂಬುಧಿ, ಪಂಚಮಾಶ್ವಾಸಂ). ಚಂಪಕಮಾಲೆ, ಉತ್ಪಲ ಮಾಲೆ, ಮತ್ತೇಭವಿಕ್ರಿಡಿತ, ಮೊದಲಾದ ಸಂಸ್ಕೃತಗಣನಿಯಮನಿಷ್ಟವಾದ ಪದ್ಯಗಳ ಜೊತೆಗೆ ತರುವೋಜ, ಅಕ್ಕರ, ಸೀಸ ಎಂಬೀ ದೇಸಿ ರಚನೆಗಳನ್ನು ನನ್ನಯಭಟ್ಟನು ತನ್ನ ಭಾರತದಲ್ಲಿ ಪ್ರಯೋಗಿಸಿರುವನು. ಈತನ ಮುಂದಿನ ತೆಲುಗುಕವಿಗಳು ದ್ವಿಪದಿ, ಷಟ್ಪದಿ, ರಗಳೆ ಮೊದಲಾದ ಮಿಕ್ಕ ದೇಸಿಯ ರಚನೆಗಳನ್ನೂ ಪ್ರಯೋಗಿಸತೊಡಗಿದರು. ಈಚೆಗೆ ನನ್ನಯ ಭಟ್ಟನ ಕಾಲಕ್ಕಿಂತ (ಕ್ರಿ.ಪ. ೧೦೪೦) ಪೂರ್ವದ ಅನೇಕ ತೆಲುಗು ಶಾಸನಗಳು ಪ್ರಕಟ ವಾಗಿವೆ. ಅವುಗಳಲ್ಲಿ ಕೆಲವು ಪದ್ಯರೂಪವಾಗಿದ್ದು, ಆ ಪದ್ಯಗಳು ಎಲ್ಲವು ದೇಸಿಯ ರಚನೆಯಲ್ಲಿ ಇವೆ. ಇದು ಅತ್ಯಂತ ಲಕ್ಷಣೀಯವಾದ ಘಟನೆ. ತೆಲುಗು ಶಾಸನಗಳಿಂದ ಸಿಕ್ಕುವ ಈ ಬೆಳಕು ಕನ್ನಡ ಸಾಹಿತ್ಯದ ಪ್ರಾಚೀನ ಚರಿತ್ರೆಯನ್ನು ಗುರುತಿಸಲು ಕೆಲಮಟ್ಟಿಗೆ ನೆರವಾಗಬಲ್ಲುದು. ಈ ನೆರವಿನ ಪರಿಯನ್ನು ಈ ಪ್ರಬಂಧದ ಎರಡನೆಯ ಭಾಗದ ಆದಿಯಲ್ಲಿ ಬಾದಾಮಿಯ ತಟ್ಟಿಕೋಟೆಯ ಬಳಿಯ ಬಂಡೆಗಲ್ಲಿನ ಮೇಲಿನ ತ್ರಿಪದಿ-ಸಾಂಗತ್ಯರೂಪ ಶಾಸನದ ವಿವೇಚನೆಯಲ್ಲಿ ಸೂಚಿಸಲಾಗಿದೆ.

ಈ ಮೇರೆಗೆ ಕೇವಲ ಸಾಹಿತ್ಯದ ಕರದೀಪವು ನಂದಿ ನಾವು ಕತ್ತಲೆಯಲ್ಲಿ ತಡವರಿ ಸುತ್ತಿರುವಾಗ ಶಾಸನ ಸಾಹಿತ್ಯವು ನಮಗೆ ಸಹಾಯವಾಗಿ ಅರಿವಿನ ಬೆಳಕನ್ನು ತೋರಿಸುವುದು. ಪ್ರಾಚೀನ ಕರ್ನಾಟಕದೊಂದಿಗೆ ತೆಲುಗು ಪ್ರದೇಶದಿಂದಲೂ ಬಂದ ಕಿರಣಗಳು ಈ ಬೆಳಕಿನಲ್ಲಿ ಸೇರಿವೆ. ಇದರಿಂದ ನಮ್ಮ ಸಾಹಿತ್ಯದ ದಾರಿ ಈಗ ನಮಗೆ ತಿಳಿದುದಕ್ಕಿಂತ ಇನ್ನೂ ಕೆಲಶತಮಾನಗಳ ಹಿಂದಕ್ಕೆ ಕಾಣತೊಡಗುವುದು. ಈ ದಾರಿಯಲ್ಲಿ ಹೆಜ್ಜೆಯಿಕ್ಕುವಾಗ ಹಳ್ಳಿಗರ ಹಾಡಿನಲ್ಲಿಯೂ ಹೆಂಗಳೆಯರ ಗೀತಗಳಲ್ಲಿಯೂ ಮೊಳೆತು ಅಲೆಯೇರಿ ಬರುವ ನಮ್ಮ ಕಾವ್ಯದ ಇಂಪಾದ ಆಲಾಪಗಳನ್ನು ದೂರದಿಂದ ಆಲಿಸಲು ನಾವು ಸಮರ್ಥರಾಗುವೆವು.

ಈ ಪ್ರಬಂಧದಲ್ಲಿ ನಾನು ನಿರ್ದೇಶಿಸಿದ ಕೆಲವು ಗ್ರಂಥಕಾರರ (ಉದಾ: ನಾಗವರ್ಮ) ಕಾಲವಿಚಾರವಾಗಿ ಭಿನ್ನಾಭಿಪ್ರಾಯಗಳು ಇವೆ ಎಂಬ ಅರಿಕೆ ನನಗೆ ಇಲ್ಲದೆ ಇಲ್ಲ. ಆದರೆ ಅಂತಹ ಸೂಕ್ಷ್ಮಕ್ಕೆ ಇಳಿಯುವುದು ನನ್ನ ವಿವೇಚನೆಗೆ ಅನಾವಶ್ಯಕವಾಗಿ ತೋರಿದುದರಿಂದ ನಾನು ಹೆಚ್ಚು ಮಾನ್ಯತೆಯನ್ನು ಪಡೆದಿದ್ದ ಕಾಲಸಂಕೇತಗಳನ್ನೇ ಸ್ಥೂಲವಾಗಿ ಇಲ್ಲಿ ಸ್ವೀಕರಿಸಿದ್ದೇನೆ. ಯಾವೊಬ್ಬ ಕವಿಯ ಕಾಲವು ಇಲ್ಲಿ ನಾನು ಗ್ರಹಿಸಿದುದ ಕ್ಕಿಂತ ಭಿನ್ನವಾದುದು ಎಂದು ನಿರ್ದುಷ್ಟ ಪ್ರಮಾಣಗಳಿಂದ ಸಿದ್ಧವಾದರೂ ನನ್ನೀ ಪ್ರಬಂಧ ದಲ್ಲಿಯ ಮುಖ್ಯ ಪ್ರತಿಪಾದನೆಗೆ ಯಾವ ವಿಧದಿಂದಲೂ ಬಾಧೆ ಬರುವಂತಿಲ್ಲ.

ಮೇಲಿನ ವಿವೇಚನೆಯಲ್ಲಿ ಸೇರಬೇಕಾದ ಇನ್ನೆರಡು ಅಂಶಗಳನ್ನು ಇಲ್ಲಿ ಸೂಚಿಸಿ ಈ ಪ್ರಬಂಧವನ್ನು ಮುಗಿಸುವೆ. ಶ್ರವಣಬೆಳಗೊಳದಲ್ಲಿಯ ಜೈನ ಯತಿಗಳ ನಿಸಿಧಿಲೇಖನ ಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಅತಿಪ್ರಾಚೀನ ಕನ್ನಡ ಕಾವ್ಯದ ಕೆಲವು ಉದಾಹರಣೆ ಗಳು ನಮಗೆ ಅಲ್ಲಿ ಸಿಕ್ಕುತ್ತವೆ. ಇಂತಹ ಶಾಸನಗಳು ಮತ್ತೇಭವಿಕ್ರೀಡಿತ, ಮಲ್ಲಿಕಾ ಮಾಲೆ, ಮೊದಲಾದ ಸಂಸ್ಕೃತ ಪರಂಪರೆಯ ಗಣವೃತ್ತಗಳಲ್ಲಿ ಬರೆದುವು ಆಗಿವೆ. ಈ ಶಾಸನಗಳಲ್ಲಿ ಕಾಲನಿರ್ದೇಶವಿಲ್ಲದುದರಿಂದ ಲಿಪಿ ಶಾಸ್ತ್ರದ (*Palaeography*) ಸಹಾಯ ದಿಂದ ಇವುಗಳ ಕಾಲವನ್ನು ಸ್ಥೂಲವಾಗಿ ನಿರ್ಧರಿಸಬಹುದಾಗಿದೆ. ಲಿಪಿಶಾಸ್ತ್ರವು ಎಷ್ಟೇ ಅಚ್ಚುಕಟ್ಟಾಗಿದ್ದರೂ ಅದನ್ನು ಅನುಸರಿಸಿ ನಿರ್ಧರಿಸಬಹುದಾದ ಕಾಲಸಂಕೇತದಲ್ಲಿ ಒಂದರ್ಧ ಶತಮಾನದಷ್ಟು ವ್ಯತ್ಯಾಸಕ್ಕೂ ಕೆಲವೆಡೆ ಭಿನ್ನಾಭಿಪ್ರಾಯಕ್ಕೂ ಅವಕಾಶ

ವಿರುವುದು ಎಂಬುದು ಬಲ್ಲವರು ಅರಿತ ಸಂಗತಿ. ಶ್ರವಣಬೆಳಗೊಳದ ಪ್ರಾಚೀನ ಕನ್ನಡ ಪದ್ಯರೂಪಶಾಸನಗಳು ಪ್ರಾಯಿಕವಾಗಿ ಎಂಟನೆಯ ಶತಮಾನದಲ್ಲಿ ರಚಿತವಾದುವು ಎಂದು ಹೇಳಬಹುದು. ಎಂದರೆ ಇವುಗಳ ಕಾಲವೂ ಬಾದಾಮಿಯ ತಟ್ಟಕೋಟೆ ಬಳಿಯ ಶಾಸನದ ಕಾಲವೂ ಸ್ಥೂಲವಾಗಿ ಒಂದೇ ಆಗುವುದು. ಶ್ರ.ಬೆ. ೩೧ನೆಯ ಅಂಕದ ಶಾಸನವು ಮಾತ್ರ ಸ್ವಲ್ಪ ಹಿಂದಿನಕಾಲದ್ದು ಆಗಬಹುದು. ಸಂಸ್ಕೃತ ಶಾಸ್ತ್ರೀಯ ಪರಂಪರೆಯಲ್ಲಿ ಬೆಳೆದು ಒಂದು ವಿಶಿಷ್ಟ ಸಂಪ್ರದಾಯಕ್ಕೆ ಸೇರಿದ ಜೈನ ಆಚಾರ್ಯರಿಂದ ರಚಿತವಾದ ಈ ಶಾಸನ ಕಾವ್ಯಗಳು ಸಂಸ್ಕೃತ ಮಾರ್ಗವನ್ನೇ ಅನುಸರಿಸಿದ್ದುದು ಆಚ್ಚರಿಯಲ್ಲ. ಇದರ ಮೂಲಕ ನೈಜ ಪ್ರಾಚೀನ ಕನ್ನಡ ಕಾವ್ಯರಚನೆಯ ನೆಲೆಯನ್ನು ಕಂಡುಹಿಡಿಯಲು ಹೆಚ್ಚು ಸಹಾಯ ವಾಗಲಾರದು. ಕನ್ನಡದಲ್ಲಿ ಹಿಂದಿನಿಂದ ನಡೆದು ಬಂದ, ಲಕ್ಷಣಕಾರರು ಮತ್ತು ಚಂಪೂ ಕವಿಗಳಿಂದ ಪುರಸ್ಕೃತವಾದ ಸಂಸ್ಕೃತಾನುಸಾರಿ ಸಾಹಿತ್ಯ ಹಾಗೂ ಸ್ವಚ್ಛಂದವಾಗಿ ಜನತೆ ಯಲ್ಲಿ ಹುಟ್ಟಿ ಬೆಳೆದ ಜಾನಪದ ರಚನೆ, ಎಂಬೀ ಎರಡು ಭಿನ್ನ ಪ್ರವಾಹಗಳನ್ನು ಕುರಿತು ಈ ಪ್ರಬಂಧದ ಮಧ್ಯದಲ್ಲಿ ಸೂಚಿಸಲಾಗಿದೆ. ಶ್ರವಣಬೆಳಗೊಳದ ಪ್ರಾಚೀನ ಕನ್ನಡ ಪದ್ಯಶಾಸನಗಳಿಂದ ಇವುಗಳಲ್ಲಿ ಮೊದಲನೆಯದರ ಎಂದರೆ ಸಂಸ್ಕೃತ ಕಾವ್ಯಮಾರ್ಗದ ಪ್ರಾಚೀನತೆ ೭-೮ನೆಯ ಶತಮಾನದಷ್ಟು ಹಿಂದಕ್ಕೆ ಹೋಗುತ್ತದೆ. ಸುಮಾರಾಗಿ ಅದೇ ಕಾಲಾವಧಿಯಲ್ಲಿ ಕನ್ನಡ ಕಾವ್ಯದ ದೇಸಿಯಾದರೂ ಹೇಗೆ ಬಾಳಿ ಬೆಳೆದು ಕೊಂಡಿದ್ದಿತು ಎಂಬುದನ್ನು ಉದಾಹರಣಗಳ ಮೂಲಕ ಈ ಪ್ರಬಂಧದ ೨-೩ನೆಯ ವಿಭಾಗಗಳಲ್ಲಿ ಸ್ಪಷ್ಟಗೊಳಿಸಲಾಗಿದೆ.

ಛಂದೋನುಶಾಸನ ಎಂಬ ಪ್ರಾಚೀನ ಸಂಸ್ಕೃತ ಲಕ್ಷಣಗ್ರಂಥವೊಂದು ಈಚೆಗೆ ಬೆಳಕಿಗೆ ಬಂದಿದೆ.† ಕನ್ನಡಿಗನೂ ದಿಗಂಬರ ಸಂಪ್ರದಾಯದ ಜೈನಯತಿಯೂ ಆದ ಜಯಕೀರ್ತಿ ಎಂಬುವನು ಇದರ ಕರ್ತೃ. ಇದರಲ್ಲಿ ಸಂಸ್ಕೃತ ವೃತ್ತಗಳಲ್ಲದೆ ಕನ್ನಡ ವೃತ್ತ ಗಳನ್ನು ಕುರಿತು ವಿಶೇಷವಾಗಿ ವಿವೇಚಿಸಿ ಇದ್ದುದರಿಂದಲೂ ಇದರಲ್ಲಿಯ ವಿವೇಚನೆಯಿಂದ ಪ್ರಾಚೀನ ಕನ್ನಡ ಲಕ್ಷಣಕಾರರ ಬೇರೊಂದು ಸಂಪ್ರದಾಯದ ಸೂಚನೆ ದೊರೆಯುತ್ತಿದ್ದುದ ರಿಂದಲೂ ಕೆಲ ಪ್ರಾಚೀನ ಕನ್ನಡ ಕವಿ ಕಾವ್ಯಗ್ರಂಥಗಳ ನಿರ್ದೇಶಗಳ ಮೂಲಕವೂ ಪ್ರಾಚೀನ ಕನ್ನಡ ಸಾಹಿತ್ಯದ ವ್ಯಾಸಂಗದಲ್ಲಿ ಈ ಕೃತಿಗೆ ಹೆಚ್ಚಿನ ಬೆಲೆ ಉಂಟಾಗುತ್ತದೆ. ಇದರ ಕಾಲವು ಸು. ಕ್ರಿ.ವ. ೧೦೦೦ ಎಂಬುದಾಗಿ ಇದರ ಉದ್ಧಾರಕರಾದ ಪ್ರೊ. ವೆಲಣಕರರು ಸೂಚಿಸಿದ್ದಾರೆ. ಈ ಗ್ರಂಥದ ೭ನೆಯ ಅಧ್ಯಾಯದಲ್ಲಿ ಕನ್ನಡ ವೃತ್ತಗಳನ್ನು ವಿವರಿಸುವೆಡೆಯಲ್ಲಿ, 'ಪೂರ್ವಂ ಕರ್ಣಾಟಚ್ಛಂದೋಮತೇ' ಎಂದು ಹೇಳಿದ ಮಾತಿನಿಂದ ಅದಕ್ಕೂ ಹಿಂದೆ ಪ್ರಚಲಿತವಾಗಿದ್ದ ಯಾವುದೋ ಒಂದು ಕನ್ನಡ ಲಕ್ಷಣಗ್ರಂಥದ ಅಸ್ತಿತ್ವವು ಸೂಚಿತವಾಗುತ್ತದೆ. ಅದು ನಾಗ ವರ್ಮನ ಛಂದೋಂಬುಧಿ ಆಗಿರಲಾರದು. ಜಯಕೀರ್ತಿ ಕನ್ನಡ ವೃತ್ತಗಳ ವಿವೇಚನೆಯಲ್ಲಿ ತ್ರಿಪದಿ, ಚತುಷ್ಪದಿ, ಅಕ್ಷರ, ರಗಳೆ, ಮೊದಲಾದ ಕನ್ನಡದೇಸಿಯ ರಚನೆಗಳಿಗೂ ಸಂಗೀತಕ್ಕೂ ಕೊಟ್ಟಿರುವ ಪ್ರಾಮುಖ್ಯತೆಯನ್ನು ಪರಿಶೀಲಿಸಿದರೆ ಈತನ ಮತ್ತು ಈತನ ಹಿಂದಿನ ಕಾಲದಲ್ಲಿ ಈ ಬಗೆಯ ರಚನೆಗೆ ಪ್ರಾಶಸ್ತ್ಯವಿರಬೇಕು ಎಂದು ತೋರುತ್ತದೆ. ಇಂತು ಕನ್ನಡ ಸಾಹಿತ್ಯದ ಆರಂಭಕಾಲದಲ್ಲಿ ದೇಸಿಯ ರಚನೆ ಹೆಚ್ಚು ಪ್ರಮಾಣದಲ್ಲಿ ನಡೆಯುತ್ತ ಇದ್ದಿರಬೇಕು ಎಂತಲೂ

† *J. B. B. R. A. S.*, New Series, Vol. XXI, pp.1 ff.

ಅಂತಹ ರಚನೆಗೆ ಸಾಕಷ್ಟು ಗೌರವವು ಸಲ್ಲುತ್ತಿರಬೇಕೆಂತಲೂ ಈ ಪ್ರಬಂಧದಲ್ಲಿ ಶಾಸನ ಸಾಹಿತ್ಯದ ಆಧಾರದಿಂದ ಸೂಚಿತವಾದ ವಿಚಾರಗಳು ಜಯಕೀರ್ತಿಯ ಈ ಕೃತಿಯಿಂದ ಇನ್ನಿಷ್ಟು ಪೋಷಿತವಾಗುತ್ತವೆ.*

— ದೇಸಾಯಿ ಪಾಂಡುರಂಗರಾಯ



---

* ಈ ಪ್ರಬಂಧದ ಜಿಜ್ಞಾಸೆಯಲ್ಲಿ ನನಗೆ ಉಂಟಾದ ಒಂದೆರಡು ಸಂದೇಹಗಳ ನಿವಾರಣೆಗೆ ನೆರವಾದ
ಶ್ರೀಯುತರುಗಳಾದ ಬೆಟಗೇರಿ ಕೃಷ್ಣಶರ್ಮ ಮತ್ತು ಮುಳಿಯ ತಿಮ್ಮಪ್ಪಯ್ಯನವರಿಗೆ ನಾನು ಋಣಿಯಾಗಿದ್ದೇನೆ.
ಆದೇ ಮೇರೆಗೆ ನನ್ನೀ ಲೇಖನವು ಬೇಗ ಪ್ರಕಟವಾಗಲು ಪ್ರೋತ್ಸಾಹ ಪ್ರೇರಣೆಗಳನ್ನು ನೀಡಿದ ಶಾಸನ ವಿಭಾಗದ
ಅಸಿಸ್ಟೆಂಟ ಸೂಪರಿಂಟೆಂಡೆಂಟರಾದ ಶ್ರೀ ನೆಲಮಂಗಲ ಲಕ್ಷ್ಮೀನಾರಾಯಣರಾಯರಿಗೂ ಶ್ರೀ. ಡಿ. ಎಲ್.
ನರಸಿಂಹಾಚಾರ್ಯರಿಗೂ ನಾನು ಉಪಕೃತನಾಗಿದ್ದೇನೆ.

# ಕನ್ನಡ ನಾಟಕದ ಹಳಮೆ

ಕ್ರಿ.ಶ. ೧೮೦೦ರ ವರೆಗೆ ಕನ್ನಡ ಸಾಹಿತ್ಯಕ್ಕೆ ದಕ್ಕಿರುವ ನಾಟಕವೆಂದರೆ ಮೈಸೂ[ರು] ಅರಸನಾದ ಚಿಕದೇವರಾಯನ (ಕ್ರಿ.ಶ. ೧೬೭೨—೧೭೦೪) ಆಸ್ಥಾನ ಕವಿಯಾಗಿದ್ದ ಸಿಂ[ಗ]ರಾರ್ಯನ ಮಿತ್ರವಿಂದಾ ಗೋವಿಂದ ಎಂಬ ನಾಟಕ ಒಂದೇ. ಅದಾದರೂ ಶ್ರೀ ಹರ್ಷ[ದೇವ]ನೆಂಬ ಹರ್ಷವರ್ಧನ ಮಹಾರಾಜನ (ಕ್ರಿ.ಶ. ೬೦೬—೬೪೮) ಸಂಸ್ಕೃತ ರತ್ನಾವ[ಳಿ] ನಾಟಿಕೆಯ ಮಾತಿಗೆ ಮಾತಿನ ಭಾಷಾಂತರ. ಒಂದೆರಡು ಕಡೆ ಕಥೆಗಳಲ್ಲಿ ಕೊಂಚವೇನೋ ವ್ಯತ್ಯಾಸವಿದೆಯಾದರೂ ಮಿತ್ರವಿಂದಾಗೋವಿಂದವು ರತ್ನಾವಳಿಯ ಭಾಷಾಂತರವೆಂಬು ದನ್ನು ಅವಲ್ಲಿಯ ಎಷ್ಟೋ ಉದ್ಧಾರಗಳಿಂದ ನಿದರ್ಶಿಸಬಹುದು. ಇನ್ನು ಮಿತ್ರವಿಂದಾ ಗೋವಿಂದಕ್ಕೂ ಹಿಂದೆ ಕನ್ನಡದಲ್ಲಿ ಬೇರೆ ನಾಟಕಗಳು ಇದ್ದುವೊ ಅಥವಾ ಇದ್ದಿರಬಹುದು ನೋಡೋಣ.

ರತ್ನಾಕರ ಸಿದ್ಧನ (ಕ್ರಿ.ಶ. ೧೫೭೭) ಭರತೇಶ ವೈಭವದ ಪೂರ್ವ ನಾಟಕ ಸಂಧಿಯಲ್ಲಿ (ಪ್ರಥಮ ಭಾಗ, ಸಾಂಗತ್ಯ ೪, ೧೧, ೧೨, ೧೫ ೩) ನಾಟಕ ಶಾಲೆ ಎಂದಿದೆಯಾದರೂ, ಅಲ್ಲಿ ಗಣಿಕೆಯರು ಆಡುತಿದ್ದುದಾದರೊ ನಾಟಕವನ್ನಲ್ಲ, ದಿಕ್ಕನ್ನಿಕಾ ನಾಟ್ಯ, ಜಲಕನ್ನಿಕಾ ನಾಟ್ಯ ಮೊದಲಾದ (ಉತ್ತರ ನಾಟಕ ಸಂಧಿ, ಸಾಂ. ೧೫೭–೧೬೦) ವಿವಿಧ ನಾಟ್ಯಗಳನ್ನು. ಅತ ಏವ ಅದನ್ನು ನಾಟಕಶಾಲೆ ಎಂದರೂ ಅದು ನಾಟ್ಯಶಾಲೆ ತಾನೆ.

ಬಸವಪುರಾಣದಲ್ಲಿ (ಕ್ರಿ.ಶ. ೧೩೬೯)

ಇಟ್ಟ ಜಡೆ ಬೊಲ್ಲೆ ಹವಮರ್ದಿಕೆ
ತೊಟ್ಟ ಕಂಚುಕಮುಂ ದುಕೂಲವ
ನುಟ್ಟು ಚಲ್ಲಣಮುಂ ರಚಿಸಿ ಮಣಿಖಚಿತ ಸಿಂಜಿನಿಯ ।
ಕಟ್ಟಿಕೊಂಡು ಬೆಡಂಗಡರೆ ನೆರೆ
ದಿಟ್ಟ ನೀನೀ ನಾಟಕಕ್ಕಳ
ವಟ್ಟು ರೀತಿಯೊಳೊಪ್ಪಿ ಸೋಮಲದೇವಿ ನಡೆತಾರೆ ॥ XII. ೪೩ ॥

ಎಂಬಲ್ಲಿಯೂ, ಪಂಪರಾಮಾಯಣದಲ್ಲಿ (ಕ್ರಿ.ಶ. ಸು. ೧೧೪೦)

.................... ಸರ್ವಾಂಗ ಸೌಂ
ದರಿ ವಿದ್ಯಾನಟ ನಾಟಕಂ ನಲಿಗೆ ಮತ್ಕಾವ್ಯಸ್ಥಲೀ ರಂಗದೊಳ್ ॥ I. ೬ ॥

ಎಂಬಲ್ಲಿಯೂ, ಅಜಿತಪುರಾಣದಲ್ಲಿ (ಕ್ರಿ.ಶ. ೯೯೩)

ಕುಳಿಶಧರಂ ಪೊಗೞ್ದು ಮನಂ
ಗೊಳೆ ಮಾಡಿದನೈಂದ್ರಮೆಂಬ ನಾಟಕವಿಧಿಯಂ ॥ V. ೬ ॥

ಎಂಬಲ್ಲಿಯೂ, ನಾಟಕಕ್ಕೆ ಅಳವಟ್ಟು ನಡೆತರುವ ಸೋಮಲದೇವಿಯೂ ಒಬ್ಬಳೇ, ರಂಗದಲ್ಲಿ ನಾಟಕವನ್ನು ನಲಿವ ವಿದ್ಯಾನಟಿಯೂ ಒಬ್ಬಳೇ, (ಐಂದ್ರ) ನಾಟಕವಿಧಿಯನ್ನು ಮಾಡಿದ ಇಂದ್ರನೂ ಒಬ್ಬನೇ ಎಂಬ ಕಾರಣ, ಅವರು ಆಡಿದ ನಾಟಕ ಎಂಬುದಾದರೊ

ಅಷ್ಟಟ ನಾಟ್ಯವೇ ವಿನಾ ನಾಟಕವಲ್ಲ. ಬಸವಪುರಾಣದಲ್ಲಿ ಮತ್ತೊಂದೆಡೆಯಲ್ಲಿ (LIX. ೨೭) ಹೇಳಿರುವ 'ನಾಟಕೆಪಂಡಿತ'ರಾದರೂ ಪಾಣಿನೀಯ ಸೂತ್ರದಲ್ಲಿ, ನಟಸೂತ್ರಕಾರರೆಂದಿರುವ ಶಿಲಾಲಿ, ಕೃಶಾಶ್ವರಂತೆ ನಾಟ್ಯಾಚಾರ್ಯರಾಗಿರಲೂ ಬಹುದು, ಅಥವಾ ನಾಟಕರಚಕರೊ ನಾಟಕಶಿಕ್ಷಕರೊ ಆಗಿರಲೂ ಬಹುದು. ರಚಕರೊ ಅಥವಾ ಶಿಕ್ಷಕರೊ ಆಗಿದ್ದರೆ, ಮತ್ತು ಹಾಗಿದ್ದರೆ ಮಾತ್ರ, ಅವರು ರಚಿಸಿದ ಅಥವಾ ಕಲಿಸಿದ ನಾಟಕಗಳು ಸಂದರ್ಭೋಚಿತವಾಗಿ ಕನ್ನಡ ನಾಟಕಗಳೇ ಆಗಿರಬೇಕು.

ಗದಾಯುದ್ಧದಂಥಾ (ಕ್ರಿ.ಶ. ೧೦೦೭) ವೀರಕಾವ್ಯದಲ್ಲಿ ಏನೂ ಆಗತ್ಯವಿಲ್ಲದಲ್ಲಿ ಕೂಡ ಅಯ್ತುರುವ ವೃದ್ಧಕಂಚುಕಿಯನ್ನೂ (ಆಶ್ವಾಸ ೧ ಮತ್ತು ೨) ವಿದೂಷಕನನ್ನೂ (ಆ. ೨) ಮನವರಿಸುವಲ್ಲಿ ಆ ಗ್ರಂಥವನ್ನು ರನ್ನನೊಮ್ಮೆ ನಾಟಕರೂಪವಾಗಿ ರಚಿಸ ತೊಡಗಿದ್ದನೊ ಇಲ್ಲವೆ ರಚಿಸಲೆಣಿಸಿದ್ದನೊ ಎಂದೂ, ಹಾಗಾದರೆ ಆಗ್ಗೆ, ಅತಏವ ಆದಕ್ಕೂ ಮುಂಚಿನಿಂದಲೆ, ನಾಟಕಗಳು ರೂಢಿಯಾಗಿ ಇದ್ದಿರಬೇಕೆಂದೂ ಬೋಧೆಯಾಗುತ್ತದೆ. ಹಾಗಿದ್ದರೆ ಆ ನಾಟಕಗಳೂ ಕನ್ನಡಿಗರಿಗೆ ತಿಳಿಯಬರುವಂತೆ ಕನ್ನಡ ನಾಟಕಗಳೇ ಆಗಿರಬೇಕು.

ಕನ್ನಡ ಭಾರತದ[೧] ಆದಿಪರ್ವದಲ್ಲಿ (ಸಂಧಿ ೭)

.............. ಅಂಧ ಭೂಪನ
ಕೊರಳು ಕುಸಿದುದು ನುಡಿಯ ನಾಟಕ ಹರ್ಷಭಾರದಲಿ ॥ ೪೫ ॥

ಗದಾಪರ್ವದಲ್ಲಿ (ಸಂಧಿ ೨)

ಇಕ್ಕಡಿಯ ಬಸುರುಚ್ಚಿಗಳೆವರ
ಸುಕ್ಕುಗಳ ನಾಟಕದವೊಲು ಕೆ
ಯ್ಯಿಕ್ಕಿದಾನೆಯ ಹಿಂಡು ಹರಿದುದು ನಿಮಿಷಮಾತ್ರದಲಿ ॥ ೨೪ ॥

ಉದ್ಯೋಗಪರ್ವದಲ್ಲಿ (ಸಂಧಿ ೩)

ಮುಕುತಿವಿದರುಗಳಾಗಿ ವಿದ್ಯಾ
ಧಿಕರೆನಿಸಿ ಸಮಬುದ್ಧಿಗಳ ನಾ
ಟಕವ ನಟಿಸುತ ಪರಮ ತತ್ತ್ವಜ್ಞಾನಪರರಾಗಿ ॥ ೮೫ ॥

ಕರ್ಣಪರ್ವದಲ್ಲಿ (ಸಂಧಿ ೧೯)

ಕೆಯ್ಗಡಿಯ ಪಟುಭಟರೊಳಗೆ ಬಲು
ಗೆಯ್ಗಳೆಂದಸುರಾರಿ ಹೊಗಳಲು
ಹೊಯ್ಗಳಿನ ಹೊಸ ನಾಟಕವನಭಿನಯಿಸಿ ಹೆಣಗಿದರು ॥ ೮೫ ॥

ಮತ್ತು (ಸಂಧಿ ೨೪)

ನೋಡಲೀ ವ್ಯಥೆಯುಂಟೆ ಭುವನದ
ಗೂಡು ಕೃಷ್ಣನ ದೇಹವಿದು ನಾ
ಡಾಡಿಗಳ ನಾಟಕವಲೇ ನರನಾಥ ಕೇಳೆಂದ ॥ ೩ ॥

ಅರಣ್ಯಕಪರ್ವದಲ್ಲಿ (ಸಂಧಿ ೧೩)

ಬೇಡನಾದನಜಾತರಿಪು ಮಾ
ತಾಡಿಸಿದನಹಿಪತಿಯನೆಲೆ ನಾ
ಡಾಡಿಗಳ: ನಾಟಕದ ಘಣಿಯಲ್ಲಾರು ನೀನೆಂದ ॥ ೮೧ ॥

---

೧. ಬೆಂಗಳೂರು, ೧೮೮೩

ಈ ಉದಾಹರಣೆಗಳು ಆ ಗ್ರಂಥದಿಂದ ಆಯ್ದುಕೊಂಡ ಕೆಲವಷ್ಟೇ ದೃಷ್ಟಾಂತಗಳು, ಇಂಥವೇ ಇನ್ನೆಷ್ಟೋ ಅದರಲ್ಲಿರಬೇಕು. ಕುಮಾರವ್ಯಾಸನ ಕಾಲವು ಕವಿಚರಿತಕಾರರು ಎಂದಿರುವಂತೆ ಕ್ರಿ.ಶ. ಸು. ೧೪೩೦ ಆಗಿರಲಿ, ಇಲ್ಲವೆ ನಾನು ಎಂದಿರುವಂತೆ[3] ಕ್ರಿ.ಶ. ಸು. ೧೩೩೦–೩೫ ಆಗಿರಲಿ, ಇವಷ್ಟು ಉದಾಹರಣೆಗಳಿಂದ ಆತನ ಕಾಲದಲ್ಲಿ ನಾಟಕಗಳು, ಅವು ಸಾಹಿತ್ಯಕ್ಕೆ ಉಚಿತವಾಗಿರಲಿ ಅನುಚಿತವಾಗಿರಲಿ, ಆ ಪ್ರಶ್ನೆ ತತ್ಕಾಲದ ಮಟ್ಟಿಗೆ ಅಪ್ರಸ್ತುತ, ಹೇಗೂ ನಾಟಕಗಳು ಸಾಕಷ್ಟು ಇದ್ದಿರಬೇಕು, ಅವನ್ನು ಆಗಾಗ್ಗೆ ನಟಿಸುತ್ತಲೂ ಅಭಿನಯಿಸುತ್ತಲೂ ಇದ್ದುದನ್ನು ಆತನು ಕಣ್ಣಾರೆ ಕಂಡಿರಬೇಕು, ಅವು ಆತನ ಮನಸ್ಸಿನಲ್ಲಿ ನಾಟಿದವೆಂತೊ ಅಂತೆಯೇ ಇನ್ನೆಷ್ಟೋ ಪ್ರೇಕ್ಷರ ಮನಸ್ಸನ್ನು ಸೆಳೆಕೊಂಡಿರಬೇಕೆಂಬುದರಿಂದ ಅವು ತುಂಬಾ ಲೋಕಪ್ರಿಯವೂ ಆಗಿರಬೇಕು, ಆ ಕಾರಣವೇ ಅವೆಲ್ಲವೂ ತೀರ ಕನ್ನಡ ನಾಟಕಗಳೇ, 'ನಾಡಾಡಿಗಳ ನಾಟಕ'ವಂತೂ ಕನ್ನಡವೇ, ಆಗಿರಬೇಕು ಎಂದು ಬೇಕಾದಷ್ಟು ವ್ಯಕ್ತವಾಗುತ್ತದೆ. ಹಾಗಲ್ಲದಿದ್ದರೆ ನಾಟಕವನ್ನು ಕುರಿತ ರೂಪಕೋಕ್ತಿಯ ಇಷ್ಟು ಮಿಗಿಲಾದ ಉದಾಹರಣೆಗಳು ಆತನ ಕಾವ್ಯದಲ್ಲಿ ಸರ್ವಥಾ ಇರುತ್ತಿದ್ದಿಲ್ಲ.

ಇಷ್ಟೇ ಅಲ್ಲ. ನಾನು ಕಂಡಷ್ಟರ ಮಟ್ಟಿಗೆ ಆ ಹಿಂದಿನ ಕಾಲದ ಸಾಹಿತ್ಯದಲ್ಲಿ ಯಾವೊಂದು ಉದ್ಗಿಮೆ ಕನ್ನಡದಲ್ಲಿ ಹುಟ್ಟಿ ಬೆಳೆದ ಕೆಲವೊ ಹಲವೊ ಕಾಲದ ಮೇಲೆ ತಾನೆ ತೆಲುಗು ಸಾಹಿತ್ಯದಲ್ಲಿ ಮೊಳೆತಂತೆ ತೋರುವುದರಿಂದ, ಈ ಅಭಿಪ್ರಾಯ ಸರಿಯಾದರೆ, ಕ್ರಿ.ಶ. ೧೫ನೆಯ ಶತಮಾನದಲ್ಲಿದ್ದ ತೆಲುಗು ಕವಿ ಶ್ರೀನಾಥನು (ಕ್ರಿ.ಶ. ೧೩೬೫-೧೪೪೦) ವೀಥಿನಾಟಕ[4] ಎಂಬೊಂದು ನಾಟಕವನ್ನು ರಚಿಸಿರುತ್ತಾನೆ, ಹಾಗೂ ತನ್ನಂದಿನಲ್ಲಿ ಸ್ತ್ರೀ ಪಾತ್ರಗಳನ್ನಾಡುವ ಪ್ರಖ್ಯಾತನಾದ ಒಬ್ಬ ನಟನನ್ನು ಹೆಸರಿಸಿರುತ್ತಾನೆ[5], ಕ್ರಿ.ಶ. ೧೪೨೦ರಲ್ಲಿ ವಲ್ಲಭಾಮಾತ್ಯನು ಪ್ರೇಮಾಭಿರಾಮು[6] ಎಂಬ ಸಂಸ್ಕೃತ ನಾಟಕದ ಆಧಾರದ ಮೇಲೆ ಕ್ರೀಡಾಭಿರಾಮಮು[7] ಎಂಬ ತೆಲುಗು ನಾಟಕವನ್ನು ರಚಿಸಿರುತ್ತಾನೆ, ಹಾಗೂ ಶ್ರೀನಾಥನ ಪಲ್ನಾಟಿ ವೀರಚರಿತ್ರದಲ್ಲಿ ಅಭಿನಯಿಸಿದ ಒಬ್ಬ ನಟಿಯನ್ನು ತಾನು ಕಂಡಿದ್ದೆನೆಂದೂ ಹೇಳಿರುತ್ತಾನೆ,[8] ಕ್ರಿ.ಶ. ಸು. ೧೫೪೦ರಲ್ಲಿದ್ದ ತೆಲುಗು ಕವಿ ಪಿಂಗಲಿ ಸೂರನ್ನನ ಪ್ರಭಾವತೀ ಪ್ರದ್ಯುಮ್ನದಲ್ಲಿ ನಾಟಕಗಳ ಅಭಿನಯ ಪ್ರದರ್ಶನವೇ ಮೊದಲಾದುವನ್ನು ಕುರಿತು ಹೇಳಿದೆ, ಆದಕಾರಣ ಪ್ರಾಯಶಃ ಶ್ರೀನಾಥನಿಗಿಂತ ಹಿಂದಿನಿಂದಲೇ ಅಲ್ಲವಾದರೆ ಶ್ರೀನಾಥನ ಕಾಲದಿಂದಾದರೂ ತೆಲುಗು ನಾಟಕ ಸಾಹಿತ್ಯವಿದ್ದಿರಬೇಕು, ತೆಲುಗು ನಾಟಕಕ್ಕಿಂತ ಮುಂಚಿನಿಂದಲೆ ಕನ್ನಡದಲ್ಲಿ ನಾಟಕ ಸಾಹಿತ್ಯವಿದ್ದಿರಬೇಕು ಎಂದು ಸ್ವಯಮೇವ ಸಿದ್ಧವಾಗುತ್ತದೆ.

---

೨. ಕರ್ಣಾಟಕ ಕವಿಚರಿತೆ, II, ಪುಟ ೬೪.
೩. ಕುಮಾರವ್ಯಾಸ ಪ್ರಶಸ್ತಿ, ಪು. ೨೧.
೪. *Telugu Literature* (Heritage of India Series), ಪು. ೫೯–೬೦
೫. ಅದೇ, ಪು. ೧೧೪.
೬. ಈ ಪ್ರೇಮಾಭಿರಾಮುದ ಹೆಸರು ಶ್ರೀ ಕೃಷ್ಣಶಾಸ್ತ್ರಿಯವರ 'ಸಂಸ್ಕೃತನಾಟಕ'ದಲ್ಲಿಲ್ಲ
೭. *Telugu Literature* ಪು. ೬೬.
೮. ಅದೇ, ಪು. ೧೧೪.

ಕನ್ನಡ ಭಾರತದ ಶಲ್ಯಪರ್ವದಲ್ಲಿಯ (ಸಂಧಿ ೧)

ಉಚಿತವಿತರೇತರ ಪದಸ್ತುತಿ
ರಚನೆ ಗುಣಯುಕ್ತರಿಗೆ ವಿಜಯೋ
ಪಚಿತ ರಣನಾಟಕಕೆ ಜವನಿಕೆಯಾಯ್ತು ಲೇ ರಜನಿ ॥ ೩೧ ॥

ಎಂಬಲ್ಲಿ ಕುಮಾರವ್ಯಾಸನ ಕಾಲದಲ್ಲಿ ಆಡುತಿದ್ದ ನಾಟಕಗಳಲ್ಲಿ ಜವನಿಕೆಗಳು, ಅಂದರೆ ತೆರೆಗಳು ಉಪಯೋಗಿಸಲ್ಪಡುತ್ತಿದ್ದುವೆಂದೂ, ಆದರದೇ ವಿರಾಟಪರ್ವದಲ್ಲಿಯ (ಸಂಧಿ ೧೧)

ಮೇಳವೇ ಘಡ ಮನದ ಮತ್ಸರ
ಕಾಲಿಡಲು ತೆರಹಿಲ್ಲ ಮನುಜರ
ಹೋಲುವೆಯ ನಾಟಕದ ನಿರ್ಜರಮಂಡಲೇಶ್ವರರು ॥ ೧೧ ॥

ಎಂಬಲ್ಲಿ ಆ ನಾಟಕಗಳಲ್ಲಿ ದೇವತೆಗಳ ಪಾತ್ರಗಳನ್ನು ಮನುಷ್ಯರ ಹೋಲುವೆಯಲ್ಲಿ ರಚಿಸುತಿದ್ದರೆಂದೂ ತಿಳಿಯುತ್ತದೆ. ಆರಣ್ಯಕ ಪರ್ವದಿಂದ (XIII, ೪೧) ಮೇಲೆ ಕಂಡಿರುವ 'ನಾಡಾಡಿಗಳ ನಾಟಕದ ಫಣಿ' ಎಂಬಲ್ಲಿ ಪ್ರಸ್ತುತ ನಾಟಕ ರೋಹಿತಾಶ್ವನಿಗೆ ಹಾವು ಕಡಿದಂತೆ ಕಾಣಿಸುವ ಹರಿಶ್ಚಂದ್ರ ನಾಟಕವಾಗಿರಬಹುದೇ ಎನಿಸುತ್ತದೆ.

ಕೇಶಿರಾಜನು ಶಬ್ದಮಣಿದರ್ಪಣವನ್ನು (ಕ್ರಿ.ಶ. ಸು. ೧೨೬೦) ಮಾತ್ರವಲ್ಲ,

ದೊರೆವಡೆದ ಚೋಳಪಾಲಕ
ಚರಿತಂ ಶ್ರೀ ಚಿತ್ರಮಾಲೆಯುಂತೆ ಸುಭದ್ರಾ ।
ಹರಣಂ ಪ್ರಬೋಧಚಂದ್ರಂ
ಕಿರಾತಮಿವು ಕೇಶಿರಾಜ ಕವಿ ರಚಿತಂಗಳ್ ॥

ಎಂದೂ ಆತನ ಶಬ್ದಮಣಿದರ್ಪಣದ ಕೊನೆಯ, ಕಂದದಿಂದ ತಿಳಿಯುತ್ತದೆ. ಇವಲ್ಲಿ ಚೋಳಪಾಲಕ ಚರಿತವೂ ಚಿತ್ರಮಾಲೆಯೂ ಕಿರಾತವೂ ಆತನ ಕನ್ನಡ(ಪ್ರಾಯಶಃ ಚಂಪೂ) ಕಾವ್ಯಗಳೇ ಎಂದು ಇಟ್ಟುಕೊಳ್ಳೋಣ. ಸುಭದ್ರಾಹರಣವಾದರೊ ಅದರ ನಾಮಮಾತ್ರದಿಂದಲೇ ಹತ್ತಕ್ಕೆ ಹತ್ತೂ ಅಲ್ಲವಾದರೆ ಏಳೆಂಟಾದರೂ ನಾಟಕವೇ ಎನಿಸುತ್ತದೆ. ಪ್ರಬೋಧಚಂದ್ರವಂತೂ ಕ್ರಿ.ಶ. ೧೧ನೆಯ ಶತಮಾನದಲ್ಲಿ ಕೃಷ್ಣಮಿಶ್ರಯತಿಯಿಂದ ವಿರಚಿತವಾದ **ಪ್ರಬೋಧ ಚಂದ್ರೋದಯ** ಎಂಬ ಸಂಸ್ಕೃತ ನಾಟಕದ ಕನ್ನಡ ಭಾಷಾಂತರವೆಂಬಲ್ಲಿ ರವಷ್ಟೂ ಸಂಶಯವಿಲ್ಲ. ಆದರೆ ಪ್ರಶ್ನೆ ಇಷ್ಟೇ, ಆ ಕೃತಿ ಕನ್ನಡ ನಾಟಕವೊ? ಕನ್ನಡ ಕಾವ್ಯವೊ? ಈ ಸಂದರ್ಭದಲ್ಲಿ ಶ್ರೀ ಡಿ. ಎಲ್. ನರಸಿಂಹಾಚಾರ್ಯರು, ಕೇಶಿರಾಜನ ಪ್ರಬೋಧಚಂದ್ರವು ನಾಟಕವಾಗಿರಬೇಕೆಂದಿಲ್ಲ ಕಾವ್ಯವಾಗಿರಬಹುದು, ಏಕೆಂದರೆ ಕ್ರಿ.ಶ. ಸು. ೧೭ನೆಯ ಶತಕದಲ್ಲಿ ಯಾವನೊಬ್ಬ ವೀರಶೈವ ಕವಿಯಿಂದ ಶರ-ಕುಸುಮ-ಭೋಗ ಷಟ್ಪದಿಗಳಲ್ಲಿ ರಚಿತವಾದ ಸಂಸ್ಕೃತ ಪ್ರಬೋಧಚಂದ್ರೋದಯ ನಾಟಕದ ಭಾಷಾಂತರವಾದ ಕನ್ನಡ ಕಾವ್ಯದೊಂದು ಹಸ್ತಪ್ರತಿ ತಮ್ಮೊಂದಿಗಿದೆ ಎಂದು ನನ್ನನ್ನು ಎಚ್ಚರಿಸಿರುತ್ತಾರೆ. ಆದರೆ ಅದನ್ನು ಒಪ್ಪಲಾಗುವುದಿಲ್ಲ. ಏಕೆಂದರೆ ಸಂಸ್ಕೃತ ವೃತ್ತಬದ್ಧವಾದ ಪ್ರಬೋಧಚಂದ್ರೋದಯ ನಾಟಕವನ್ನು ಯಥಾವತ್ತಾಗಿ ಅದೇ ಛಂದಸ್ಸಿನಲ್ಲಿ

---

೯. ಮಂಗಳೂರು ಪ್ರತಿ, ಪು. ೪೬೪; ಮದ್ರಾಸು ಪ್ರತಿ, ಪು. ೩೦೨, ೩೧೪.
೧೦. ಶ್ರೀ ಎ. ಆರ್. ಕೃಷ್ಣಶಾಸ್ತ್ರಿಯವರ 'ಸಂಸ್ಕೃತ ನಾಟಕ', ಪು. ೨೨೭.

ಕನ್ನಡಿಸಲಾರದ, ಏವಂಚ ವೃತ್ತರಚನೆಯ ಬಳಕೆಯಿಲ್ಲದ, ಹಾಗೂ ಕನ್ನಡ ನಾಟಕಗಳಲ್ಲಿ ಷಟ್ಪದಿಗಳು ಪ್ರಯೋಗಿಸಲ್ಪಡಲಾರದ, ಅಂದರೆ (ಈ ವರೆಗೂ) ಹಾಗೆ ಪ್ರಯೋಗಿಸುವ ರೂಢಿ ಇದ್ದಿಲ್ಲದ, ಕಾರಣ ತಾನೆ ಸಾಮಾನ್ಯನಾದ ಆ ವೀರಶೈವ ಕವಿ ಆ ಸಂಸ್ಕೃತ ನಾಟಕವನ್ನು ನಾಟಕರೂಪದಲ್ಲೇ ಕನ್ನಡಿಸಿಲ್ಲ ಎಂದು ಸಾಕಷ್ಟು ವ್ಯಕ್ತವಾಗುತ್ತದೆ ಮಾತ್ರವಲ್ಲ, ಯಾವ ತರಗತಿಯಾತನೊ ಆ ವೀರಶೈವ ಕವಿ ಎಲ್ಲಿ? ಆ ೧ನೆಯ ಕವಿಯಾದ ಕೇಶಿರಾಜನೆಲ್ಲಿ? ಕೇಶಿರಾಜನಿಗೂ ಕನ್ನಡ ವೃತ್ತರಚನೆ ದುಸ್ಸಾಧ್ಯವೇ? ಅಥವಾ ಆತನ ಕಾಲದಲ್ಲಿ ಕನ್ನಡ ಷಟ್ಪದಿಗಳು ಹೇಗೂ ತೀರ ವಿರಳವಷ್ಟೇ? ಅತಏವ ಆತನು ಆ ನಾಟಕವನ್ನು ಯಥಾವತ್ತಾಗಿ ವೃತ್ತಗಳಲ್ಲೇ ವಿನಾ ಇನ್ನು ಹೇಗೆ ತಾನೆ ರಚಿಸಿರಬೇಕು? ಹಾಗಾದರೆ ಆ ನಾಟಕವನ್ನಾತನು ಇದ್ದಕ್ಕಿದ್ದಂತೆ ನಾಟಕವಾಗಿಯೇ ಕನ್ನಡಿಸದೆ ಏಕೆ ತಾನೆ ಕಾವ್ಯರೂಪದಲ್ಲಿ ಪರಿವರ್ತಿಸಿರಬೇಕು? ತೆಲುಗು ಸಾಹಿತ್ಯದಲ್ಲಂತೂ ಕ್ರಿ.ಶ. ೧೪ನೆಯ ಶತಮಾನದಿಂದಲಾದರೂ ನಾಟಕಗಳು ಇದ್ದುವಷ್ಟೇ? ಕುಮಾರವ್ಯಾಸನ ಕಾಲದಲ್ಲಿ, ಹೇಗೂ ಕನ್ನಡ ನಾಟಕಗಳು ಸಾಕಷ್ಟು ಇದ್ದಿರಬೇಕಷ್ಟೇ? ಎಂದು ಇವೇ ಮೊದಲಾದ ಪ್ರಶ್ನೆಗಳು ಹಠಾತ್ತಾಗಿ ಎದ್ದೇಳುತ್ತಿವೆ. ಇನ್ನೂ ಕ್ರಿ.ಶ. ಸು. ೧೪೪೦ರಲ್ಲಿ ನಂದಿ ಮಲ್ಲಯ್ಯ ಮತ್ತು ಘಂಟ ಸಿಂಗಯ್ಯ ಎಂಬ ಜತೆಯ ತೆಲುಗು ಕವಿಗಳಿಬ್ಬರು ಸಂಸ್ಕೃತ ಪ್ರಬೋಧಚಂದ್ರೋದಯವನ್ನು ಪ್ರಾಯಶಃ ನಾಟಕ ರೂಪದಲ್ಲಿ ತೆಲುಗಿಸಿರುತ್ತಾರೆ.[೧೧] ಇವೆಲ್ಲ ಕಾರಣಗಳಿಂದ ಕೇಶಿರಾಜನ ಕನ್ನಡ ಪ್ರಬೋಧಚಂದ್ರವು ನಾಟಕವೇ ಎಂದೂ, ಉಭಯ ಭಾಷಾವಿಶಾರದನೂ ವೈಯಾಕರಣನೂ ಸ್ವಯಂ ಕವಿಶ್ರೇಷ್ಠನೂ ಆಗಿದ್ದ ಆತನ ಕೃತಿಯಾದುದರಿಂದ ಅದು ಸಾಹಿತ್ಯೋಚಿತವಾದ ನಾಟಕವೆಂದೂ ಸಹಸಾ ಭಾಸವಾಗುತ್ತದೆ.

ಇಲ್ಲಿ ಪ್ರಾಸಂಗಿಕವಾಗಿ ಇದೊಂದು ಪ್ರಶ್ನೆಯನ್ನೂ ಎತ್ತಬಹುದು. ಅದೇನೆಂದರೆ, ಸಂಸ್ಕೃತ ಪ್ರಬೋಧಚಂದ್ರೋದಯ ನಾಟಕದ ೩ನೆಯ ಅಂಕದಲ್ಲಿ ಬೌದ್ಧ–ಜೈನ ಮತ ಗಳನ್ನು ತುಂಬ ಜರೆದಾಡಿರುವಲ್ಲಿ, ಅಂತಹದನ್ನೂ ಕನ್ನಡಿಸಿದ ಕೇಶಿರಾಜನು ಜೈನನಾಗಿದ್ದಿರಲಾಪನೆ?

ಕರ್ಣಾಟಕ ಕಾವ್ಯಾವಲೋಕನದ ನಾಗವರ್ಮನು ಕ್ರಿ.ಶ. ೧೧೨೦ರಿಂದ ೧೨೦೦ ರೊಳಗೆ ಇದ್ದನೆಂದು ಹಿಂದೊಮ್ಮೆ ಇದೇ ಪತ್ರಿಕೆಯಲ್ಲಿ[೧೨] ನಾನು ಸಕಾರಣವಾಗಿ ಹೇಳಿರುತ್ತೇನೆ. ಆ ಗ್ರಂಥದಲ್ಲಿ ಆಯಾ ಸೂತ್ರಗಳಿಗೆ ಕೊಟ್ಟಿರುವ ಉದಾಹರಣೆಗಳಲ್ಲಿ ಇವೈದು ಸಾಕೂತವಾದ ಪದ್ಯಗಳಿವೆ —

(೧) ಇವಳಂ ಶೃಂಗಾರಸಾರಂ ಕುಸುಮಶರನೆ ಮೇಣ್ ಮಾಡಿದಂ ಪ್ರೋಲ್ಲಸತ್ಪ
ಲ್ಲವಪುಷ್ಪಂ ಮೇಣ್ ಬಸಂತಂ ಬಯಸಿ ಪಡೆಪನೆತ್ತಂ ಸುಧಾಸಾರಮುಂ ಸೂ ।
ಸುವ ಚಂದ್ರಂ ತಾನೆ ಮೇಣ್ ಪುಟ್ಟಿಸಿದನತಿಜಡಂ ಛಾಂದಸಂ ಪದ್ಮಜಂ ಸಿ
ಕ್ಕುವಮಲ್ಲಂ ಕರ್ತೃವಾದಂದಿನಿತತಿಶಯಮುಮಂ ತಾಳ್ದುದೇ ಕನ್ನೆಯುಂದಂ ॥೪೨॥

ಈ ಮಹಾಸ್ರಗ್ಧರೆ ಕಾಳಿದಾಸನ ವಿಕ್ರಮೋರ್ವಶೀಯ ನಾಟಕದ[೧೩] (ಅಂಕ ೧)

೧೧. *Telugu Literature*, ಪು. ೬೮.
೧೨. ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, XX. ಪು. ೧೫೧.
೧೩. ಕಾವ್ಯಾವಲೋಕನದ ಉಪೋದ್ಘಾತ, ಪು. ೪೮.

ಆಸ್ಯಾಃ ಸರ್ಗವಿಧೌ ಪ್ರಜಾಪತಿರಭೂಚ್ಚಂದ್ರೋನು ಕಾಂತಿಪ್ರದಃ (ಕಾಂತಪ್ರಭಃ)
ಶೃಂಗಾರೈಕರಸಃ ಸ್ವಯಂ ನು ಮದನೋ ಮಾಸೋನು ಪುಷ್ಪಾಕರಃ ।
ವೇದಾಭ್ಯಾಸಜಡಃ ಕಥಂ ನು (ಸ) ವಿಷಯವ್ಯಾವೃತ್ತ ಕೌತೂಹಲೋ
ನಿರ್ಮಾತುಂ ಪ್ರಭವೇನ್ಮನೋಹರಮಿದಂ ರೂಪಂ ಪುರಾಣೋ ಮುನಿಃ ॥ ೩ ॥ *

ಎಂಬ ಶಾರ್ದೂಲ ವಿಕ್ರೀಡಿತದ ಕನ್ನಡ ಅನುವಾದ.

(೨) ಜೀಮೂತಕೇತುಗಣ್ಣಂ
ಗೆ ಮೇಘವಾಹನನದೆಂತು ಮುಂ ಬೆಸಕೆಯ್ದಂ ।
ನಿಮ್ಮಣ್ಣಂಗೆ ಮತಂಗಂ.
ಗಾ ಮಾಟ್ಕೆಯೆ ವಿನಯದಿಂಥೆ ನೀಂ ಬೆಸಕೆಯ್ಯಿಂ ॥ ೪೮೩ ॥

(೩) ಬಗೆಗೀಗಳ್ ನಿಶ್ಚಯಂ ಪುಟ್ಟದುದಱಿದೆನಿದಂ ಪನ್ನಗಂ ಶಂಖಚೂಳಂ
ಮಗನಿಂತೀ ವೃದ್ಧೆಗೀತಂ ತಡೆದಿರದೊಡಗೊಂಡುಯ್ದವಂ ಕಿಂಕರಂ ಪ ।
ನ್ನಗರಾಜಂಗೀತನಂ ವಾಸುಗಿ ಗರುಡನ ತೀಂಗೊಡ್ಡಿದಂ ತಪ್ಪದಾಹಾ
ವಿಗಳದ್ಬಾಷ್ಪಾಂಬುದೀನಾನನೆ ಜನನಿ ಮಗಂ ಪೋಗೆ ಪುಯ್ಯಲ್ಚಿದಪ್ಪಳ್. ॥ ೮೧೪ ॥

(೪) ಫಣಿರಾಜಂ ಬಾರಿಯಿಟ್ಟಟ್ಟಿದೊಡನುದಿನದಿಂ ಬರ್ಪ ಸರ್ಪಂಗಳಂ ಬ
ಲ್ಕಣಿ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ ಬಲಂ ಕೇಳಿರೇ ನೀ ।
ಮೊಣರಿರ್ ಮತ್ತೆಮ್ಮ ಮಾತಂ ಗರುಡನಖಮುಖೋತ್ಪಾತದಿಂ ನಾಗ ಚೂಡಾ
ಮಣಿಗಳ್ ಬಂದಲ್ಲಿ ನಿಚ್ಚಂ ಸಿಡಿವುವಱಿವೆನೇಕಿಂತು ವಿಭ್ರಾಂತರಪ್ಪಿರ್ ॥ ೯೦೦ ॥

ಇವನ್ನು ಓದುವಾಗಲೇ ಇವು ಹರ್ಷನ (ಕಿ.ಶ. ೬೦೦–೬೪೮) ನಾಗಾನಂದ ನಾಟಕದಿಂದ[೧೪] ಕನ್ನಡಿಸಲ್ಪಟ್ಟವೆಂದು ತಟ್ಟನೆ ತಿಳಿಯುತ್ತದೆ. ಆ ನಾಟಕದಲ್ಲಿ ಈ ಪದ್ಯಗಳಲ್ಲಿ ಉಲ್ಲೇಖಿಸಿರುವ ಜೀಮೂತಕೇತು ಇದ್ದಾನೆ, ಶಂಖಚೂಡ(ಳ) ನೆಂಬ ಪನ್ನಗನಿದ್ದಾನೆ, ಅವನ ತಾಯಿಯಾದ ವೃದ್ಧೆ ಇದ್ದಾಳೆ, ಗರುಡನಿದ್ದಾನೆ, ವಾಸುಕಿಯ ಕಿಂಕರನಿದ್ದಾನೆ, ಫಣಿರಾಜ-ಪನ್ನಗರಾಜನಾದ ವಾಸುಕಿ(ಗಿ)ಯ ಹೆಸರೂ, ಮತಂಗನ ಹೆಸರೂ, ಮಲ(ಳ)ಯಗಿರಿಯ ಹೆಸರೂ ಅಲ್ಲಲ್ಲಿದೆ. ಇವಲ್ಲಿಯ ೨ನೆಯ ಪದ್ಯ, ಹಾಗೂ ಕಾಣುವೊಡನೆ ಆ ನಾಟಕದ ೪ನೆಯ ಅಂಕದಲ್ಲಿ ವಾಸುಕಿಯ ಕಿಂಕರನು ಶಂಖಚೂಡನಿಗೆ ವಧ್ಯಶಿಲೆಗೆ ಹೋಗೆಂದು ಹೇಳಲಿಕ್ಕೆ ಬಂದಾಗ ಶಂಖಚೂಡ-ವೃದ್ಧೆಯರ ಹೃದಯಭೇದಿಯಾದ ಅಗಲಿಕೆಯನ್ನು ಕಂಡು ಮನನೊಂದ ಜೀಮೂತವಾಹನನ ಆತ್ಮಗತವೆನಿಸುವ ೩ನೆಯ ಪದ್ಯ, ಇವೆರಡು ಪದ್ಯಗಳಿಗೆ ಸಂವಾದಿಯಾದ ಪದ್ಯಗಳಾಗಲಿ ಗದ್ಯಗಳಾಗಲಿ ನಾನು ಕಂಡ ಸಂಸ್ಕೃತ ನಾಗಾನಂದದ (ಕಲ್ಕತ್ತ, ೧೮೭೩) ಪ್ರತಿಯಲ್ಲಿಲ್ಲವಾದರೂ, ದಕ್ಷಿಣೋತ್ತರ ಭಾರತಗಳಲ್ಲಿ ದೊರೆವ ಎಷ್ಟೋ ಕಾವ್ಯಗಳ, ಮುಖ್ಯತಃ ನಾಟಕಗಳ, ಹಸ್ತಪ್ರತಿಗಳಲ್ಲಿ ಎಷ್ಟೋ ಗದ್ಯ ಪದ್ಯಗಳ ಪಾಠಗಳಲ್ಲಿ ವ್ಯತ್ಯಾಸವಿರುವುದರಿಂದ, ಅವು ಬೇರೆ ಯಾವುದೋ ಒಂದಲ್ಲ ಒಂದು ಪ್ರತಿಯಲ್ಲಿ ಇದ್ದಿರಬಹುದೆಂದು ಊಹಿಸಲಿಕ್ಕೆ ಅಡ್ಡಿಯಿಲ್ಲ. ೪ನೆಯ ಪದ್ಯಕ್ಕೆ ಸಂವಾದಿಯಾಗಿ ಆ ನಾಟಕದ ೫ನೆಯ ಅಂಕದಲ್ಲಿ, ಜೀಮೂತಕೇತುವಿನ ಕಾಲ ಬಳಿಯಲ್ಲಿ ಮೇಲಿಂದ ಚೂಡಾಮಣಿ ಉದುರಿದಾಗ ಪ್ರತೀಹಾರನಾದ ಸುನಂದನು ಹೇಳುವ ಮಾತು ಹೀಗದೆ—

* ಈ ಪದ್ಯವನ್ನು ಪಂಪಭಾರತದಲ್ಲಿ (IV. ೭೫) ಅನುವದಿಸಿದೆ.

೧೪. ಕಾವ್ಯಾವಲೋಕನದ ಉಪೋದ್ಘಾತ, ಪು. ೪೭.

ಮಹಾರಾಜ, ಮೈವಮವಿಜ್ಞಾಯ ವಿಕ್ಲವೋ ಭೂಃ।
ತಾರ್ಕ್ಷ್ಯೇಣ ಭಕ್ಷ್ಯಮಾಣಾನಾಂ ನಾಗಾಧಿಪಾನಾಮನೇಕೇ
ನಖಮುಖೋತ್ಪಾತಾಃ ಪತಂತ್ಯೇತೇ ಶಿರೋಮಣಯಃ॥ ಅತ್ರ ಹಿ

(೫) ಸಂಸಾರಕ್ಕೇಕಸಾರಂ ಬಿದಿಯ ಕುಲಧನಂ ಲೋಕದಾಲೋಕಮಾಧಾ
ರಂ ಸಯ್ಸಿಂಗಕ್ಕಿಗಳ್ಗುತ್ಸವಮೆರ್ದೆಗಮೃತಂ ಕಾಮಸಾಮ್ರಾಜ್ಯಸರ್ವ।
ಸ್ವಂ ಸೌಂದರ್ಯಕ್ಕೆ ಗೇಹಂ ಮಹಿತಳತಿಳಕಂ ಜಾಣ ಮೆಯ್ ನಾಣ ಜೀವಂ
ಮಾಂಸಾಶೀ ನಿನ್ನೆ ಗರಿಂತಪ್ಪೆಳೆಯಳನಿಱಿಯಲ್ಕೆಂತು ನೀನೆತ್ತಿಕೊಂಡಯ್॥ ೬೫॥

ಈ ಸ್ರಗ್ಧರೆ ಭವಭೂತಿಯ (ಕ್ರಿ.ಶ.ಸು. ೭೦೦) ಮಾಲತೀಮಾಧವ ನಾಟಕದಲ್ಲಿಯದೆಂದು ಕಾವ್ಯಾವಲೋಕನದ ಉಪೋದ್ಘಾತದಲ್ಲಿ[೧೫] ಹೇಳಿದೆ. ನನ್ನೊಂದಿಗಿರುವ ಮಾಲತೀಮಾಧವದ(ಮುಂಬಯಿ, ನಿರ್ಣಯಸಾಗರ ಛಾಪಖಾನೆ ೧೮೮೦) ಪ್ರತಿಯಲ್ಲಿ ಇದಕ್ಕೆ ಸಂವಾದಿಯಾದ ಸಂಸ್ಕೃತ ಪದ್ಯವಾಗಲಿ ಗದ್ಯವಾಗಲಿ ಇಲ್ಲವಾದರೂ, ಮೇಲೆ ಹೇಳಿದ ಕಾರಣದಿಂದ ಅದು ಬೇರೆ ಯಾವೊಂದು ಪ್ರತಿಯಲ್ಲಿ ಇದ್ದಿರಬೇಕೆಂದೇ ಅಲ್ಲ, ಆ ನಾಟಕದ ಪಂಚಮಾಂಕದಲ್ಲಿ ಕಾಪಾಲಿಕನಾದ ಅಘೋರಘಂಟನು ಮಾಲತಿಯನ್ನು ಚಾಮುಂಡಿಗೆ ಬಲಿ ಕೊಡಲಿಕ್ಕೆ ಎತ್ತಿದ ಕೆಯ್ಯಿಂದ ಕತ್ತಿಯನ್ನು ಆಗಲೇ ಅಲ್ಲಿಗೆ ಬಂದೊದಗಿದ ಮಾಧವನು ಸೆಳಕೊಳ್ಳುವಲ್ಲಿ ಆತನಿಗೆ ಹೇಳಿದ ಮಾತೆಂದೂ ಪ್ರತ್ಯಕ್ಷವಿದೆ.

ಇವಯ್ದೂ ಪದ್ಯಗಳಲ್ಲಿಯ ಒಂದೇ ಒಂದರಲ್ಲಾದರೂ ಪರೋಕ್ಷಕಥನದ ಕೊನೆಯಲ್ಲಿ ಇರತಕ್ಕಂತೆ ಎಂದಂ, ಪೇೞ್ದಂ, ಒರೆದಂ, ಉಸು(ಸಿ)ರ್ದಂ, ನುಡಿದಂ ಇತ್ಯಾದಿ ಯಾವೊಂದು ಕ್ರಿಯಾಪದವೂ ಇಲ್ಲದೆ ಇವೆಲ್ಲವೂ ಆಯಾ ವ್ಯಕ್ತಿಯ ಭಾಷಣಗಳಂತೆ ಸಂಕಥಾರೂಪವಾಗಿ(ಅಥವ ಆತ್ಮಗತರೂಪವಾಗಿ) ಇರುವುದರಿಂದ, ಈ ಪದ್ಯಗಳನ್ನು ಒಳಕೊಂಡಿರುವ ಆ ಮೂರೂ ಗ್ರಂಥಗಳು ನಾಟಕಗಳೇ, ಅಂದರೆ ಆಯಾ ಸಂಸ್ಕೃತ ನಾಟಕದ ನಾಟಕರೂಪವೇ ಆದ ಕನ್ನಡ ಭಾಷಾಂತರವೆಂದು ನನಗೆ ಮೂರು ಮೂರು ಬಾರಿಗೂ ಕಂಡಿತವೆನಿಸುತ್ತದೆ. ವೃತ್ತಬದ್ಧವಾದ ಈ ನಾಟಕಗಳು ಸಾಹಿತ್ಯೋಚಿತವಾಗಿರಬೇಂದು ಬೇರೆ ಹೇಳಬೇಕೆಂದಿಲ್ಲವಷ್ಟೆ.

ಇಲ್ಲಿಯೂ ನನ್ನನ್ನು ಶ್ರೀ ನರಸಿಂಹಾಚಾರ್ಯರು ಹೀಗೆ ಎಚ್ಚರಿಸಿರುತ್ತಾರೆ. ಕಾವ್ಯಾವಲೋಕನವಲ್ಲಿ ಉದಾಹರಿಸಲ್ಪಟ್ಟ ಮಾಲತೀಮಾಧವವು ಕಾವ್ಯ ತಾನೆ ಆಗಿರಬೇಕಲ್ಲದೆ ನಾಟಕ ಆಗಿರಲಾರದೆಂದು, ಏಕೆಂದರೆ ಜಯಕೀರ್ತಿಯ ಸಂಸ್ಕೃತ ಛಂದೋನುಶಾಸನದಲ್ಲಿ ಹೀಗೊಂದು ನಡುವಣಕ್ಕರವಿದೆ—

* ಪ್ರಥಮೋ ರತಿರೇವ ಮನ್ಮಥಃ ಸ್ಯಾದ್ದ್ವಿತೀಯೋ ತೃತೀಯೋ
ಪೃಥ ಚತುರ್ಥೋ ಬಾಣಗಣಸ್ತು ಪಂಚಮ ಸ್ಥಾನ ಏವ।
ಗ್ರಥಿತಂ ಲಕ್ಷಣಮಿತಿ ಯಸ್ಯ ತನ್ಮಧ್ಯಮಾಕ್ಷರಾಖ್ಯಂ
ಪ್ರಥಿತಂ ಕರ್ಣಾಟ ಮಾಲತೀಮಾಧವ ಪ್ರಭೃತಿ ಕಾವ್ಯೇ॥ VII. ೬॥

ಇದಕ್ಕೂ ಆಕ್ಷೇಪ ಹೀಗದೆ—

೧೫. ಅದೇ, ಪುಟ. ೪೮.

* ಈ ಸಂಸ್ಕೃತ ಪದ್ಯದಲ್ಲಿ ಕನ್ನಡದಲ್ಲಿರುವಂತೆ ಪ್ರಾಸವಿರುವುದನ್ನು ಗಮನಿಸಬಹುದು.

'ಕಾವ್ಯಂ ಗ್ರಂಥೇ'[೧೬] ಹಾಗೂ 'ಕಾವ್ಯಂ ಪ್ರಬಂಧೇ'[೧೭] ಅಂದರೆ ಕಾವ್ಯ ಎಂಬ ಹೆಸರು ಗ್ರಂಥಕ್ಕೂ ಪ್ರಬಂಧಕ್ಕೂ ಸಲ್ಲುತ್ತದೆಂದು ಕೋಶಗಳಿಂದ ತಿಳಿಯುತ್ತದೆ. ಗ್ರಂಥದಲ್ಲಿ ಹೇಗೂ ನಾಟಕವೂ ಅಡಕವಾಗಿರಬೇಕಷ್ಟೇ. ಕಾಲಿದಾಸನ ಮಾಲವಿಕಾಗ್ನಿಮಿತ್ರ ನಾಟಕದ ಪ್ರಸ್ತಾವನೆಯಲ್ಲಿ ಆತನ ಹಿಂದಣವರ ನಾಟಕಗಳನ್ನು 'ಭಾಸ-ಸೌಮಿಲ್ಲ-ಕವಿಪುತ್ರಾದೀನಾಂ ಪ್ರಬಂಧಾನ್' ಎಂದಿರುವಲ್ಲಿ ಪ್ರಬಂಧ ಎಂದರೆ ನಾಟಕವೆಂದೂ ಸ್ಪಷ್ಟವಿರುವುದರಿಂದಲೂ ಮುಂದೆ ಕಾಣುವಂತೆ ನೃಪತುಂಗನ ಕವಿರಾಜಮಾರ್ಗದಲ್ಲಿ(I. ೩೧) ಸಂಸ್ಕೃತ ವೇಣೀ ಸಂಹಾರ ನಾಟಕದ ರಚಕನಾದ ಭಟ್ಟ ನಾರಾಯಣನನ್ನು ಸಂಸ್ಕೃತ ಪದ್ಯಕವಿಗಳಲ್ಲಿ ಹೆಸರಿಸಿರುವುದರಿಂದಲೂ ಕಾವ್ಯದಲ್ಲಿ ನಾಟಕವೂ ಸೇರಿದೆ ಎಂದೂ ತಿಳಿಯುತ್ತದೆ.

ಕಾವ್ಯೇಷು ನಾಟಕಂ ರಮ್ಯಂ ತತ್ರಾಪಿ ಚ ಶಕುಂತಲಾ ।

ಎಂಬ ಅದೊಂದು ಸುಜ್ಞಾತವಾದ ಶ್ಲೋಕದಿಂದಲೂ ನಾಟಕಕ್ಕೆ ಕಾವ್ಯವೆನ್ನುತ್ತಾರೆಂದೂ ತಿಳಿಯುತ್ತದೆ. ನಾಟಕವೇ ಏಕೆ, ಗದ್ಯಗ್ರಂಥಗಳಾದ ಬಾಣನ ಹರ್ಷಚರಿತ-ಕಾದಂಬರಿಗಳನ್ನು ಕೂಡಾ (ಗದ್ಯ) ಕಾವ್ಯವೆಂದು ಹೇಳುತ್ತಾರೆಂದೂ[೧೮] ತಿಳಿಯುತ್ತದೆ. ಈ ಮೇಲಣ ನಡುವಣಕ್ಕರದಲ್ಲಿ 'ಪ್ರಭೃತಿ' ಎಂಬ ಸಾಮೂಹಿಕ ಶಬ್ದವಿರುವುದರಿಂದ, ಅಲ್ಲಿ ಕರ್ಣಾಟಕ ಮಾಲತೀಮಾಧವ'ವನ್ನೇ ಅಲ್ಲ, ಕಂಡಿತವಾಗಿಯೂ ಇನ್ನೆಷ್ಟೋ ಗ್ರಂಥಗಳನ್ನು ಉದ್ದೇಶಿಸಿದೆ ಎಂದು ಪ್ರತ್ಯಕ್ಷವಿದೆ. ಅವಲ್ಲಿ ನಾಟಕಗಳೂ ಇದ್ದಿರಬಾರದೆಂದಿಲ್ಲ. ಅವೆಲ್ಲವನ್ನೂ ಒಟ್ಟವಿಸಿ ಸಮುಷ್ಟಿಯಾಗಿ ಒಂದೇ ಮಾತಿನಲ್ಲಿ ಹೇಳುವುದಾದರೆ 'ಕಾವ್ಯೇ' ಎಂದೇ ಹೇಳದೆ ಗತ್ಯಂತರವಿಲ್ಲ. ಅತ ಏವ ಜಯಕೀರ್ತಿಯ ಆ ಪದ್ಯದಲ್ಲಿ 'ಕರ್ಣಾಟಕ ಮಾಲತೀ ಮಾಧವ ಪ್ರಭೃತಿ ಕಾವ್ಯೇ' ಎಂದಿರುವ ಮಾತ್ರದಿಂದ ಕರ್ಣಾಟಕ ಮಾಲತೀ ಮಾಧವವು ನಾಟಕವಲ್ಲ ಕಾವ್ಯ ತಾನೆ ಎಂದು ಒಮ್ಮೆಗೇ ತೀರ್ಮಾನಿಸಲಾಗುವುದಿಲ್ಲ.

ದುರ್ಗಸಿಂಹನ ಪಂಚತಂತ್ರದ ಅಚ್ಚಾದ ಪ್ರತಿಯಲ್ಲಿ[೧೯] ಇಲ್ಲದ ಅದರ ರಚನಕಾಲವಾಚಿಯಾದ ಇದೊಂದು ಮತ್ತೇಭವಿಕ್ರೀಡಿತ ವೃತ್ತವು ಅದರ ಕೆಲವು ಹಸ್ತಪ್ರತಿಗಳ[೨೦] ಕೊನೆಯಲ್ಲಿದೆ—

ಅತಿ ಸಂಪನ್ನ ತೆವೆತ್ತ ಸದ್ಗ್ರಹನಿವಾಸಸ್ಥಾನಮಾದ ಪ್ರಜಾ
ಪತಿ ಸಂವತ್ಸರ ಚೈತ್ರಮಾಸ ಸಿತಪಕ್ಷ ದ್ವಾದಶೀ ತಾರಕಾ ।
ಪತಿವಾರಂ ಬರೆ ಪಂಚತಂತ್ರಮೆಸೆದತ್ತೀ ಧಾತ್ರಿಯೊಳ್ ದುರ್ಗನಿ
ರ್ಮಿತಮುದ್ಯತ್ಕವಿಶೇಖರ ಪ್ರಮದಲೀಲಾ ಪುಷ್ಪಿತಾಮ್ರದ್ರುಮಂ ॥

ಅಂದರೆ ದುರ್ಗಸಿಂಹನು ಆ ಕಾವ್ಯವನ್ನು 'ಚಾಳುಕ್ಯರಾಜಾನ್ವಯ'ದ (ಪಂಚತಂತ್ರ I, ೩೧) 'ಶ್ರೀ ಕೀರ್ತಿವಿದ್ಯಾಧರ' (I. ೩೧, ೩೮) ಎಂಬ ಬಿರುದಿದ್ದ 'ಜಗದೇಕಮಲ್ಲ' (I. ೩೦, ೩೩) ನೆಂಬ 'ಜಯಸಿಂಹ ನೃಪ'ನ (I. ೩೨) ಆಳಿಕೆಯಲ್ಲಿ (ಕ್ರಿ.ಶ. ೧೦೧೮—೧೦೪೨) ರಚಿಸಿದನೆಂದು ಅದರಿಂದ ತಿಳಿಯುವುದರಿಂದ, ಅದಕ್ಕೆ ಸರಿಯಾಗಿ ಈ ಮೇಲಣ ವೃತ್ತದಲ್ಲಿಯ

೧೬. ಹೇಮಚಂದ್ರನ ಅನೇಕಾರ್ಥಸಂಗ್ರಹ, ಶ್ಲೋಕ ೩೫೯.

೧೭. ಪುರುಷೋತ್ತಮದೇವನ ತ್ರಿಕಾಂಡಶೇಷ, ಶ್ಲೋಕ ೮೬೩.

೧೮. ಉದಾ. ನೃಪತುಂಗನ ಕವಿರಾಜಮಾರ್ಗ, I ೨೬.

೧೯. ಕರ್ಣಾಟಕ ಕಾವ್ಯಮಂಜರಿ, ಮೈಸೂರು, ೧೮೯೮.

೨೦. ಮೈಸೂರು ಓರಿಯಂಟಲ್ ಲಾಯ್‌ಬ್ರರಿಯಲ್ಲಿರುವ ಹಸ್ತಪ್ರತಿಯಿಂದ ಈ ಪದ್ಯವನ್ನು ನನಗೆ ಒದವಿಸಿಕೊಟ್ಟ ಬಗ್ಗೆ ಶ್ರೀ ಎನ್. ಅನಂತರಂಗಾಚಾರ್ಯರಿಗೆ ತುಂಬ ಕೃತಜ್ಞನಾಗಿರುತ್ತೇನೆ. ಮದ್ರಾಸು ವಿಶ್ವವಿದ್ಯಾಲಯದ ಶ್ರೀ ಎಚ್. ಶೇಷಯ್ಯಂಗಾರರು ಆರಾದಿಂದ ತರಿಸಿಕೊಂಡ ಹಸ್ತಪ್ರತಿಯ ಕೊನೆಯಲ್ಲೂ ಈ ಪದ್ಯವಿದೆ.

ಪ್ರಜಾಪತಿ ಸಂವತ್ಸರವು ಶಾ.ಶ. ೯೫೩ನೆಯದು. ಅತ ಏವ ಆತನ ಪಂಚತಂತ್ರವು ಶಾ.ಶ. ೯೫೩ನೆಯ ಪ್ರಜಾಪತಿ ಸಂ|ದ ಚೈತ್ರ ಶುದ್ಧ ೧೨ ತಾರಕಾಪತಿ (=ಸೋಮ)ವಾರ = ಕ್ರಿ.ಶ. ೧೦೩೧ ಮಾರ್ಚಿ ೮ನೆಯ ತಾರೀಕು ಸೋಮವಾರದಂದು ರಚಿಸಿ ಮುಗಿಯಿತೆಂದು ಸಿದ್ಧವಾಗುತ್ತದೆ.

ಆದರ ದ್ವಿತೀಯ ತಂತ್ರದ ಅಜಿತನ ಕಥೆಯಲ್ಲಿ (ಪು. ೨. ೧೯೪-೫) 'ಇತ್ತಲ್ ಮಹಾದೇವಿಯುಂ ರೂಪಾದೇವಿಯುಮೆಂಬರಿರ್ವರರಸಿಯರುಂ ವಿನೋದಾರ್ಥದಿಂ ಸೀತೆಯುಂ ರಾಮನುಮಾಗಿ ಕೃತಕ ನಾಟಕಮನಾಡಿ' ಎಂಬಲ್ಲಿ ನಾಟಕದ ಮಾತು ಬರುತ್ತದಾದರೂ, ಆ ಮಾತು ದುರ್ಗಸಿಂಹನು ಕನ್ನಡಿಸಿದ ವಸುಭಾಗಭಟ್ಟನ (ಪಂಚತಂತ್ರ, I. ೫೯ ವಚನ, ೬೦) ಮೂಲ ಸಂಸ್ಕೃತ ಗ್ರಂಥದಲ್ಲಿಯೂ, ವಸುಭಾಗಭಟ್ಟನು ಸಂಸ್ಕೃತಿಸಿದ ಗುಣಾಢ್ಯನ ಪೈಶಾಚಕ ಭಾಷೆಯ ಬೃಹತ್ಕಥೆಯಲ್ಲಿಯೂ (I. ೫೯ ವಚನ) ಇದ್ದಿರಬೇಕು ಇಲ್ಲವೆ ಬಹುದು ಎಂಬುದರಿಂದ, ಅದರಿಂದ ತಾನೆ ದುರ್ಗಸಿಂಹನ ಕಾಲದಲ್ಲಿ ಕನ್ನಡ ನಾಟಕಗಳು ಇದ್ದುವೆಂದು ನಿರ್ಣಯಿಸಲಾಗದು. ಆದರೆ ಪಂಚತಂತ್ರದಲ್ಲಿ ಸಂಸ್ಕೃತ ಕವಿಗಳನ್ನು (I. ೧೦-೨೧) ಹೊಗಳಿದ ಬಳಿಕ ದುರ್ಗಸಿಂಹನು ತನ್ನ ಹಿಂದಣ ಕನ್ನಡ ಕವಿಗಳಲ್ಲಿ ಶ್ರೀವಿಜಯ (I. ೨೧), ಕನ್ನಮಯ್ಯ (೨೨), ಅಸಗ, ಮನಸಿಜ, ಚಂದ್ರಭಟ್ಟ (೨೩), ಪೊನ್ನ (೨೪), ಪಂಪ (೨೫), ಗಜಾಂಕುಶ (೨೬) ಮತ್ತು ಕವಿತಾವಿಲಾಸ (೨೭) ಎಂಬವರನ್ನು ಪ್ರಾಯಶಃ ಅನುಪೂರ್ವವಾಗಿ[೨೧] ತಾನೆ ನುತಿಸಿರುತ್ತಾನೆ. ಇವರಲ್ಲಿ ಅಸಗನು ಕನ್ನಡ ಕವಿಯೇ ಅಲ್ಲ, ಸಂಸ್ಕೃತ ಕವಿಯೂ ಅಹುದು. ಅವನ ಸಂಸ್ಕೃತ ವರ್ಧಮಾನ ಚರಿತದ ರಚನಕಾಲವನ್ನು ಕುರಿತು ಅದರಲ್ಲಿ (ಸರ್ಗ ೧೮) ಹೀಗದೆ—

> ಸಂವತ್ಸರೇ ದಶನವೋತ್ತರ ವರ್ಷಯುಕ್ತೇ ॥ ೧೦೪ ॥
> ವಿದ್ಯಾ ಮಯಾ ಪ್ರಪಠಿತೇತ್ಯಸಗಾಹ್ವಯೇನ
> ಶ್ರೀನಾಥ ರಾಜ್ಯಮಖಿಲಂ ಜನತೋಪಕಾರಿ ।
> ಪ್ರಾಪ್ಯೈವ ಚೋಡವಿಷಯೇ ವಿರಲಾ ನಗರ್ಯಾಂ
> ಗ್ರಂಥಾಷ್ಟಕಂ ಚ ಸಮಕಾರಿ ಜಿನೋಪದಿಷ್ಟಮ್ ॥ ೧೦೫ ॥

ಅಂದರೆ ಅಸಗನು ಆ ಕಾವ್ಯವನ್ನು ೯೧೦ನೆಯ ಸಂವತ್ಸರದಲ್ಲಿ ಬರೆದು ಮುಗಿಸಿದನು, ಆತನು ಶ್ರೀನಾಥನೆಂಬ ಅರಸನು ಆಳುತಿದ್ದ ಚೋಳದೇಶದಲ್ಲಿ, ವಿದ್ಯೆಯನ್ನು ಕಲಿತು ವಿರಲಾನಗರಿಯಲ್ಲಿ ತನ್ನ ೮ ಗ್ರಂಥಗಳನ್ನು ರಚಿಸಿದನು. ಅಸಗನನ್ನು ಪೊನ್ನನ ಶಾಂತಿಪುರಾಣದಲ್ಲಿ (ಕ್ರಿ.ಶ. ಸು. ೯೫೦) 'ಕನ್ನಡ ಕವಿತೆಯೊಳಸಗಂ' (I. ೧೧) ಎಂದು ಹೆಸರಿಸಿರುವುದರಿಂದ ಮಾತ್ರವಲ್ಲ, ಶಾಲಿವಾಹನ ಶಕದ ವರ್ಷಗಳನ್ನು ಹೇಳುವಲ್ಲಿ ಯಥಾವತ್ತಾಗಿ ಉಪಯೋಗಿಸತಕ್ಕ ಶಕ ಎಂಬ ಶಬ್ದವನ್ನು ಉಪಯೋಗಿಸದೆ, ವಿಕ್ರಮಕಾಲವನ್ನು ಸೂಚಿಸುವಲ್ಲಿ ಪ್ರಯೋಗಿಸುವ ಸಂವತ್= ಸಂವತ್ಸರ ಎಂಬ ಶಬ್ದವನ್ನು ಇಲ್ಲಿ ಪ್ರಯೋಗಿಸಿರುವುದರಿಂದಲೂ ಅಸಗನ ವರ್ಧಮಾನಚರಿತವು ರಚಿತವಾದ ೯೧೦ನೆಯ ಸಂವತ್ಸರವು ಸರ್ವಥಾ ಶಾಲಿವಾಹನ ಶಕದ ವರ್ಷವಲ್ಲ, ವಿಕ್ರಮ ಕಾಲದ ವರ್ಷವೇ ಆಗಿರಬೇಕು. ಅತ ಏವ ಆ ಕಾವ್ಯವು ಕ್ರಿ.ಶ. ೮೫೩-೮೫೪ರಲ್ಲಿ ರಚಿತವಾಯಿತೆಂದು ನಿಷ್ಪನ್ನವಾಗುತ್ತದೆ. ಅದಕ್ಕೆ ಹಿಂದೆ ಅಸಗನು

---

೨೧. ದುರ್ಗಸಿಂಹನು ಪಂಪನಿಗೆ (೨೫) ಮುಂಚೆ ಪೊನ್ನನನ್ನು (೨೪) ಹೆಸರಿಸಿರುವಲ್ಲಿ, ಪಂಪನ ಆದಿಪುರಾಣವು ಕ್ರಿ.ಶ. ೯೪೧ರಲ್ಲೂ ಪೊನ್ನನ ಶಾಂತಿಪುರಾಣವು ಕ್ರಿ.ಶ. ಸು. ೯೫೦ರಲ್ಲೂ ಹೆಚ್ಚು ಕಡಿಮೆ ೮-೧೦ ವರ್ಷಗಳಷ್ಟೇ ಅಂತರದಲ್ಲಿ ರಚಿತವಾದುದರಿಂದ, ಅವರ ಹೊಗಳಿಕೆಯಲ್ಲಿ ಅನುಪೂರ್ವಿ ದೂಷಿತವಾಗುವಂತಿಲ್ಲ.

ಚೋಳದೇಶದಲ್ಲಿ ಕಲಿಯುತಿದ್ದಾಗ ಅಲ್ಲಿ ಆಳುತಿದ್ದ ಶ್ರೀನಾಥನೆಂಬ ಅರಸನೆಂದರೆ, ಕ್ರಿ.ಶ. ಸು. ೮೪೬ರ ವರೆಗೆ ಆಳಿದ ಶ್ರೀಪತಿ ಎಂದೂ ಹೆಸರಿದ್ದ ಕೋಕಿಳ್ಳಿ ಎಂಬ ಜೋಳರಾಜನು[೨೨]

ಪಂಚತಂತ್ರದಲ್ಲಿ ಅಸಗನ ಮುಂಚೆಯೇ ಕನ್ನಮಯ್ಯನೆಂಬ ಕನ್ನಡಕವಿಯನ್ನು ಹೀಗೆ ಮೇಲಾಗಿ ಹೊಗಳಿದೆ—

> ಪರಮಕವೀಶ್ವರ ಚೇತೋ
> ಹರಮೆಂಬಿನಮೆಸೆವ ಮಾಳವೀಮಾಧವಮಂ ।
> ವಿರಚಿಸಿದ ಕನ್ನಮಯ್ಯಂ
> ಬರಮಾಗಂ ಸುಕವಿ ಬಗೆಪ್ರೊಡಿನ್ನುಂ ಮುನ್ನುಂ ॥ ೨೨ ॥

ಅತ ಏವ ದುರ್ಗಸಿಂಹನು ಆ ಕನ್ನಡ ಕವಿಗಳನ್ನು ಅನುಕ್ರಮವಾಗಿ ಹೊಗಳಿರುವನಾದರೆ, ಮತ್ತು ಹಾಗಾದರೆ ಮಾತ್ರ, ಅವರಲ್ಲಿ ಶ್ರೀವಿಜಯನನ್ನು ಮಾತ್ರ ತನ್ನ ಕವಿರಾಜಮಾರ್ಗದಲ್ಲಿ (I. ೩೩) ಹೆಸರಿಸಿರುವ ನೃಪತುಂಗನು (ಕ್ರಿ.ಶ. ೮೧೪–೮೭೭) ಅಸಗನನ್ನೂ ಈ ಕನ್ನಮಯ್ಯನನ್ನೂ ಹೆಸರಿಸಿಲ್ಲದಕಾರಣ, ಅಸಗನು ಹೇಗೆ ನೃಪತುಂಗನಿಗೆ ಆದ್ಯತನನೆಂದು[೨೩] ಪ್ರತ್ಯಕ್ಷವಿದೆಯೊ ಹಾಗೆಯೇ ಕನ್ನಮಯ್ಯನೂ ನೃಪತುಂಗನಿಗೆ ತಕ್ಕಷ್ಟು ಆದ್ಯತನನಾಗಿರಬೇಕೆಂದು ಸಿದ್ಧವಾಗುವುದರಿಂದ, ದುರ್ಗಸಿಂಹನ ಹೊಗಳಿಕೆಯ ಪರಿಪಾಟಿಯಲ್ಲಿ ಅಸಗನಿಗೂ ಹಿಂದಣವನೆನಿಸುವ ಕನ್ನಮಯ್ಯನು ಮಾಳವೀಮಾಧವವನ್ನು ಕ್ರಿ.ಶ. ಸು. ೮೦೦–೮೫೦ರಲ್ಲಿಯೂ, ಅಥವಾ ದುರ್ಗಸಿಂಹನು ಹಾಗೆ ಆನುಪೂರ್ವಿಯನ್ನು ಲಕ್ಷಿಸಿಲ್ಲವಾದರೆ ಕನ್ನಮಯ್ಯನು ಮಾಳವೀಮಾಧವವನ್ನು ಕ್ರಿ.ಶ.ಸು. ೯೦೦–೯೫೦ರಲ್ಲಿಯೂ ರಚಿಸಿರಬೇಕು.

ಕವಿಚರಿತಕಾರರು[೨೪] ಕರ್ಣಾಟಕ ಕಾವ್ಯಮಂಜರಿಯಲ್ಲಿ ಪ್ರಕಟವಾದ, ಆ ಕೊನೆಯ ರಚನಕಾಲವಾಚಿಯಾದ ವೃತ್ತವಿಲ್ಲದ, ಪಂಚತಂತ್ರವನ್ನು ಕಂಡು, ಅದರಲ್ಲಿಯ ಕೀರ್ತಿವಿದ್ಯಾಧರನೆಂಬ I ಜಗದೇಕಮಲ್ಲ ಜಯಸಿಂಹನನ್ನು (ಕ್ರಿ.ಶ. ೧೦೧೮–೧೦೪೨) ಜಯಸಿಂಹನೆಂಬ ಹೆಸರೂ ಕೀರ್ತಿವಿದ್ಯಾಧರನೆಂದು ಬಿರುದೂ ಇದ್ದಿಲ್ಲದ, ಕ್ರಿ.ಶ. ೧೧೩೮ರಿಂದ ೧೧೫೧ರ ವರೆಗೆ ಆಳಿದ II ಪೆರ್ಮ ಜಗದೇಕಮಲ್ಲನೊಂದಿಗೆ ಸಮೀಕರಿಸಿದುದೂ, ಆ ತಕ್ಕಂತೆ ದುರ್ಗಸಿಂಹನ ಕಾಲ ಕ್ರಿ.ಶ. ಸು, ೧೧೪೫ ಎಂದು ನಿಶ್ಚಯಿಸಿದುದೂ, ಅದಕ್ಕೆ ಸರಿಯಾಗಿ ಪಂಚತಂತ್ರದಲ್ಲಿ ಹೊಗಳಿದ ಕನ್ನಮಯ್ಯನನ್ನು ನೇಮಿನಾಥಪುರಾಣದ ಕರ್ಣಪಾರ್ಯನೆಂದು[೨೫] ಭಾವಿಸಿದುದೂ ಸರ್ವಥಾ ಸರಿಯಲ್ಲ. ಕ್ರಿ.ಶ. ೧೧೪೩, ೧೧೫೦. ಹಾಗೂ ೧೧೫೩ರ ಶಾಸನಗಳುಳ್ಳ ಕರ್ಹಾಡದ ಶಿಲಾಹಾರ ವಂಶದ ವಿಜಯಾದಿತ್ಯನ[೨೬] ಮಂತ್ರಿಯಾದ ಲಕ್ಷ್ಮ(ಣ)ನು ಕರ್ಣಪಾರ್ಯನಿಂದ ನೇಮಿನಾಥಪುರಾಣವನ್ನು ಹೇಳಿಸಿದನೆಂದು ಅದರಿಂದಲೇ (I. ೨೮–೩೨) ತಿಳಿಯುವುದರಿಂದ, ಅದು ಕ್ರಿ.ಶ.ಸು. ೧೧೫೦ರಲ್ಲಿ ರಚಿಸಲ್ಪಟ್ಟಿರಬೇಕು.

---

೨೨. Historical Inscriptions of Southern India (*H. I. S. I.*) ಪು. ೩೪೦

೨೩. ಇಲ್ಲಿ ಕರ್ಣಪಾರ್ಯನ ನೇಮಿನಾಥ ಪುರಾಣದಲ್ಲಿಯ (I. ೨೨) 'ಆದ್ಯತನನಾಗಿಯುಂ ನೆಗಬ್ದಾದ್ಯರ ದೊರೆಯೆನಿಸಿ . . . . . . ನಾಗಚಂದ್ರ ಕವೀಂದ್ರಂ ॥' ಎಂಬ ಕಂದವನ್ನು ನೆನವರಿಸಿದರೆ, ಕವಿಗಳಿಗೆ ತಮ್ಮ ಆದ್ಯತನರಲ್ಲಿ ಎಷ್ಟು ಜುಗುಪ್ಸೆ ಎಂದು ತಿಳಿಯುತ್ತದೆ.

೨೪. ಕರ್ಣಾಟಕ ಕವಿಚರಿತೆ, I, ಪು, ೧೪೯–೧೫೦.

೨೫. ಅದೇ, ಪು. ೧೩೯.

೨೬. *H I S I*, ಪು. ೩೯೨.

ಆತ ಏವ ನೇಮಿನಾಥಪುರಾಣದ ಕರ್ಣಪಾರ್ಯನೂ ಕ್ರಿ.ಶ. ೧೧೫೧ರಲ್ಲಿ ರಚಿತವಾದ ಪಂಚ ತಂತ್ರದಲ್ಲಿ ದುರ್ಗಸಿಂಹನು ಹೊಗಳಿರುವ ಕನ್ನಮಯ್ಯನೂ ತೀರ ಭಿನ್ನ ವ್ಯಕ್ತಿಗಳೇ ಹೊರತು ಸರ್ವಥಾ ಒಬ್ಬನಲ್ಲ.[೨೭]

ಈಗ ಮಾಳವೀಮಾಧವ ಎನ್ನುತ್ತಲೆ ಭವಭೂತಿಯ (ಕ್ರಿ.ಶ.ಸು. ೭೦೦) ಸಂಸ್ಕೃತ ಮಾಲತೀಮಾಧವ ನಾಟಕದ ನೆನಪಾಗದಿರದು. ಅತ ಏವ ಹೆಸರು ಕೇಳುವೊಡನೆಯೇ ನಾಟಕವೆನಿಸುವ ಮಾಳವೀಮಾಧವವೂ ನಾಟಕವೇ ಸರಿ. ಆದರೆ ಅದು ಕನ್ನಡ ನಾಟಕವಲ್ಲ, ಪ್ರಾಯಶಃ ಚಂಪೂಕಾವ್ಯವಾಗಿರಬೇಕು, ಮಾಳವೀಮಾಧವ ಎಂದೂ ಮಾಲತೀಮಾಧವ ಎಂದೂ ತೀರ ಸರಿಬರಿಯಾದ ಹೆಸರಿನ ಎರಡು ಅನ್ಯಾನ್ಯ ಕೃತಿಗಳು ಕನ್ನಡದಲ್ಲಿ ಇದ್ದಿರ ಲಾರವು, ಆದಕಾರಣ ದುರ್ಗಸಿಂಹನ ಪಂಚತಂತ್ರದಲ್ಲಿ ನೇರಾಗಿ 'ಮಾಳತೀಮಾಧವಮಂ' ಎಂದಿರಬೇಕಾದಲ್ಲಿ 'ಮಾಳವೀಮಾಧವಮಂ' ಎಂದಿರುವುದು ಅಪಪಾಠ ತಾನೆ ಆಗಿರಬೇಕು ಎಂದು ಶ್ರೀ ನರಸಿಂಹಾಚಾರ್ಯರು ನನ್ನನ್ನು ಇಲ್ಲಿಯೂ ಬೇರೆ ಎಚ್ಚರಿಸಿರುತ್ತಾರೆ. ಇದಕ್ಕೆ ನನ್ನ ಪ್ರತ್ಯುಕ್ತಿ ಹೀಗಿದೆ—

'ಮಾಳತೀಮಾಧವಮಂ' ಎಂಬ ಪಾಠವಿರುವ ಪಂಚತಂತ್ರದ ಹಸ್ತಪ್ರತಿ ದೊರೆವವರೆಗೆ ಅಲ್ಲಿ ಹೆಸರಿಸಿರುವ ಗ್ರಂಥವು ಮಾಳವೀಮಾಧವ ಎಂದೇ ಒಪ್ಪಿಕೊಳ್ಳಬೇಕು. ಅದು ಮಾಲತೀಮಾಧವದ್ದೇ ಅನುವಾದವಾಗಿದ್ದರೆ ಕನ್ನಮಯ್ಯನು ನಾಯಕನ ಹೆಸರನ್ನು ಇದ್ದಕ್ಕಿದ್ದಂತೆ ಇರಿಸಿ ನಾಯಿಕೆಯ ಹೆಸರನ್ನು ಮಾತ್ರ ಪಲ್ಲಟಿಸಿದನೇಕೆ? ಎಂಬ ಪ್ರಶ್ನೆ ನಿರುತ್ತರವಾಗಿ ಉಳಿಯುತ್ತದೆ. ಅದು ಮಾಲತೀಮಾಧವದ ಧೋರಣೆಯದೇನೋ ನಾಟಕವಾಗಿರಲೂ ಬಹುದು, ಇಲ್ಲವೆ ಮಾಲತೀಮಾಧವದ ಅನುಕರಣೆಯಾಗಿರಲೂ ಬಹುದು. ಅಥವಾ ಮಾಧವನೆಂಬ ಶ್ರೀ ಕೃಷ್ಣನ ಅಷ್ಟಮಹಿಷಿಯರಲ್ಲಿ ಮಾಳವಿ ಎಂಬ ಯಾರೊಬ್ಬಳಿದ್ದು (ಮಾಲವದ ರಾಜಧಾನಿ ಅವಂತಿ,[೨೮] ಅತ ಏವ ಅವಂತಿಯ ರಾಜ ಕನ್ಯೆಯೂ ಕೃಷ್ಣನ ರಾಣಿಯೂ ಆಗಿದ್ದ ಮಿತ್ರವಿಂದೆ[೨೯] ಮಾಲವಿ ಎಂದು ಸಾಹಜಿಕವಾಗಿ ಕರೆಯಲ್ಪಡಲೂ ಬಹುದು), ಅದು ಆಕೆಗೂ ಆತನಿಗೂ ಆದ ವಿವಾಹವನ್ನು ಬಣ್ಣಿಸುವ ನಾಟಕವಾಗಿರಲೂ ಬಹುದು. ಅದನ್ನು ಕುರಿತು ಇದಕ್ಕಿಂತ ಹೆಚ್ಚಿಗೆ ಹೇಳಲಾಗುವುದಿಲ್ಲ.

ಅಸಗನನ್ನು ಪೊನ್ನನೂ ದುರ್ಗಸಿಂಹನೂ ಅಲ್ಲದೆ ನಯಸೇನನೂ (ಕ್ರಿ.ಶ. ೧೧೧೨) ಹೆಸರಿಸಿರುತ್ತಾನೆ, ಅತ ಏವ ಆತನ ಕನ್ನಡ ಕಾವ್ಯಗಳು ಕ್ರಿ.ಶ. ೧೨೦೦ಕ್ಕೂ ಈಚೆಯಲ್ಲಿ ಇದ್ದಿರಬೇಕು. ಜಯಕೀರ್ತಿಯ ಛಂದೋನುಶಾಸನದ ಇದೊಂದು ದೊರೆಯಕ್ಕರದಿಂದ

ರತಿಪತಿ ಗಣಯುಗ್ಮಾದ್ರತಿತಃ ಸ್ಮರಯುಗ್ಮಂ ರತಿರಪಿ (ಜ. ಪುನಃ)
ಪ್ರತಿಪಾದಂ ವರ್ತತೇ ಯಸ್ಮಿಂ ಸ್ತತ್ಸಮಾನಾಕ್ಷರಂ ನಾಮ।
ಶ್ರುತಿಕಾನ್ತಮಕ್ಷರದಕ್ಷೈರಾದೃತಮಸಗಾಖ್ಯಕವಿನಾ
ಪ್ರತಿಪಾದಿತಂ ನನು ಕರ್ಣಾಟ ಕುಮಾರ ಸಂಭವ ಕಾವ್ಯೇ ॥ VII. ೭ ॥ *

---

೨೭. ದುರ್ಗಸಿಂಹನು ತನ್ನ ಹಿಂದಣ ಕನ್ನಡ ಕವಿಗಳನ್ನು ಅನುಪೂರ್ವವಾಗಿ ಸ್ಮರಿಸಿರುತ್ತಾನಾದರೆ, ಆತನು ಅಸಗನ ಮತ್ತು ಪೊನ್ನನ ನಡುವೆ ಹೊಗಳಿರುವ ಮನಸಿಜನೂ ಚಂದ್ರಭಟ್ಟನೂ ಕವಿಚರಿತಕಾರರು ಎಂದಿರುವಂತೆ (ಕರ್ಣಾಟಕ ಕವಿಚರಿತೆ I, ಪು. ೭೨-೭೩) ಕ್ರಿ.ಶ.ಸು. ೧೦೦೦ದಲ್ಲಿ ಅಲ್ಲ, ಕ್ರಿ.ಶ.ಸು. ೯೦೦ರಲ್ಲಿ ಇದ್ದಿರಬೇಕು.

೨೮. Nundo Lal Dey: *Geographical Dictionary of Ancient and Mediaeval India*, ಪು. ೧೨೨ *(Malava)*

೨೯. ಶ್ರೀಮದ್ಭಾಗವತ, X. ಅಧ್ಯಾಯ ೫೮.

* ಈ ಸಂಸ್ಕೃತ ಪದ್ಯದಲ್ಲಿಯೂ ಪ್ರಾಸವಿರುವುದನ್ನು ಗಮನಿಸಬಹುದು.

ಅಸಗನು ರಚಿಸಿದಂತೆ ತಿಳಿವ, ಹಾಗೂ ಕಾಳಿದಾಸನ ಸಂಸ್ಕೃತ ಕುಮಾರಸಂಭವದ ಭಾಷಾಂತರವೆಂದು ತೋರುವ, ಕನ್ನಡ ಕುಮಾರಸಂಭವ ಕಾವ್ಯವು೩೦ ಈ ವರೆಗೆ ಉಪಲಬ್ಧವಾಗಿಲ್ಲ. ಮಾಳವೀಮಾಧವದ ಕನ್ನಮಯ್ಯನನ್ನಾದರೊ ದುರ್ಗಸಿಂಹನಲ್ಲದೆ ಬೇರೆ ಯಾರೂ ಹೆಸರಿಸಿರುವಂತೆ ತೋರದಿರುವ ಕಾರಣ, ಆತನ ಆ ನಾಟಕವು ಪಂಚತಂತ್ರಕ್ಕಿಂತ ಹೆಚ್ಚಾದರೆ ಒಂದೇ ಶತಮಾನದೊಳಗೇನೋ ನಷ್ಟವಾಗಿರಬೇಕು. ಮಹಾಕವಿಯಾದ ದುರ್ಗಸಿಂಹನು ಅಷ್ಟು ಉತ್ಕೃಷ್ಟವೆಂದು ಹೊಗಳಿರುವುದರಿಂದ, ಆ ಮಾಳವೀಮಾಧವವು ಕಂಡಿತವಾಗಿಯೂ ಸಾಹಿತ್ಯೋಚಿತವಾಗಿರಲೂ ಬೇಕು, ಉತ್ತಮವಾಗಿರಲೂ ಬೇಕು. ನಾಟಕಕಾರನನ್ನೂ ದುರ್ಗಸಿಂಹನ ಕಾವ್ಯದಲ್ಲಿ ಹೊಗಳಿರಬಹುದೇ? ಎಂದು ಪ್ರಶ್ನಿಸಿದರೆ, ಅದೇ ಪಂಚತಂತ್ರದಲ್ಲಿ ಹೊಗಳಿರುವ ಸಂಸ್ಕೃತ ಕವಿಗಳಲ್ಲಿ ಮಹಾವೀರಚರಿತ, ಉತ್ತರರಾಮಚರಿತ ಮತ್ತು ಮಾಲತೀಮಾಧವ ಎಂಬ ೩ ನಾಟಕಗಳನ್ನು ಮಾತ್ರ ರಚಿಸಿರುವಂತೆ ಗೊತ್ತಿರುವ ಭವಭೂತಿಯ ಹೆಸರಿದೆ (I. ೧೯) ಎಂಮ ಹೇಳಿದರಷ್ಟೇ ಸಾಕು.

ಹೀಗೆ ಕ್ರಿ.ಶ. ೯–೧೦ ನೆಯ ಶತಕದಲ್ಲೂ ಸಾಹಿತ್ಯೋಚಿತವಾದ ಕನ್ನಡ ನಾಟಕವಿತ್ತೆಂದು ಸಿದ್ಧವಾಗುತ್ತದೆ. ಆದರೆ ಕನ್ನಮಯ್ಯನ ಮಾಳವೀಮಾಧವವೇ ಮೊತ್ತಮೊದಲಿನ ಕನ್ನಡ ನಾಟಕವೊ ಅಥವಾ ಅದಕ್ಕಿಂತ ಹಿಂದಿನಿಂದಲೇ ಕನ್ನಡದಲ್ಲಿ ನಾಟಕವಿತ್ತೊ ಎಂದು ಕಂಡು ಹಿಡಿಯತಕ್ಕ ಸಾಧನಗಳಿಲ್ಲ. ಇಲ್ಲಿ, ಅದಕ್ಕಿಂತ ಹಿಂದೆಯೂ ಕನ್ನಡ ನಾಟಕವಿದ್ದಿತಾದರೆ ಕವಿರಾಜಮಾರ್ಗದಲ್ಲಿ ಆ ಕುರಿತು ಹೇಳುತ್ತಿರಲಿಲ್ಲವೆ? ಅಲ್ಲಿ ಯಾಕೆ ಹೇಳಿಲ್ಲ? ಎಂದು ಶಂಕೆಯಾಗಬಹುದು. ಅದರ ನಿವೃತ್ತಿ ಹೀಗಿದೆ—

ಕವಿರಾಜ ಮಾರ್ಗದ (ಪರಿಚ್ಛೇದ I)

ಸಂಸ್ಕೃತ ಪದ್ಯಕವಿಗಳ್  
ಪ್ರಣುತ ಗುಣಸೂರಿ ನಾರಾ  
ಯಣ ಭಾರವಿ ಕಾಳಿದಾಸ ಮಾಘಾದಿಗಳೀ।  
ಗಣಿದದೊಳೆ ಮಹಾಕಾವ್ಯ  
ಪ್ರಣಯಮನಾಗಿಸಿದರಮಳ ಕವಿವೃಷಭರ್ಕಳ್ ॥ ೩೦ ॥

ಈ ಕಂದದಲ್ಲಿ ಹೆಸರಿಸಿರುವ ಸಂಸ್ಕೃತ ಕವಿಗಳಲ್ಲಿ ನಾರಾಯಣ ಎಂಬಾತನು ಸಂಸ್ಕೃತ ವೇಣೀಸಂಹಾರ ನಾಟಕ ಎಂಬ ಅದೊಂದೇ ಗ್ರಂಥವನ್ನು ರಚಿಸಿದಂತೆ ತಿಳಿದಿರುವ ಭಟ್ಟನಾರಾಯಣನು (ಕ್ರಿ.ಶ.ಸು. ೭–೮ನೆಯ ಶತಮಾನ). ನಾಟಕಕಾರನನ್ನು ಸಂಸ್ಕೃತ ಪದ್ಯಕವಿಗಳಲ್ಲಿ ಹೆಸರಿಸಿರುವ ನೃಪತುಂಗನು ನಾಟಕವನ್ನು ಕಾವ್ಯದಲ್ಲಿ ಅಡಕಿಸಿರುತ್ತಾನೆಂದು ಪ್ರತ್ಯಕ್ಷವಿರುವುದರಿಂದ, ಆತನ ಕಾಲಕ್ಕಿಂತ ಮುಂಚಿನಿಂದಲೆ ಕನ್ನಡ ನಾಟಕವಿದ್ದು ನಾಟಕಕಾರರನ್ನು ಆತನು ಹೆಸರಿಸಿರುವನಾದರೆ ಅವರನ್ನೂ ಆತನು ಕನ್ನಡ ಪದ್ಯಕವಿಗಳಲ್ಲಿ ತಾನೆ ಸೇರಿಸಿರಬೇಕು.

ಕೊನೆಗೆ, ಕುಮಾರವ್ಯಾಸನ ಕಾಲದಲ್ಲಿ ಆ ಹಿಂದಣ ಕನ್ನಡ ನಾಟಕಗಳು ಇದ್ದುವೆಂದೂ, ನಾಗವರ್ಮನ ಕಾವ್ಯಾವಲೋಕನದಲ್ಲಿ ಕನ್ನಡ ನಾಟಕಗಳಿಂದ ಎತ್ತಿಕೊಂಡ ಉದಾಹರಣೆಗಳಿವೆ ಎಂದೂ, ಕೇಶಿರಾಜನೂ ಕನ್ನಮಯ್ಯನೂ ಕನ್ನಡ ನಾಟಕಗಳನ್ನು ರಚಿಸಿರುತ್ತಾರೆಂದೂ

೩೦. ನಾಗವರ್ಮನ ಕಾವ್ಯಾವಲೋಕನದಲ್ಲಿ ಶಿವಪಾರ್ವತಿಯರ ವಿವಾಹ ವಿಷಯಕವಾದ ಯಾವೊಂದು ಗ್ರಂಥದಲ್ಲಿಯವೆಂದಿರುವ ಆ ೧೩ ಪದ್ಯಗಳೂ (ಕಾವ್ಯಾವಲೋಕನದ ಉಪೋದ್ಘಾತ, ಪು. ೪೩), ಕುಮಾರಸಂಭವದಲ್ಲಿಯವೆಂದಿರುವ ಆ ೨ ಪದ್ಯಗಳೂ (ಅದೇ, ಪು. ೪೮), ಅವಲ್ಲಿ ಎಲ್ಲವೂ ಹಲವೂ ಅಸಗನ ಈ ಕೃತಿಯಿಂದ ಎತ್ತಿಕೊಂಡವಾಗಿರಬಹುದು.

ಮೇಲಣ ವಿವರಣದಿಂದ ತಕ್ಕಷ್ಟಾದರೂ ನಿಷ್ಪನ್ನವಾಗುವುದರಿಂದ, ಕ್ರಿ.ಶ. ೯–೧೦ನೆಯ ಶತಮಾನದಿಂದ ಕುಮಾರವ್ಯಾಸನ ಕಾಲದವರೆಗೆ ಕೆಲವಾದರೂ ಸಾಹಿತ್ಯೋಚಿತವಾದ ನಾಟಕಗಳೂ, ಪ್ರಾಯಶಃ ಹಲವಾರು ನಾಡಾಡಿಗಳ ನಾಟಕಗಳೂ ಕನ್ನಡದಲ್ಲಿ ಇದ್ದಿರಬೇಕು. ಹಾಗೆಯೇ ಅವೆಲ್ಲವೂ (ಅಲ್ಲವಾದರೆ ಅವಲ್ಲಿ ಸಾಹಿತ್ಯೋಚಿತವಾದ ನಾಟಕಗಳೆಲ್ಲವೂ) ಮೇಲೆ ಕಂಡಿರುವ ಕಾಳಿದಾಸನ ಮಾಲವಿಕಾಗ್ನಿಮಿತ್ರ ನಾಟಕದ ಪ್ರಸ್ತಾವನೆಯಲ್ಲಿ ಸೂಚಿಸಿರುವ ಸೌಮಿಲ್ಲ-ಕವಿಪುತ್ರರ ಸಂಸ್ಕೃತ ನಾಟಕಗಳಂತೆ(ಸೌಮಿಲ್ಲ-ಕವಿಪುತ್ರಾದೀನಾಂ ಪ್ರಬಂಧಾನ್), ಅಸಗನ ಕನ್ನಡ ಕುಮಾರಸಂಭವ ಕಾವ್ಯದಂತೆ ಕಾಲಕ್ರಮೇಣ ಬೇಗನೆ ನಷ್ಟವೋ, ಅಥವಾ ೧೯೧೦ ರ ವರೆಗೆ ಭಾಸನ ಸಂಸ್ಕೃತ ನಾಟಕಗಳಿದ್ದಂತೆ ಇನ್ನೂ ಗುಪ್ತವೋ ಆಗಿರಬೇಕು.

ಈ ವಿಚಾರದ ಆಯಾ ಸಂದುಕಟ್ಟಿನಲ್ಲಿ ನನ್ನನ್ನು ಸಾಕೂತವಾಗಿ ಎಚ್ಚರಿಸಿರುವ ಬಗ್ಗೆ, ಹಾಗೂ ಜಯಕೀರ್ತಿಯ ಛಂದೋನುಶಾಸನದಿಂದ ಮೇಲೆ ಉದ್ಧರಿಸಿರುವ ಆ ಅಕ್ಕರವೆರಡನ್ನೂ ನನಗೆ ಕಳಿಸಿಕೊಟ್ಟಿರುವ ಬಗ್ಗೆ[೩೧] ಶ್ರೀ ಡಿ. ಎಲ್. ನರಸಿಂಹಾಚಾರ್ಯರಿಗೆ ನಾನು ಅತ್ಯಂತ ಕೃತಜ್ಞನಾಗಿರುತ್ತೇನೆ.

ಗೋವಿಂದ ಪೈ

---

೩೧. ಈ ಅಕ್ಕರಗಳು *Journal of the Bombay Branch of the Royal Asiatic Society* (New Series.) ಎಂಬ ಪತ್ರಿಕೆಯ XXI ನೆಯ ಸಂಪುಟದಲ್ಲಿಯ '*Chandonusasana of Jayakirti and ancient Kannada metres*' ಎಂಬ ಲೇಖದಿಂದ (ಪು. ೧೪) ಉದ್ಧರಿಸಿದುವೆಂದು ಅವರು ನನಗೆ ತಿಳಿಸಿರುತ್ತಾರೆ.

## ಕನ್ನಡ ನಾಟಕದ ಹಳಮೆ

### ಪರಿಶಿಷ್ಟ

ಈ ಲೇಖನವನ್ನು ಬರೆದುಕಳಿಸಿಕೊಟ್ಟ ಬಳಿಕ ಶ್ರೀ ತಿರುಮಲೆ ತಾತಾ ಶರ್ಮರವರ 'ಕನ್ನಡ ನಾಟಕ' ಎಂಬ ಲೇಖನದಲ್ಲಿ[೨೨] ಹೇಳಿರುವ ಈ ಕೆಲವು ಹೆಚ್ಚಿನ ವಿಷಯಗಳ ನೆನಪಾದುದರಿಂದ ಅವನ್ನು ಇಲ್ಲಿ ಉದ್ಧರಿಸುತ್ತೇನೆ—

(೧) 'ಕೆಳದಿ ನೃಪವಿಜಯ' ದಲ್ಲಿ (V. ೩೦) ಕೆಳದಿಯ ಅರಸನಾದ ಹಿರಿಯ ವೆಂಕಟಪ್ಪನಾಯಕನು (ಕ್ರಿ.ಶ. ೧೫೮೨-೧೬೨೯) 'ಇಕ್ಕೇರಿಯರಮನೆಯೊಳ್ವಿಚಿತ್ರತರ ರಚನಾಕೌಶಲ್ಯದಿಂ ನಾಟಕಶಾಲೆಯಂ ನಿರ್ಮಾಣಗೆಯ್ಸಿ' ದನೆಂದಿದೆ.

(೨) ಭಟ್ಟಾಕಳಂಕನ ಶಬ್ದಾನುಶಾಸನದಲ್ಲಿ (ಕ್ರಿ.ಶ. ೧೬೦೪) 'ಶಬ್ದಾಗಮ ಯುಕ್ತ್ಯಾಗಮ ಪರಮಾಗಮ ವಿಷಯಾಣಾಂ ತಥಾಕಾವ್ಯ ನಾಟಕಾಲಂಕಾರ ಕಲಾ ಶಾಸ್ತ್ರ ವಿಷಯಾಣಾಂ ಚ ಬಹೂನಾಂ ಗ್ರಂಥಾನಾಮಪಿ ಭಾಷಾಕೃತಾನಾಮುಪಲಭ್ಯಮಾನತ್ವಾತ್' ಎಂದಿರುವಲ್ಲಿಂದ ಆತನ ಕಾಲದಲ್ಲಿ ಕನ್ನಡದಲ್ಲಿ ನಾಟಕಗಳು ಇದ್ದುವೆಂದು ತಿಳಿಯುತ್ತದೆ.

(೩) ನಿಜಗುಣ ಶಿವಯೋಗಿಯ (ಕ್ರಿ.ಶ.ಸು. ೧೫೦೦) ವಿವೇಕ ಚಿಂತಾಮಣಿಯ ೪ನೆಯ ಪ್ರಕರಣದಲ್ಲಿ 'ಬಳಿಕ ನಾಟಕದಲ್ಲಿ ದಿನದಿನಕಭಿನಯಿಸಲ್ತಕ್ಕ ರಸ ಭಾವ ಸಂವಿಧಾನ ಆಶ್ರಯಂಗಳೆಂಬ ಚತುರ್ವಿಧ ಪ್ರಬಂಧಾಂಶಂಗಳಂ, ಮುಖ ದೃಷ್ಟಿ ಹಸ್ತಪಾದಂಗಳಭಿನಯಿಪ ಲಕ್ಷಣಂ ತಪ್ಪದೆ ಮೇಲೆ ಮುಖರಸವೇ ಹಾವ, ನೇತ್ರಸ್ಪಂದವೇ ಭಾವ, ಪದನ್ಯಾಸವೇ ವಿಲಾಸ, ಭ್ರೂವಿಕ್ಷೇಪಣವೇ ವಿಭ್ರಮವೆಂಬ ಚತುರ್ವಿಧಮೋಹನಂ ಮೆಯ್ವೆತ್ತು, ಶುದ್ಧ ದೇಶೀಯವೆಂಬ ದ್ವಯಮಾ ವಿವರಗೊಂಡು, ತಾಂಡವ ನಾಟ್ಯ ನೃತ್ತ್ಯ ಲಾಸ್ಯ ಗುಂಡಿಲ ಪೆಕ್ಕಣ ಲಚ್ಚಣ ಅಪರಿಪಾತ್ರ, ಸುಪಾತ್ರ, ಸರ್ವತೋಭದ್ರವೆಂಬ ದಶವಿಧ ಪಾತ್ರಂಗಳಂ ಬೀರಿ, ಲಯ ಗಾನಾಭಿನಯ ರಸಾಲಂಕಾರ ಭಾವ ಸಾಮರಸ್ಯವಂ ತೋರಿ, ಶ್ರುತಿನಯನಹೃದಯಾಕರ್ಷಣವಂ ಗೆಯ್ವ ನರ್ತಕ ನರ್ತಕಿಯರಿಂದುಪಾಸಿತರಾಗಿ. . . .' ಎಂಬಲ್ಲಿಂದ ಆ ಕಾಲದಲ್ಲಿಯೂ ನಾಟಕಗಳಿದ್ದುವೆಂದು ತಿಳಿಯುತ್ತದೆ.

(೪) ಕರ್ನೂಲು ತಾಲೂಕಿನ ಚರುವು ಬೆಳಗಲ್ಲೆಂಬ ಗ್ರಾಮದಲ್ಲಿಯ ಕೇಶವ ದೇವಾಲಯದ ಒಂದು ಕಂಬದಲ್ಲಿರುವ ಶಾ:ಶ. ೧೪೩೬ ಭಾವ ಸಂ। ವೈಶಾಖ ಹುಣ್ಣಿಮೆಯ, ಅಂದರೆ ಕ್ರಿ.ಶ. ೧೫೧೪ನೆಯ ಇಸವಿಯ ಶಾಸನದಲ್ಲಿ[೨೩] ತಿರುಪತ್ತೂರು ಸೋಮರಸನ ಮಗ ಕರಣಂ ಬಸವರಸನು ಪಾತ್ರಿ ಪೋತವರದ ನಟ್ಟುವ ತಿಂಮಯನ ಮಗಳಿಗೂ, ತಾಯಿಕುಂದ ನಾಟಕದ ಚೀಗಯನ ಮಗ ನಟ್ಟುವ ನಾಗಯ್ಯನಿಗೂ ಭೂಮಿಯನ್ನು ದತ್ತಿಬಿಟ್ಟನೆಂದು ಹೇಳಿದೆ. ನಟ್ಟುವ ಅಂದರೆ ನಟ, ನಾಟಕದ ವೇಷಧಾರಿ. ಆತಏವ ಆಗ್ಗೆ ನಾಟಕ ಕಲೆಗೂ ನಟರಿಗೂ ಪ್ರೋತ್ಸಾಹವಿತ್ತೆಂದು ವಿಶದವಾಗುತ್ತದೆ. ಈ ನಟರೂ ನಾಟಕಗಳೂ

---

೨೨. T. T. Sharman: *Kannada Poets mentioned in Inscriptions* (Memoirs of the Archaeological Survey of India no. 13), ಪು. ೧೯-೨೦.

೨೩. Madras Epigraphical Collection for 1915, no. 558.

ಕನ್ನಡ ಆಗಿರದೆ ತೆಲುಗು ಆಗಿದ್ದರೂ, ಮೇಲೆ ಹೇಳಿರುವ ಮೇರೆಗೆ ಯಾವೊಂದು ಉದ್ಧಿಮೆ ಮುಂಚೆ ಕನ್ನಡದಲ್ಲಿ ಆಗಿದ್ದಿಲ್ಲದೆ ತೆಲುಗಿನಲ್ಲಿ ಆಗಲಿಲ್ಲ ಎಂಬ ಕಾರಣ, ಅದಕ್ಕಿಂತ ಹಿಂದಿನಿಂದಲೇ ಕನ್ನಡದಲ್ಲಿ ನಾಟಕಗಳೂ ನಾಟಕ ಕಲೆಗೆ ಪ್ರೋತ್ಸಾಹವೂ ಇದ್ದಿರಬೇಕು.

ಈ ಕೆಲವು ಉದಾಹರಣೆಗಳಿಂದ ಕ್ರಿ.ಶ. ೧೫೦೦ಕ್ಕೆ ಸಾಕಷ್ಟು ಹಿಂದಿನಿಂದಲೆ ಕನ್ನಡದಲ್ಲಿ ನಾಟಕಗಳು ಇದ್ದುವೆಂಡು ಸಿದ್ಧವಾಗುತ್ತದೆ.

ಗೋವಿಂದ ಪೈ

## ಸುಕುಮಾರ ಚರಿತೆಯಲ್ಲಿ ಕಂಡುಬರುವ ಒಂದು ಷಟ್ಪದ

ಷಟ್ಪದಿಯ ಸೃಷ್ಟಿಗೆ ರಾಘವಾಂಕ ಕವಿಯೇ ವಿಧಾತೃವೆಂಬ ಭಾವನೆ ಬಳಕೆಯಲ್ಲಿದೆ. ಆದರೆ ನಾಗವರ್ಮನು ತನ್ನ ಛಂದೋಂಬುಧಿಯಲ್ಲಿ ಷಟ್ಪದಿಯೊಂದರ ಅಸ್ತಿತ್ವವನ್ನು ಸೂಚಿಸಿ ಅದರ ಲಕ್ಷಣವನ್ನು ಹೀಗೆ ಹೇಳಿದ್ದಾನೆ—

ಮಂದರ ಧರಗಣ
ವೊಂದಿರೆ ಕಡೆಯೊಳ್
ಕುಂದದೆ ನೆಲಸುಗೆ ಮದನಹರಂ
ಇಂದು ನಿಭಾನನೆ
ಮುಂದಣ ತೆಱನೀ
ಯಂದಮೆಯಾಗಲೆ ಷಟ್ಪದಿಕೇಳ್

ಇದನ್ನು ನೋಡಿದರೆ ಛಂದೋಂಬುಧಿಕಾರನ ಕಾಲಕ್ಕೆ ಕನ್ನಡದಲ್ಲಿ ಒಂದು ಷಟ್ಪದಿ ಮಾತ್ರ ಬಳಕೆಯಾಗಿತ್ತೆಂದು ಗೊತ್ತಾಗುತ್ತದೆ. ಇದ್ದುದೇ ಒಂದು ಬಗೆಯಾದ ಷಟ್ಪದಿ ಯಾದುದರಿಂದ ಅದನ್ನು ಬೇರೆಯೊಂದು ಹೆಸರಿನಿಂದ ನಿರ್ದೇಶಿಸಿ ಕರೆಯಬೇಕಾದ ಅಗತ್ಯವಿರಲಿಲ್ಲವೆಂದು ತಿಳಿಯುತ್ತದೆ. ಬೇರೆ ಬೇರೆ ಬಗೆಯ ಷಟ್ಪದಿಗಳು ಹುಟ್ಟಿಕೊಂಡ ಮೇಲೆ ಇದಕ್ಕೆ ಶರಷಟ್ಪದಿಯೆಂಬ ನಾಮಕರಣವಾಗಿರಬೇಕು. ನಾಗವರ್ಮನ ಮತದ ಪ್ರಕಾರ ಷಟ್ಪದಿಯ ಮೊದಲೆರಡು ಸಾಲುಗಳಲ್ಲಿ ಎರಡೆರಡು ವಿಷ್ಣುಗಣಗಳೂ, ಮೂರನೆಯ ಸಾಲಿನಲ್ಲಿ ಎರಡು ವಿಷ್ಣುಗಣಗಳ ಜೊತೆಗೆ ಒಂದು ರುದ್ರಗಣವೂ ಇರಬೇಕು. ಉತ್ತರಾರ್ಧದ ಮೂರು ಸಾಲುಗಳೂ ಪೂರ್ವಾರ್ಧದಂತೆಯೇ.

ಕ್ರಿ.ಶ. ೧೧ನೆಯ ಶತಕದಲ್ಲಿದ್ದ ಜಯಕೀರ್ತಿ ಕವಿ ತನ್ನ 'ಛಂದೋನುಶಾಸನ' ವೆಂಬ ಸಂಸ್ಕೃತ ಗ್ರಂಥದ ಸಪ್ತಮಾಧಿಕಾರದಲ್ಲಿ ಕನ್ನಡ ಛಂದಸ್ಸನ್ನು ಕುರಿತು ಬರೆದಿದ್ದಾನೆ. ಅದರ ಹದಿನೇಳನೆಯ ಪದ್ಯವು ಷಟ್ಪದಿಕಾ ಲಕ್ಷಣವನ್ನು ವಿವರಿಸುತ್ತದೆ :—[ ಜಯಕೀರ್ತಿಯ ಛಂದೋನುಶಾಸನ ಮತ್ತು ಕರ್ಣಾಟಕ ಪ್ರಾಚೀನ ಛಂದಸ್ಸು–ಎಚ್. ಡಿ. ವೇಲಂಕರ್ J.B.B.R.A.S. 1945]

ಸ್ಮರಣಃ ಪರಿತೋತ್ರ
ಶರಗಣಃ ಪುರಷಷ್ಠ
ಚರಣಾಂತಯೋಸ್ತದನ್ತೇ ವಿರಾಮಃ
ಕರಕರ ಪುರಗಣಾಃ
ದ್ವಿರಿಹತ್ಯಾ ಶ್ಚರಣಾಶ್ಚೇತ್
ಸ್ಫುರತಿ ಷಟ್ಚರಣವತ್ ಷಟ್ಪದಿಕಾ

ಜಯಕೀರ್ತಿ ಕವಿಯು ತನ್ನ ಷಟ್ಪದಿ ಲಕ್ಷಣವನ್ನು ಮಾತ್ರವೇ ಅಲ್ಲದೆ ಇಡೀ ಸಪ್ತಮಾಧಿ ಕಾರವನ್ನೇ ನಾಗವರ್ಮನಿಂದ ಎತ್ತಿಕೊಂಡುದೆಂದು ಶ್ರೀಮಾನ್ ಎಚ್. ಡಿ. ವೇಲಂಕರ್ ಅವರು ಊಹಿಸುತ್ತಾರೆ. ಸುಮಾರು ಇದೇ ಕಾಲದಲ್ಲಿಯೇ ಹುಟ್ಟಿದ ಚಂದ್ರರಾಜನ (ಕ್ರಿ.ಶ. ೧೦೨೫) ಮದನತಿಲಕದಲ್ಲಿ ನಾಲ್ಕು ಸಾಲಿನ ಪದ್ಯವೊಂದು ಪ್ರಯೋಗವಾಗಿದೆ. ಇದು ಒಂದೇ ಎಡೆಯಕ್ಕರವೂ, ಕಿಱಿಯಕ್ಕರವೂ, ಚೌಪದಿಕೆಯೂ ಆಗುವುದಲ್ಲದೆ ಷಟ್ಪದಿಯೂ

ಆಗುವುದೆಂದು ಹೇಳಲ್ಪಟ್ಟಿದೆ. ಒಂದು ಷಟ್ಪದಿಗೆ ಸಾಕಾಗಬಹುದಾದ ಆ ಪದ್ಯದ ಮೊದಲ ಎರಡು ಸಾಲುಗಳು ಇವು —

ಅಂಗನೃಪಾಯತಿ । ತುಂಗ ಭುಜಂ ಕಲಿ । ಯಿಂಗಿತ ಶಿಕ್ಷಿತನಿಂದುಯಶಂ ॥
ಪಿಂಗಜದೊಂಗತ । ಭೃಂಗಕಚಂ ಕಲಿ । ಮಂಗಳ ಲಕ್ಷಣಯುಕ್ತನಿವಂ ॥

ಈ ಪದ್ಯವು ನಾಗವರ್ಮನ ಲಕ್ಷಣವನ್ನು ಚಾಚೂ ತಪ್ಪದೆ ಅನುಸರಿಸುತ್ತದೆ. ಈ ಷಟ್ಪದಿ ನಾಲ್ಕು ಮಾತ್ರೆಯ ವಿಷ್ಣುಗಣಗಳಿಂದ ರಚಿತವಾಗಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಮೂರು ಮತ್ತು ಆರನೆಯ ಸಾಲುಗಳ ಕಡೆಯ ಗಣವು ಮಾತ್ರ ರುದ್ರಗಣ ವಾಗಿರುತ್ತದೆ. ಇದನ್ನು ಒಡೆದು ಒಂದು ನಾಲ್ಕು ಮಾತ್ರೆಯ ವಿಷ್ಣುಗಣವನ್ನೂ ಒಂದು ಗುರುವನ್ನೂ ಮಾಡಿಕೊಂಡರೆ ಅದು ಈಚಿನ ಮಾತ್ರಾಗಣದ ಶರಷಟ್ಪದಿ ಲಕ್ಷಣಕ್ಕೆ ಸರಿ ಹೋಗುತ್ತದೆ.

ನಾಗವರ್ಮನು ಷಟ್ಪದಿಯ ಲಕ್ಷಣವನ್ನು ಹೇಳಿರುವನಾದರೂ, ಆತನ ನಿಯಮಕ್ಕೆ ಉದಾಹರಣೆಗಳಾವುವೂ ಆತನ ಕಾಲಕ್ಕಿಂತ ಹಿಂದಿನ ಕವಿಗಳಿಂದ ಇದುವರೆಗೆ ದೊರೆತಿಲ್ಲ. ಇಷ್ಟೇ ಅಲ್ಲ; ರಾಘವಾಂಕ ಕವಿಗಿಂತಲೂ ಮೊದಲು ಷಟ್ಪದಿಯನ್ನು ಬಳಸಿರುವ ಸಮಗ್ರಕಾವ್ಯವಾವುದೂ ಇದುವರೆಗೆ ದೊರೆತಿಲ್ಲ. ಆದರೆ ಶಾಂತಿನಾಥ ಕೃತ ಸುಕುಮಾರ ಚರಿತದ ದ್ವಾದಶಾಶ್ವಾಸದಲ್ಲಿ ಷಟ್ಪದಿಯೊಂದು ಕಂಡುಬರುತ್ತದೆ; ಆತನು ಅದನ್ನು ಷಟ್ಪದವೆಂದು ಕರೆದಿದ್ದಾನೆ. ಆ ಪದ್ಯ ಇದು —

ಅದು ಪರಮಾಸ್ಪದ
ಮದು ಪುಣ್ಯ ಸಂಪದ
ಮದು ಮಹಾಭ್ಯುದಯ ವಿಲಾಸಾವಾಸಂ
ಅದು ದಿಬ್ಯಮದು ಸೇವ್ಯ
ಮದು ಸೌಮ್ಯಮದು ರಮ್ಯ
ಮದು ಸುಖಾಧಾರಸಂಸಾರಸಾರಂ ॥

ಶಾಂತಿನಾಥನ ಪದ್ಯದಲ್ಲಿ ಮೇಲೆ ಉದಾಹರಿಸಿರುವ ಇತರ ಪದ್ಯಗಳಲ್ಲಿ ಕಾಣಬರದ ಒಂದು ವಿಶೇಷ ಸ್ವರೂಪ ಕಂಡುಬರುತ್ತದೆ. ಉಳಿದ ಪದ್ಯಗಳು ಮಾತ್ರಾಗಣದ ಷಟ್ಪದ ದಿಂದ ಹೆಚ್ಚು ಭಿನ್ನವಾಗಿಲ್ಲ; ೮, ೮, ೧೨ ಮಾತ್ರೆಗಳು ಪೂರ್ವಾರ್ಧ ಉತ್ತರಾರ್ಧಗಳ ಸಾಲುಗಳಲ್ಲಿ ಕ್ರಮವಾಗಿ ಕಂಡುಬರುತ್ತವೆ. ಆದರೆ ಸುಕುಮಾರ ಚರಿತದ ಪದ್ಯವನ್ನು ಮಾತ್ರಾಗಣಗಳಿಂದ ಅಳೆದರೆ, ಅದು ಕ್ರಮವಾಗಿ ೮, ೯, ೧೨, ೧೦, ೧೦, ೧೭ ಮಾತ್ರೆಗಳುಳ್ಳ ಪಾದಗಳಿಂದ ಕೂಡಿರುವುದಾಗಿ ಕಂಡುಬರುತ್ತದೆ. ಆದ್ದರಿಂದ ಸುಕುಮಾರಚರಿತದ ಪದ್ಯವು ನಾಗವರ್ಮನ ಸೂತ್ರಕ್ಕೆ ಲಕ್ಷಣವಾಗಿದ್ದ ಪದ್ಯಗಳ ಸ್ವರೂಪವನ್ನು ಸ್ಪಷ್ಟವಾಗಿ ಸೂಚಿಸುತ್ತದೆ ಯೆಂದು ಹೇಳಬಹುದು. ಕಾಲಕ್ರಮದಲ್ಲಿ ನಾಲ್ಕುಮಾತ್ರೆಗಳಿಗಿಂತಲೂ ಹೆಚ್ಚಾದ ವಿಷ್ಣುಗಣ ಗಳನ್ನು ಬಳಸುವುದು ಕಡಮೆಯಾಗುತ್ತಾ ಬಂದಿರಬೇಕು – ಉಚ್ಚಾರಣಾ ಸೌಲಭ್ಯಕ್ಕಾಗಿ. ಇದರ ಫಲವಾಗಿ ರಾಘವಾಂಕನು ಅಂಶಗಣಗಳಿಂದ ಕೂಡಿದ್ದ 'ಷಟ್ಪದ' ವನ್ನು ಮಾತ್ರಾ ಗಣಗಳ ಷಟ್ಪದಿಯಾಗಿ ಪರಿವರ್ತಿಸಿ ಅದರಲ್ಲಿ ಬಗೆಬಗೆಯ ಪ್ರಯೋಗಗಳನ್ನು ನಡೆಸುತ್ತಾ ಹೋಗಿರಬಹುದು.

ತ. ಸು. ಶಾ.

# ಗ್ರಂಥವಿಮರ್ಶೆ

**ಅಗ್ನಿ ಹಂಸ :** 'ಕುವೆಂಪು' ವಿರಚಿತ. ಪ್ರಕಾಶಕರು : ಕಾವ್ಯಾಲಯ, ಮೈಸೂರು. ಕಿರೀಟಾಕಾರದ ಅಷ್ಟದಳ ಪುಟಗಳು viii+೯೮. ಬೆಲೆ : ಸಾದಾಪ್ರತಿ– ರೂ. ೧–೮–೦ ; ಕ್ಯಾಲಿಕೋ ಪ್ರತಿ : ರೂ. ೨–೮–೦.

ಸ್ವಾಮಿ ಸಿದ್ಧೇಶ್ವರಾನಂದರಿಗೆ ಅರ್ಪಿತವಾಗಿರುವ "ಅಗ್ನಿಹಂಸ" ದಲ್ಲಿ ಶ್ರೀ ಕುಪ್ಪಳ್ಳಿ ವೆಂ. ಪುಟ್ಟಪ್ಪನವರ ಆಧ್ಯಾತ್ಮಿಕ ಗೀತೆಗಳು ೪೫ ಅಡಕವಾಗಿವೆ. ಆದಿಯಲ್ಲಿ ವಿಶ್ವಕವಿ ರವೀಂದ್ರನಾಥ ಠಾಕೂರರು ರಾಮಕೃಷ್ಣಪರಮಹಂಸರ ಮೇಲೆ ಹಾಡಿರುವ ಗೀತೆಯ ಸರಳ ಸುಂದರ ಗದ್ಯಾನುವಾದವಿದೆ. ಸ್ವಾಮಿ ವಿವೇಕಾನಂದರ 'ಸನ್ಯಾಸಿಗೀತೆ' ಮತ್ತು 'ಸಮಾಧಿ'ಯ ಅನುವಾದಗಳೊಡನೆ ಶಂಕರಾಚಾರ್ಯರ 'ನಿರ್ವಾಣಷಟ್ಕ'ದ ಪರಿವರ್ತನವಿದೆ. ಇಂಗ್ಲಿಷ್‌ಕವಿ ಫ್ರಾನ್ಸಿಸ್ ಥಾಂಪ್ಸನ್ ಹಾಡಿರುವ ಒಂದು ಗೀತೆಯ ರೂಪಾಂತರವಾದ "ದೇವಕೇತು" ಎಂಬ ಒಂದು ನೀಳ್‌ಗವಿತೆಯೂ ಇದರಲ್ಲಿದೆ. ಶ್ರೀ ರಾಮಕೃಷ್ಣಪರಮಹಂಸರ ಮತ್ತು ಶ್ರೀ ಅರವಿಂದಘೋಷರ ಮೇಲೆಯೂ ಶಾರದಾಮಾತೆ ವಿವೇಕಾನಂದರ ಮೇಲೆಯೂ ಈ ಕವಿಗಳು ರಚಿಸಿರುವ ಗೀತೆಗಳೂ ಇತರ ಆಧ್ಯಾತ್ಮಿಕ ಭಾವಗೀತೆಗಳೂ ಈ ಸಂಕಲನದಲ್ಲಿ ಕಂಗೊಳಿಸುತ್ತಿವೆ. ಕೊನೆಯ ಕವಿತೆ "ಋತಚಿನ್ಮಯಿ ಜಗನ್ಮಾತೆ"ಗೆ ಅರ್ಪಿತವಾಗಿದೆ. ಅದರಲ್ಲಿ ಆಕೆಯನ್ನು "ಗಾಳಿಗುಸುರು ನೀ, ಬೆಂಕಿಗುರಿಯು ನೀ, ನೀನುಪಕಕದರ ಜೀವ, ದೇವರನು ಮಾಡಿನೋಡಿ ಕಾವ ಶಿವನ ಶಕ್ತಿ ನೀ, ವಿಷ್ಣು ಲಕ್ಷ್ಮಿ ನೀ, ಚತುರ್ಭುಜನ ರಾಣಿ" ಎಂದು ಹಾಡಿ ಹೀಗೆ ಕರೆದಿದ್ದಾರೆ:—

"ಹೃದಯಪದ್ಮ ತಾನರಳೆ ಕರೆವೆ ಬಾರಮ್ಮ ಬಾ, ಇಳಿದು ಬಾ !
ಅಗ್ನಿಹಂಸ ಗರಿಗೆದರೆ ಕರೆವೆ, ಬಾ ತಾಯಿ, ಬಾ, ಇಳಿದು ಬಾ !"

ಇಲ್ಲಿ ಬಂದಿರುವ 'ಅಗ್ನಿಹಂಸ' ಶಬ್ದ ಈ ಗೀತಾಗುಚ್ಛಕ್ಕೆ ಹೆಸರನ್ನು ಕೊಟ್ಟಿದೆ. ಅಗ್ನಿಶಬ್ದಕ್ಕೆ "ಮೇಲಕ್ಕೊಯ್ಯುವವ" (ಅಗ್ರಂ ನಯತೀತ್ಯಗ್ನಿಃ) ಎಂದು ಅರ್ಥವಾಗುತ್ತದೆ. ಜ್ಞಾನದ ಉರಿಯಿಂದ ಲೋಕವನ್ನೂ ಚೇತನವನ್ನೂ ಬೆಳಗುವ ಪರಮಪುರುಷನಿಗೂ ಈ ಶಬ್ದ ಹೆಸರು. ಹಂಸವು ವಿವೇಕಿಗಳ ರಾಜ, ಶುದ್ಧ ಸಾತ್ತ್ವಿಕಜ್ಞಾನಮೂರ್ತಿ ಎಂದು ನಮ್ಮ ಸಂಸ್ಕೃತಿಯಲ್ಲಿ ಪ್ರಖ್ಯಾತವಾಗಿದೆ.

ಹಂಸರೂಪಿಯಾಗಿ ಭಗವಂತನು ವೇದವನ್ನು ತಂದು ಬ್ರಹ್ಮನಿಗಿತ್ತು ಉಪಕರಿಸಿದ ನೆಂದು ಪುರಾಣಗಳೂ ಆಚಾರ್ಯರೂ ಹರಿದಾಸರೂ ಕೊಂಡಾಡಿದಾರೆ. ಸನ್ಯಾಸಿಗಳಲ್ಲಿ ಉತ್ತಮರಿಗೆ 'ಪರಮಹಂಸ'ರೆಂದು ಕರೆಯುವ ವಾಡಿಕೆ ಇದೆ. ಈ ಪ್ರಮಾಣಗಳ ಬಲದಿಂದ 'ಅಗ್ನಿ ಹಂಸ' ಎಂಬ ಹೆಸರು ಪರಮಹಂಸನಾದ ಗುರುವಿಗೂ ಪರಮಪುರುಷನಾದ ಭಗವಂತ ನಿಗೂ ಸಂಬಂಧಿಸಿದ ಕವನಗಳ ಈ ಮಾಲೆಗೆ ಒಪ್ಪುತ್ತದೆ ಎಂದು ನಾವು ಹೇಳಬಹುದು.

"ಪ್ರಾಚ್ಯ ಪಾಶ್ಚಾತ್ಯ ತತ್ತ್ವಜ್ಞಾನ ಖನಿಗಳಲ್ಲಿ ತೊಳತೊಳಲಿ ಹುಡುಕಿ ಬಹು ವಜ್ರ ಗಳನಾಯ್ದು ಶ್ರೀಮಂತ"ರಾಗಿರುವ ಈ ಕವಿಗಳು ಬಹಳ ಕಾಲ ಮೈಸೂರಿನ ಶ್ರೀ ರಾಮ ಕೃಷ್ಣಾಶ್ರಮದಲ್ಲಿ ನೆಲಸಿದ್ದು ಪರಮಹಂಸರ ಅಂತರಂಗ ಶಿಷ್ಯರಾದ ಸ್ವಾಮಿ ಶಿವಾನಂದರಿಂದ ದೀಕ್ಷೆಯನ್ನು ಪಡೆದವರು. ವಿಶ್ವವಿದ್ಯಾನಿಲಯದಲ್ಲಿ ಪಂಡಿತರ ನಡುವೆಯೂ ಶಿಷ್ಯರೊಡನೆಯೂ

ದಿನದ ಬಹುಭಾಗವನ್ನು ಕಳೆಯುತ್ತಿರುವವರು. "ನಂಬು ಗುರಿಯಿಹುದೆಂದು, ನಂಬು ಗುರುವಿಹನೆಂದು, ನಂಬು ದಾರಿಯಲಿ ಕೃಪೆ ಕೈಹಿಡಿದು ಪಾಲಿಸುವುದೆಂದು, ಗುರುಭಕ್ತ ನಾನೆಂದು, ಗುರುಶಕ್ತಿ ನನಗೆಂದು ನಂಬು ನಿನ್ನನೆ ನಂಬು, ಮಂತ್ರದೀಕ್ಷಿತಗೆ ಗುರಿ ತಪ್ಪದೆಂದು" ಎಂದು "ಮಲ್ಲಗೀತೆ" ಯಲ್ಲಿ ಹಾಡಿರುವ ಇವರ ಬಾಳಿನ ಬಳ್ಳಿಯಲ್ಲಿ ಅರಳಿದ ಹಲವು ಹೊಸ ಹೂಗಳು "ಅಗ್ನಿ ಹಂಸ" ದಲ್ಲಿವೆ. ನಮ್ಮ ಸಂಸ್ಕೃತಿಯ ಸಾರವನ್ನು ಆದರದಿಂದ ತಿಳಿಯುತ್ತಾ ಜ್ಞಾನದ ಬೆಳಕಿನಿಂದ, ಭಕ್ತಿಯ ತಂಪಿನಿಂದ, ವೈರಾಗ್ಯದ ಕಂಪಿನಿಂದ ನಾಡನ್ನು ಬೆಳಗುವ ದೇಶಭಕ್ತರು ನವಭಾರತದ ಪುನರುಜ್ಜೀವನದ ಕನಸನ್ನು ಕಂಡರು. ಆ ಮಹಾತ್ಮರ ಹಿರಿಯ ಗುಣಗಳೂ ದೇಶಭಕ್ತಿಯೂ ಇಂದಿನ ತರುಣರಿಗೆ ಈ ಗೀತೆಗಳ ವ್ಯಾಸಂಗದಿಂದ ಚೆನ್ನಾಗಿ ಮಂದಟ್ಟಾಗುತ್ತವೆ. ಅನಿತ್ಯವಾದ ವಸ್ತುಗಳಲ್ಲಿ ಜಿಹಾಸೆ ಹುಟ್ಟಿ ದೇವನಲ್ಲಿ ಮನ ಸಕ್ತವಾದರೆ ವಿಷಯಸುಖವನ್ನು ತೊರೆದು ಶಾಸ್ತ್ರದಲ್ಲಿ ಮನವನ್ನಿಡುವುದು ಸುಲಭವೆಂದು ಪೇಯಾಳ್ವಾರ್ ಎಂಬ ತಮಿಳು ನಾಡಿನ ಹರಿದಾಸ ಶಿರೋಮಣಿಗಳು ಹಾಡಿದಾರೆ.

ಕವಿಯಾಗಿ ಹುಟ್ಟಿ ಗುರುಕೃಪೆಗೆ ಪಾತ್ರರಾಗಿ ಹಸನಾದ ಬಾಳನ್ನೆ ನಡಸುತ್ತಿರುವ ಹೊಸಗನ್ನಡದ ಕವಿಗಣದ ಮಧ್ಯೆ ಅಧ್ಯಾಪಕ ವೃತ್ತಿಯಲ್ಲಿರುವವರಲ್ಲಿ ಒಬ್ಬರಾದ ಶ್ರೀ ಪುಟ್ಟಪ್ಪನವರ ಆಧ್ಯಾತ್ಮಿಕ ಜೀವನದ ಬೆಳೆವಣಿಗೆಯನ್ನು ಇಲ್ಲಿನ ಹಲವು ಗೀತೆಗಳು ಸೂಚಿಸುತ್ತವೆ. ಅಂತೆಯೇ ಇವು ವಾಚಕರಲ್ಲಿ ಗುರುಭಕ್ತಿ, ದೈವಭಕ್ತಿ, ದೇಶಭಕ್ತಿ ಮೊದಲಾದ ಸದ್ಗುಣಗಳನ್ನು ಕೆರಳಿಸುತ್ತವೆ. ರಾಮಕೃಷ್ಣಾಶ್ರಮವನ್ನು ಸೇರಿದವರೆಲ್ಲ ಇವರಂತೆಯೇ ಹಾಡುವಂತಾದರೆ ನಮ್ಮ ನಾಡು ಹಿಂದಿನಂತೆ ಬಹುಬೇಗ ಆಧ್ಯಾತ್ಮಿಕವಿದ್ಯಾರಂಗಭೂಮಿಯಾಗುವುದರಲ್ಲಿ ಸಂಶಯವಿಲ್ಲ.

'ಗಣೇಶಗಾಥಾ' ಮತ್ತು 'ಶ್ರೀಕೃಷ್ಣಜನ್ಮಾಷ್ಟಮಿ' ಎಂಬ ಎರಡು ಗೀತೆಗಳು ಬಹು ಸುಂದರವಾಗಿವೆ. ಪ್ರಕೃತಿಯ ರಮ್ಯವಾದ ವರ್ಣನೆ, ಕವಿಗಳ ಕನ್ನಡದ ಪ್ರೇಮ ಮತ್ತು ಗೌರೀಗಣೇಶರಲ್ಲಿ ಆದರ ಇವು ಮೊದಲನೆಯ ಗೀತೆಯಲ್ಲಿ ಎದ್ದುಕಾಣುತ್ತವೆ.

"ಮಕ್ಕಳು ನಾವ್ ಚಿಕ್ಕವರನ್ ಅಕ್ಕರೆಯಿಂದೋವಿ,  
ಪೊರೆ ತಿರೆಯನ್, ಪೊರೆ ನೆರೆಯನ್, ಪೊರೆ ನಮ್ಮನ್ ತಾಯಿ !  
ತಂದೆಯ ಕಾಯ್, ತಾಯಿಯ ಕಾಯ್ ಒಲಪನ್ ಕಾಯ್ ತಾಯಿ !  
ನಮಸ್ಕಾರ, ನಮಸ್ಕಾರ, ನಮಸ್ಕಾರ, ದೇವೀ"  
"ಬುದ್ಧಿಗಣೇಶಾ, ಸಿದ್ಧಿಗಣೇಶಾ, ಬಾರ, ಗಣೇಶಾ, ದೇವಕುಮಾರಾ !  
ವಿದ್ಯಾರ್ಥಿಘುಸಖ, ಹೇವಿದ್ಯಾಸುಖ, ಬಾರ, ವಿನಾಯಕ ಬಾರ"

ಎಂದು ಹಾಡಿ ಅವರನ್ನು – ಲೋಕದ ತಾಯಿ ಗುರುಗಳನ್ನು – ನಂಟರಂತೆ ಕರೆದು ಅವರ ಕಾಲ್ತೊಳೆದು ಉಪಚರಿಸಿ, ಮಾಡಿರುವ ತಿಂಡಿಯನ್ನೂ ತಂದಿರುವ ಹಣ್ಣುಗಳನ್ನೂ ನಿವೇದಿಸಿ, ವೀಣೆ ಪಿಟೀಲು ಮೊದಲಾದ ವಾದ್ಯಗಳನ್ನು ತಂದು ವೈಣಿಕವರ್ಯ, ಗಾಯಕವರ್ಯ ಕವಿಚಕ್ರೇಶರ ಸಭೆಯನ್ನು ಸೇರಿಸಿ ಹೊಸಗನ್ನಡದ ಹೊಸ ಹೊಸ ಹಾಡುಗಳನ್ನು ಹಾಡಿ, ಹಾಡಿಸಿ ತಾವೂ ಕುಣಿದಾಡಿ, ಕೇಳಿದವರನ್ನೂ ನೋಡಿದವರನ್ನೂ ಕುಣಿದಾಡಿಸುವ "ಗಣೇಶಗಾಥಾ" ಹೊಸಗನ್ನಡದ ಕವಿತೆಗಳಲ್ಲಿ ಒಂದು ರತ್ನ. ಗೌರೀಗಣೇಶರು ಇಲ್ಲಿ ವರ್ಷಂ ಪ್ರತಿ ಮನೆ ಮನೆಗೂ ಬಂದು ಎಲ್ಲರನ್ನೂ ಹರಸಿಹೋಗುವ ನಂಟರು ಎಂಬ ನಂಬಿಕೆ ಈ ಪದ್ಯಮಾಲೆಯಿಂದ ಕಿರಿಯರಿಗೂ ಹಿರಿಯರಿಗೂ ಏಕರೂಪವಾಗಿ ಹುಟ್ಟುವುದು. ಇದಕ್ಕಾಗಿ ಕವಿಗಳನ್ನು ಎಲ್ಲರೂ ಅಭಿನಂದಿಸಬೇಕು.

ಶ್ರೀ ಕೃಷ್ಣನು ಜನಿಸಿದ ಕೃಷ್ಣಾಷ್ಟಮಿಯ ವರ್ಣನೆಯೂ ವಸುದೇವನು ನಂದ ಗೋಪನ ಬಳಿಗೆ ಕೃಷ್ಣನನ್ನೊಯ್ದ ವರ್ಣನೆಯೂ ಹೃದ್ಯವಾಗಿವೆ. ಬಾಗಿಲು ತನ್ನಷ್ಟಕ್ಕೆ ತಾನೆ ತೆರೆಯಿತು ; ಕೃಷ್ಣನಡಿಯ ಸೋಂಕಿಗೆ ತರಂಗಿಣಿ ಯಮುನೆ ಸರಿದಳು ; 'ತ್ರಿಭುವನ ಮೋಹನ ಧರ್ಮಸ್ವಾಮಿ, ಸಕಲಾತ್ಮರ ಪರಮಾರ್ಥಪ್ರೇಮಿ' ನಂದಗೃಹದಲ್ಲಿ ಸುಕ್ಷೇಮವಾಗಿ ಸೇರಿದನು, ಎಂದು ಹಾಡುವ ಈ ಗೀತೆಯೂ ಮನೋಜ್ಞವಾಗಿ, ಭಕ್ತ್ಯಾಮೃತವಾಗಿ, ತೋರುವುದು.

ಈ ಕವಿಗಳು ಪೂಜೆನಡೆಯುವೆಡೆಯೇ "ದೇಗುಲ," ಭಕ್ತರ ಹೃದಯವೇ "ಗುರು ಕುಲ," ದೇವರನ್ನು ನೆನೆಯುವವರ ಕುಲವೇ ತಮ್ಮ "ಕುಲ" ಎಂದು ಹೇಳಿಕೊಂಡು ಹೊರಟು ತಮ್ಮ ಮನೋಮಂದಿರಕ್ಕೆ ಎಲ್ಲ ಲೋಕಗುರುಗಳನ್ನೂ ಕರೆದಿದ್ದಾರೆ. ಇವರ ನೆಚ್ಚಿನ ಗುರು ದೇವ ರಾಮಕೃಷ್ಣಪರಮಹಂಸರಿಗೆ 'ಆಹ್ವಾನ' ವೀಯುವ ಗೀತೆಯೂ ರಾಮಕೃಷ್ಣ, ಶಾರದಾ ದೇವಿ, ಸ್ವಾಮಿ ವಿವೇಕಾನಂದ, ಗುರು ಅರವಿಂದರನ್ನುಕುರಿತ ಗೀತೆಗಳೂ ಸಭೆಗಳಲ್ಲಿಯೂ ಮನೆಗಳಲ್ಲಿಯೂ ಪ್ರಾರ್ಥನೆಗೆ ಯೋಗ್ಯವಾಗಿವೆ.

ಗುರುದೇವನ ಅಡಿದಾವರೆಯ ಮಕರಂದವನ್ನು ಕುಡಿಯುವ ದುಂಬಿ ನಾನು ಎಂದು ತಮ್ಮನ್ನು ವರ್ಣಿಸಿಕೊಂಡ ಈ ಕವಿಗಳು ಹೃದಯಪಾತ್ರೆಯಲ್ಲಿ ನಂಬಿಕೆ ತುಂಬಿದ್ದರೆ ಗುರಿ ತಪ್ಪುವುದಿಲ್ಲ ಎಂಬ ಭರವಸೆಯಿಂದ ಕೂಡಿ ಹಿಂದೆ ಕೈಹಿಡಿದು ನಡೆಸಿದಂತೆ ಮುಂದೆಯೂ ಕೈಬಿಡದಿರುವಂತೆ ಬೇಡಿ ಶರಣಾಗತಿ ಮಾಡಿದಾರೆ. ಗುರುವಿನ ಕೃಪೆಗೆ ಅವಸರವಿಲ್ಲ ; ಅದು ಬರುವವರೆಗೆ ಕಾಯಬೇಕು. ತಾಯಿ, ಮಕ್ಕಳ ಮಸಿಯನ್ನು ಗಮನಿಸದೆ ಅವುಗಳನ್ನೆತ್ತಿ ಮುದ್ದಿಡುವಂತೆ ಗುರುವು ಶಿಷ್ಯರ ದೋಷವನ್ನು ಕ್ಷಮಿಸಿ ಕರುಣಿಸಿ ಎತ್ತಿಕೊಳ್ಳಲಿ ! ಎಂದು ಪ್ರಾರ್ಥಿಸಿದ್ದಾರೆ. ಎಲ್ಲ ಅನಿಶ್ಚಯ, ಸುಚಂಚಲ, ಗುರುಭಕ್ತಿಯೊಂದೇ ಬಲ, ಸಕಲತಪೋ ತರುಪರಮಫಲ ಎಂದು ಹಾಡಿರುವ ಗೀತೆ ಆಹ್ಲಾದಕರವಾಗಿದೆ. ಸದಾ ಮನವು ಗುರುವನ್ನು ನೆನೆಯುತ್ತಿರಲಿ ಎಂದು ಮತ್ತೊಂದು ಹಾಡಿನಲ್ಲಿ ಹಾರೈಸಿದಾರೆ. ಇನ್ನೊಂದು ಹಾಡಿನಲ್ಲಿ ದೇವರು ಅನಂತ ಗಾಯಕನೆಂದೂ ವಿಶ್ವವೀಣೆ ಆತನ ಸ್ಪರ್ಶದಿಂದ ಹಾಡುವುದು ಎಂಬ ರಮ್ಯವಾದ ಭಾವನೆ ಇದೆ. ದೇವಕೇತುವಿನ ಸಾರಾಂಶವಿದು :— "ನರರಿಗೆ ತೃಪ್ತಿಯಿಲ್ಲ. ಮಕ್ಕಳು ಮಾತ್ರ ತೃಪ್ತರಾಗಿ ಮುದ್ದುಗಂಗಳಿಂದ ಮಾನವರಿಗೆ ಕೊಂಚಮಟ್ಟಿಗೆ ಸುಖ ಸಂತೋಷ ತೃಪ್ತಿಗಳ ಸವಿಯನ್ನು ತೋರಿಸಬಲ್ಲರು. ಅವನ್ನು ಬಿಟ್ಟರೆ ಪ್ರಕೃತಿಯ ನಂದನ ವನದಲ್ಲಿ ಮಾನವ ಕೊಂಚ ಸುಖ ಸಂತೋಷಗಳ ಅಮೃತವನ್ನು ಕುಡಿಯಬಹುದು. ಭಗವತ್ ಕೃಪೆಯೊಂದೇ, ದೇವನ ವಾತ್ಸಲ್ಯವೊಂದೇ ಮಾನವನಿಗೆ ಸಮಾಧಾನವನ್ನು ತಂದು ಶಾಶ್ವತ ಸುಖ, ಶಾಂತಿಗಳನ್ನು ತರಬಲ್ಲುದು." 'ಸದಾ' ಎಂಬ ಗೀತೆ ಸುಂದರವಾಗಿದೆ. ದೇವನ ಆಶೀರ್ವಾದದ ಪರಿವೇಷ ಭಕ್ತನನ್ನೂ, ಭಕ್ತನ ಭಕ್ತಿಯ ಬಳ್ಳಿಯು ಹೂಗಳಿಂದ ತುಂಬಿ ಭಗವಂತನನ್ನು ಸದಾ ಸುತ್ತಿದ್ದರೆ ಮನಕ್ಕೆ ಶಾಂತಿಗೇನು ಕೊರತೆ ?

'ಮುಕ್ತಮಹಾಪುರುಷನಿಗೆ' ಎಂಬ ಗೀತೆ ಕವಿಗಳು ತಮ್ಮ ಗುರುವಿನ ಮೇಲೆ ಹಾಡಿದ ಚರಮಗೀತೆ. "ಆತ್ಮಕ್ಕೆ ಅಳಿವಿಲ್ಲ ; ಆದುದರಿಂದ ಕಂಬನಿಯ ಕರೆಯುವುದೆ ನಾಸ್ತಿಕತೆ. . . . ಕಾರ್ಯಕಾರಣಯುಕ್ತಿಯಿಂದ ಆತ್ಮ ಅವ್ಯಯ, ಅವಿನಾಶಿ ಎಂದು ತಿಳಿಯಲಾಗುವುದಿಲ್ಲ. ಆತ್ಮಾನುಭವದಿಂದಲೇ ಅದು ತಿಳಿಯುವುದು. ಅಳಿವು ಇರವುಗಳೆರಡು ದಡಗಳಂ ಕೊಚ್ಚುತ್ತ ಜೀವನದಿ ಹರಿಯುತ್ತಿರುವುದು. ಮಾನವನು ಮಾನವನ ಪೂಜೆಗೈಯುವುದು ಜಗದಲ್ಲಿ ಗತಿಯಿಲ್ಲ. ಮಾಯೆ ಬೀಸಿದ ಬಲೆಯ ಬಿಡಿಸುವರೆ ಗುರುಗಳು. ಯುಕ್ತಿ ಬರಿ ತರ್ಕಶಾಸ್ತ್ರದ ಶಕ್ತಿ ; ಭಕ್ತಿಮಾರ್ಗದಿಂ ಧನ್ಯ ; ಅದರಲ್ಲಿ ಸಮಾಧಿ. ಅಧ್ಯಯನ ಸಿದ್ಧಿಯಿಲ್ಲ. ಓದಿದರೆ

ಸಾಲದು; ಸಾಧನೆಗೈಯಬೇಕು. ಧರ್ಮಪ್ರಪಂಚದಲ್ಲಿ ನಾವು ಶಿಶುಗಳು." ರಹಸ್ಯವನ್ನರಿತ ಗುರುಗಳಿಗೆ ಹಸುಳೆಗಳಾಗಿ ಮಾನವರು ಅವರ ಅಡಿಹಿಡಿದು ಧರ್ಮ-ಕರ್ಮ, ಸತ್ಯ-ಪ್ರೇಮ, ಪುಣ್ಯ-ಸೌಂದರ್ಯಗಳ ಮರ್ಮಗಳನ್ನರಿತು ಕಲೋಪಾಸಕರೊಡಗೂಡಿ ನಲ್‌ಬಾಳನ್ನು ಬಾಳಬೇಕೆಂದು ಈ ಗೀತೆ ತಿಳಿಸುತ್ತದೆ. ಈಗಿನ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆಲ್ಲ ಈ ಸಂದೇಶ ಮುಟ್ಟಬೇಕು.

ಗುರುವಿನಲ್ಲಿ 'ಕುವೆಂಪು' ಅವರ ಪ್ರಾರ್ಥನೆ ಇದು:—

"ನೀಡಯ್ಯ, ಓ ಗುರುವೆ, ಋಜುದರ್ಶನವನೆನಗೆ;
ಮೂಢತೆಯ ಮುರಿವ ಸದ್‌ಬುದ್ಧಿಯಂ ಧೈರ್ಯಮಂ;
ಗೂಢ ಚೈತನ್ಯಮಂ ಸವಿಯೆ ರಸದೃಷ್ಟಿಯಂ; ಯುಕ್ತಿಯಂ ವ್ಯವಹಾರಕೆ.
ಹೃದಯದೌರ್ಬಲ್ಯಮಂ ಪರಿಹರಿಸಿ, ಯೋಗಮಂ
ಮಧುರ ಸಾಧನೆಗೈವ ವೀರವೈರಾಗ್ಯಮಂ,
ಸುಧೆವೆರಸಿ ನೀಡಯ್ಯ ಮೃತ್ಯುಮಾಧುರ್ಯಮಂ ಮುಕ್ತಿಯಂ ಪರಮಾರ್ಥಕೆ.

"ರೋರಿಕ್ ಚಿತ್ರಶಾಲಾ ಸ್ಮೃತಿ" "ಅಗ್ನಿಹಂಸ"ದಲ್ಲಿರುವ ಮತ್ತೊಂದು ರಮ್ಯವಾದ ಕೃತಿ. "ಕವನಗಳ್ ಬಿಳಿಕಾಗದದ ಮೇಲೆ ಬರಿಮಸಿಯ ಬೀಳಲ್ತೆ, ಓದರಿಯದಾತಂಗೆ? ಅಂತೆ ಮುಗಿಲುಗಳ್ ಬರಿಯ ನೀರಾವಿಗಳ್" ಜಡಮತಿಗೆ. ರಸಋಷಿಗೆ ಅವು "ಗಗನ ಕವಿ ಕಲ್ಪನೆಯ ಸಂಜೀವ ಭಾವಗಳ್, ತಿರೆಗೆ ಸಗ್ಗದ ಸೆರಗು ಸನ್ನೆಗಳ್; ಆಕಾಶಪುಸ್ತಕದ ಅತ್ಯ ನಿರ್ವಚನೀಯ ದೇವಭಾಷಾದೃಶ್ಯ ಕಾವ್ಯಗಳ್!...ಕಣ್ಮುಚ್ಚಿ ಕಾಣೆ ಕಲಿಯಲ್ ಪರಬ್ರಹ್ಮ ದರ್ಶನವೀವ ವೇದಮೇಣುಪನಿಷತ್ತುಕ್ಕುಮಿಾ ಬಾನ್ಮುಗಿಲ್" ಎಂಬ ಕವಿಯ ಉಕ್ತಿಗಳು ಸರಸ ಮಧುರವಾಗಿವೆ.

ಶ್ರವಣಬೆಳ್ಗೊಳದ ಗೋಮಟ ಗುರುವನ್ನು ಕಂಡು ಕವಿ ಹೀಗೆ ಹಾಡಿದ್ದಾರೆ:—

"ಎಳ್ಳು ನೀರಹುದಿಲ್ಲಿ ಹೀನತೆಗೆ, ನೀಚತೆಗೆ;
ಬೆಳೆ ನೀರು ಭವ್ಯತೆಗೆ, ದಿವ್ಯತೆಗೆ. ಇಲ್ಲಿ ಬಾಯಿಗೆ ಬೀಗ!
ನುಡಿಗೆ ಮೌನದ ಸಿಡಿಲು ಹೊಡೆದಂತಿರುವುದೀಗ!"

"ನಿಜಮಹಿಮೆ ನಗ್ನತೆಗೆ ಅಳುಕಬೇಕಾಗಿಲ್ಲ; ಕೀಳ್ಗಳಿಗೆ ವೇಷವಿಲ್ಲದೆಯೆ ಗೌರವವಿಲ್ಲ." ನಿಜ. ಆದರೆ "ಸತ್ಯದ ದಿಗಂಬರತೆಗೆ" ಒಲಿದು ಗೋಮಟೇಶ್ವರನನ್ನು ಹೊಗಳುವ ಭರದಲ್ಲಿ ಜಿನಾಗಮವನ್ನಂಗೀಕರಿಸದ ಭಾರತೀಯ ಧರ್ಮಾನುಯಾಯಿಗಳ ವೇಷಭೂಷಣಗಳನ್ನು ತೆಗಳಲು ಹೊರಟಿರುವುದು ಉಚಿತವಲ್ಲ. "ಕಾವಿ, ರುದ್ರಾಕ್ಷಿ, ವೈರಮುಡಿ, ಜರಿಯಮುಡಿ" ಗಳಿಗೂ ಒಂದು ಬೆಲೆ ಇದೆ. "ಸತ್ಯವೇ ಸೌಂದರ್ಯ" ಎಂಬ ಕವಿವಾಣಿಯನ್ನು ಈ ಕವಿಗಳು ಈ ಪದ್ಯವನ್ನು ರಚಿಸುವಾಗ ಮರೆತುಬಿಟ್ಟರೋ ಏನೋ! ಕಲಿಯುಗವನ್ನು ಧನ್ಯವೆಂದು ಕೊಂಡಾಡುವ ನಾಗರಿಕ ದೇವಭಾವದ ಈ ಕವಿಗಳಿಗೆ ನಮ್ಮ ಸಂಸ್ಕೃತಿಯ ಸಂಕೇತಗಳನ್ನು, ಪವಿತ್ರವಸ್ತುಗಳನ್ನು ತೆಗಳುವುದು ತರವಲ್ಲ. ಒಬ್ಬರನ್ನು ಹೊಗಳುವಾಗ ಮತ್ತೊಬ್ಬರನ್ನು ತೆಗಳದಿರುವುದು ನಾಗರಿಕತೆಯ ಮತ್ತು ಸಭ್ಯತೆಯ ಲಕ್ಷಣ. ಸರ್ವ ಧರ್ಮ ಸಮನ್ವಯಾ ಚಾರ್ಯರಾದ ರಾಮಕೃಷ್ಣ ಪರಮಹಂಸರ ಶಿಷ್ಯರ ವಾಣಿಗೆ ಇದು ತಿಳಿಯದ ಮಾತಲ್ಲ: ಆದರೂ ವಿಮರ್ಶಕರು ಔಚಿತ್ಯ ವಿಚಾರವನ್ನು ಮಾಡಲೇಬೇಕಷ್ಟೆ!

"ತನು ನಿನ್ನದು, ಮನ ನಿನ್ನದು, ಎನ್ನಜೀವನಧನ ನಿನ್ನದು, ನಾನು ನಿನ್ನವನೆಂಬ ಹೆಮ್ಮೆ ಇರಬೇಕು" ಎಂದು ಪರಮಹಂಸರು ಉಪದೇಶಿಸಿದಾರೆ. ಜನರ ನುತಿಗೆ ಹೆಮ್ಮೆಪಡದೆ, ಭಕ್ತಿಯಿಂದ ಗುರುವನ್ನು ಆಶ್ರಯಿಸಿ, ಭಗವನ್ತನನ್ನು ನಾವು ಪೂಜಿಸಬೇಕು. ಎಲ್ಲರಲ್ಲೂ ದೇವನಿರುವುದರಿಂದ ದೀನರ ಸೇವೆಯನ್ನು ಸಾಧಕನು ಗೈಯಬೇಕು. ದೇವನನ್ನು ಮರೆಯುವ ಸುಖ ಬೇಡ. "ಮಮತೆಯ ಬಿಡು, ಹೇ ಮೂಢಮನಾ, ನಿನ್ನನೆ ನೈವೇದ್ಯವ ನೀಡು" ಭಯವಿಷಾದಗಳನ್ನು ಬಿಡು. "ಆರತರತಮ ಗುರು ಆತ್ಮ ತಮೋಹಾರಿ" ಇಡುವ ಅಡಿಯ ಪುಡಿಯ ಬಡತನವೆ ಕಡವರ (ನಿಧಿ), ಅವನಡಿಗೆ ದೂರ ಇರುವ ಧನಿಕನೂ ದೀನನೇ. "ಗುರುವು ನಮ್ಮ ಅಹಂಕಾರವನ್ನು ಒತ್ತಿ ತುಳಿಯಲಿ! ನಮ್ಮ ಅಲ್ಪತ್ವವಳಿಯುವಂತೆ ಅನಂತನು ಬಂದು ಆಕ್ರಮಿಸಲಿ! ದೇವನಾಗುವವರೆಗೂ ಜೀವ ಹಾರೈಸಲಿ! ನಮ್ಮ ಹೃದಯದಲ್ಲಿ "ಸತ್ಯಾವತಾರ ಸೃಷ್ಟಿಲೋಲ ಸಚ್ಚಿದಾನಂದಶೀಲನು ಸಂಭವಿಸಲಿ!" ಎಂದು ಕವಿಗಳು ಬಗೆ ಬಗೆಯ ಸಿಂಗರದ ನುಡಿಗಳಿಂದ ಇಂಪಾಗಿರುವ ಹಲವಾರು ಗೀತೆಗಳನ್ನು ಹಾಡಿದಾರೆ. "ಮುಚ್ಚು ಮರೆಯಿಲ್ಲದೆಯೆ ಅಂತರಾತ್ಮನ ಮುಂದೆ ಎಲ್ಲವನ್ನೂ ಬಿಚ್ಚಿಟ್ಟು" ಹೀಗೆ ಅವರು ಕೋರುತ್ತಾರೆ.

ನನ್ನ ನೀತಿಯ ಕುರುಡಿನೆಂದೆನ್ನ ರಕ್ಷಿಸಯ್ ;
ನಿನ್ನ ನೀತಿಯ ಬೆಳಕಿನಾನಂದಕೊಯ್ !"

ಇದು ಎಲ್ಲ ಭಕ್ತರ ಪ್ರಾರ್ಥನೆಯೂ ಆಗಿದೆ.

'ಸಭ್ಯತಾ ದೇವತೆ' ಮಹಾತ್ಮಾ ಗಾಂಧಿಯವರು ಸರಳಜೀವನದಿಂದ ಉದಾತ್ತ ಭಾವನೆಗಳ ಅನುಷ್ಠಾನದಿಂದ ಲೋಕದ ಜನರ ಮುನ್ನಡೆಗಾಗಿ ಶ್ರೇಯಸ್ಸಿಗಾಗಿ ದುಡಿದು ದೇವತೆಗಳಂತೆ ಪೂಜೆಯನ್ನು ಕೈಕೊಳ್ಳುತ್ತಿರುವುದನ್ನು ತಿಳಿಸುತ್ತದೆ. ಆದರೆ ಕವಿಗಳು ಇಲ್ಲಿಯೂ "ಮನುಜರಂತೆಯೆ ಬಾಳಿ ಹೋರಾಡಿ ಸಂದವರ"ನ್ನು ಹೊಗಳುವ ಭರದಲ್ಲಿ ಮತ್ಸ್ಯ ಕೂರ್ಮಾದಿ ನರಸಿಂಹರನ್ನು ಭಯ ಭಕ್ತಿಯಿಂದ ಪೂಜಿಸುವ"ವರು "ಅನಾಗರಿಕ ಮಾನವ ದೇವ ಭಾವಗಳೆಂದು" ನುಡಿದಿರುವುದು ಎಲ್ಲರಿಗೂ ಒಪ್ಪಿಗೆಯಾಗಲಾರದು. ಲೋಕೋಜ್ಜೀವನಕ್ಕಾಗಿ ವಾತ್ಸಲ್ಯದಿಂದ, ಆಶ್ರಿತಪಕ್ಷಪಾತದಿಂದ, ನಾನಾ ಯೋನಿಗಳಲ್ಲಿ ದೇವರು ಅವತರಿಸಿದನೆಂದು 'ವೈದಿಕದರ್ಶನ' ಸಾರುತ್ತಿರುವುದನ್ನರಿತೂ ಈ ಕವಿಗಳು ಹೀಗೆ ನುಡಿದಿರುವುದು ವಿಷಾದಕರವಾಗಿದೆ. "ಶತಮಾನ ಸಂಧ್ಯೆ" ಅಗ್ನಿಹಂಸದ ಗೀತೆಗಳಲ್ಲಿ ಮತ್ತೊಂದು ಸುಂದರವಾದ ಕಾವ್ಯ. ರಾಮಕೃಷ್ಣಪರಮಹಂಸರ ಸಂದೇಶದಿಂದ ಬಹಳ ಜೀವಿಗಳ ಉದ್ಧಾರವಾಗಿದೆ. "ಜನರ ಮನ ವಿಸ್ತರಿಸಿ ಪರಮಾತ್ಮನ ಅಸ್ತಿತ್ವದಲ್ಲಿ ರಸ ಪೂರ್ಣಾಸ್ತಿಕ ಬುದ್ಧಿಯುಂಟಾಗಿದೆ" ಎಂದು ಕವಿ ನುಡಿದಿರುವುದು ನಿಜ. ಆ ಗುರುದೇವನ ದಯೆಯಿಂದ ಇನ್ನೂ ಬಹಳ ಜನ ಬಾಳಿನ ಬೆಳಕನ್ನು ಕಂಡು ಉದ್ಧಾರವಾಗುವರು.

"ಅಗ್ನಿ ಹಂಸ" ಹೊಸಗನ್ನಡದ ತರುಣರಿಗೆ ಆಧ್ಯಾತ್ಮಿಕ ನವನೀತದ ಸಾರವನ್ನು ಕುಡಿಸಲಿ! ವೃದ್ಧರಿಗೆ ಆನಂದದ ತೃಪ್ತಿಯನ್ನೀಯಲಿ! ಈ ಪುಸ್ತಕದ ಬೆಲೆ ಹೆಚ್ಚೆಂದೇ ಹೇಳಬೇಕು.

— ಆ. ನ. ಶ್ರೀನಿವಾಸೈಯಂಗಾರ್

**ಮೇಘನಾದ:** ಕವಿಗಳು: ಶ್ರೀ ಬಿ. ಎಚ್. ಶ್ರೀಧರ, ಎಂ.ಎ. ಪ್ರಕಾಶಕರು: ಶ್ರೀ ಎಚ್. ಎಸ್. ದೊರೆಸ್ವಾಮಿ, ಬಿ.ಎಸ್‌ಸಿ.: ಮಾರಾಟಗಾರರು: "ಸಾಹಿತ್ಯ ಮಂದಿರ", ಮೈಸೂರು. ಕಿರೀಟಾಕಾರದ ಅಷ್ಟದಳ ಪುಟಗಳು: ii + ೭೨ ಬೆಲೆ: ಒಂದು ರೂಪಾಯಿ.

'ಜೀವನ'ದ ವಾಚಕರಿಗೆ ಶ್ರೀಧರರ ಕವಿತೆಗಳು ಅಪರಿಚಿತವಲ್ಲ. "ಕರ್ಣಾಟಕ ನಂದನವನ. ಪ್ರಕೃತಿಗಿಲ್ಲಿ ಚಿರಯೌವನ. ಆತ್ಮ ಆತ್ಮ ಮಾತಾಡುವ ಮನೆಯಿದು. ಧಾತ್ರಿ ದೇವಿಯೆಡೆಯ ತೆನೆಯ ಸೊಬಗಿದು" ಎಂದು ಹಾಡಿರುವ ಈ ಕವಿಗಳ ಮೂವತ್ತೆರಡು ಕವನಗಳು ಈ ಸಂಗ್ರಹದಲ್ಲಿವೆ. ಈ ಕವನಮಾಲೆಯ ನಾಯಕರತ್ನದಂತೆ ಕಂಗೊಳಿಸುವ "ಸೌಂದರ್ಯ ಸೂಕ್ತ"ದ ಒಂದು ಸಾಲಿನಿಂದ ಈ ಕೃತಿಗೆ 'ಮೇಘನಾದ' ಎಂಬ ಹೆಸರು ಬಂದಿರುವಂತೆ ತೋರುತ್ತದೆ. "ಬಾಗಿದ ಮೇಘದ ಘನತರ ಸರವೇ ಕೂಗುತ ತೆರೆ ತೆರಿ ತೆರೆಯುತ ಬಾಳ!" ಎಂದು ಈ ಕವಿಗಳು ಸುಮಕೋಮಲೆಯಾದ ಸಾರಸ್ವತ ಸೌಂದರ್ಯ ಮೂರ್ತಿಗೆ ಆಹ್ವಾನವಿತ್ತಿದಾರೆ.

ಸನ್ಮಿತ್ರರೇ ಬಾಳಿನ ಬೆಳಕು. ನಮ್ಮಲ್ಲಿ ದೇವರನ್ನು ಗೆಳೆಯನೆಂದು ಪೂಜಿಸುವುದುಂಟು. ಕೈಹಿಡಿದವಳಂತೂ ಬಾಳಿನ ಗೆಳತಿಯೇ ಆಗಿರುವಳು. ಹೊಟ್ಟೆಯಲ್ಲಿ ಹುಟ್ಟಿದ ಮಗನನ್ನೂ ಹದಿನಾರು ವರ್ಷಗಳು ತುಂಬಿದ ಮೇಲೆ ಗೆಳೆಯನಂತೆ ಕಾಣಬೇಕೆಂದು ನೀತಿ ಶಾಸ್ತ್ರ ಹೇಳುತ್ತದೆ. ಈ ಮಾತುಗಳಿಂದ ಗೆಳೆತನ ಬಾಳಿನಲ್ಲಿ ಬಹಳ ಪವಿತ್ರವೂ ಅಮೂಲ್ಯವೂ ಪೂಜ್ಯವೂ ಆದ ಮಧುರ ಸಂಬಂಧ ಎಂದು ವ್ಯಕ್ತವಾಗುತ್ತದೆ.

ಧಾರವಾಡದ "ಗೆಳೆಯರ ಗುಂಪು" ಮಾಡಿರುವ ಕೆಲಸಗಳಲ್ಲಿ ಸಾಹಿತ್ಯ ಪ್ರೇರಣೆ ಮತ್ತು ಸಾಹಿತ್ಯ ಸಂಗ್ರಹ ಮುಖ್ಯವಾದವು. "ಅಂಬಿಕಾತನಯ ದತ್ತ"ರ ಮಿತ್ರವರ್ಗದಲ್ಲಿ ಸೇರಿದ "ಶ್ರೀಧರ"ರ ಈ ಕವಿತಾ ಸಂಗ್ರಹ ಕನ್ನಡನಾಡಿನಲ್ಲಿ ಚಿರಕಾಲ ನಿಲ್ಲುವುದು ಎಂದು ಅದರ ಪರಿಶೀಲನೆಯಿಂದ ಧೈರ್ಯವಾಗಿ ಹೇಳಬಹುದು. "ಕವಿಕುಲಗುರು" ಕಾಳಿದಾಸನ ಯಕ್ಷನು ಮೇಘದಮೂಲಕ ತನ್ನ ಗೆಳತಿಗೆ ಸಂದೇಶವನ್ನು ಕಳುಹಿಸಿದಾನೆ. ಆಳ್ವಾರುಗಳು ಮೋಡವನ್ನು ಕಂಡು ಪರವಶರಾಗಿ ಹಾಡಿದಾರೆ. ಆಂಡಾಳ್ ತಿರುಪತಿಯ ವೆಂಕಟೇಶನ ಬಳಿಗೆ ಮೋಡಗಳನ್ನು ದೂತರಾಗಿ ಕಳುಹಿಸಿದಾಳೆ. ಹೀಗೆ ಮೊದಲಿಸಿಂದಲೂ ಕವಿಗಳಿಗೂ ಮುಗಿಲುಗಳಿಗೂ ಒಂದು ಬಗೆಯ ಆತ್ಮೀಯ ಸಂಬಂಧ ಕಂಡುಬರುತ್ತದೆ. "ಗೆಳೆತನದ ಮಧುಪಾನವನ್ನುಮಾಡಿದ, ಮಾಡುತ್ತಿರುವ ಮತ್ತು ಎಷ್ಟು ಪಾನಮಾಡಿದರೂ ತಣಿಯದ ತವೇಕ ಮಗ್ನವಾದ ಹೃಯ"ವುಳ್ಳ 'ಶ್ರೀಧರ'ರು ಸಹೃದಯ ನೇಹಿಗರಿಗೆ "ಅರ್ಪಿಸಿರುವ ಈ ಕಲಾಕೃತಿಗೆ ಮೇಘನಾದ ಎಂದು ಹೆಸರಿಟ್ಟಿರುವುದು ಉಚಿತವಾಗಿದೆ. "ನನ್ನ ನುಡಿ"ಯಲ್ಲಿ ಕವಿಗಳು ಗೆಳೆತನದ ಹಿರಿಮೆಯನ್ನೂ ಸಹೃದಯನಿಗಿರಬೇಕಾದ ಸಹಾನುಭೂತಿಯ ಲಕ್ಷಣವನ್ನೂ ಸ್ಪಷ್ಟವಾಗಿ ತಿಳಿಸಿದಾರೆ. ಮಿತ್ರರ "ಸುಧಾಸ್ಯಂದಿಯಾದ ಸಹೃದಯತೆಯಿಂದ" ರಸಿಕರೆಲ್ಲರ ಜೀವಗಳೂ ಬೆಳಕನ್ನು ಕಂಡು ಚೆಲುವಿನ ಸವಿಯನ್ನುಂಡು ಆನಂದದ ಕಡಲಿನಲ್ಲಿ ಈಸಾಡುತ್ತವೆ. ಇಂತಹ ಸುಂದರವಾದ ಗೀತೆಗಳ ಮಾಲೆಗಳನ್ನು ಹೆಣೆದು ಸಹೃದಯರಿಗೆ ನೀಡುತ್ತಾ "ಶ್ರೀಧರ"ರು ಚಿರಕಾಲ ಕನ್ನಡ ನುಡಿಯ ದೇವಿಯ ಸೇವೆಗೈಯುತ್ತಿರಲಿ!

'ಮೇಘನಾದ'ದಲ್ಲಿ ಕಂಡುಬರುವ ಕಲ್ಪನಾವಿಲಾಸವೂ ಶಬ್ದಸಂದರ್ಭವೂ ಶೈಲಿಯ ಸರಳತೆಯೂ ರಸಿಕರ ಮನವನ್ನು ಬೇಗ ಸೆಳೆಯುತ್ತವೆ. ಛಂದೋವೈವಿಧ್ಯದಂತೆಯೇ ಹಳಗನ್ನಡದ ಆದಿಪ್ರಾಸವೂ ಹೊಸಗನ್ನಡದ ಅಂತ್ಯಪ್ರಾಸವೂ ಇದರ ಕವನಗಳಲ್ಲಿ ಸಮರಸವಾಗಿ ಬೆರೆತಿವೆ. ಈ ಕವನಗಳನ್ನು ಸ್ನೇಹಗೀತೆಗಳು, ಪ್ರಕೃತಿಗೀತೆಗಳು, ಶಿಶುಗೀತೆಗಳು,

ಮತ್ತು ರಾಷ್ಟ್ರಗೀತೆಗಳೆಂದು ಐದು ಸಂಗಡಗಳಾಗಿ ವಿಂಗಡಿಸಬಹುದು. ಅನೇಕ ಕವಿತೆಗಳಲ್ಲಿ ದಿನದ ಬಳಕೆಯ ಮಾತಿನಲ್ಲಿ ಉದಾತ್ತಭಾವನೆಗಳು ರಮ್ಯವಾಗಿ ವರ್ಣಿತವಾಗಿರುವ ಈ ಕವನ ಮಾಲೆ ಎಲ್ಲರಿಗೂ ಪ್ರಿಯವಾಗುವುದರಲ್ಲಿ ಸಂಶಯವಿಲ್ಲ. ಇಂತಹ ಕವಿತೆಗಳು ಎಷ್ಟಿದ್ದರೂ ಬೇಕು. ಕೆಲವು ಸುಂದರವಾದ ಸೂಕ್ತಿಗಳನ್ನಿಲ್ಲಿ ಉದಾಹರಿಸಬಹುದು.

"ಎಷ್ಟು ಫಲವಿರಲೇನು ? ವಿಧಿಬಂದವುಂಕಿಪರೆ
ಕೆಟ್ಟ ನರ, ಹರಹರಾ, ಹೇಳಲೇನು !

*   *   *

ದೇವ ಧರ್ಮವಿಚಾರ ಸತ್ಯತೆ ಸದಾಚಾರ
ಯಾವುದಿದ್ದರು ಉಂಡ ಹೊಟ್ಟೆಗೆಲ್ಲ.

*   *   *

ಮಧುರ ಮಧುರ ಮಧುರ ಮಧುರ ಮೈತ್ರಿಯೊಂದೆ ಮಧುರ
ಆದರ ನುಡಿಯ ಸವಿಯದವನು ಕಿವಿಯಿದ್ದೂ ಬಧಿರ

*   *   *

ಆಪ್ತ ಜೀವದ ನೆಚ್ಚಿಗಿಂತಮೃತ ಬೇರಿಲ್ಲ ;
ಅದನುಂಡು ತಣಿ ಜೀವಿ, ಹಾರಿಲ್ಲದೊಡೆ ಭಾವಿ.
ಅದೆ ಭುಕ್ತಿ ಅದೆ ಶಕ್ತಿ, ಅದೇ ಜೀವನಾಧಾರ,
ಮುದವೀವ ಮಂದಾರ ಕಮಲಿನೀಕಾಸಾರ-
ಅದು ಲಭಿಸೆ ಬಾಳು ಹೊಂಬಾಳು ; ಕಳೆದೊಡೆ ಹಾಳು !

*   *   *

ಕೊಂದು ತಿನ್ನುವ ಹುಲಿಗೆ ದಯೆಯನುಪದೇಶಿಸಲು ಫಲವೇನು ? . . .
ದಂತವಳಿದರು ದರ್ಪವಳಿದೀತೆ ಸರ್ಪಕ್ಕೆ ?

*   *   *

ಆಳಿನಂಟು ಬೇಕೆಂದೊಡೆಲ್ಲೆಲ್ಲಿಯೂ ಉಂಟು,
ಉಳಿನಂಟು ದಿವಿಜರಿಗು ವಿರಳವೈ.

*   *   *

ಎವೆಯಿಕ್ಕದೆಳನೀರ ನೋಡೆ ರುಚಿ ತಿಳಿದೀತೆ ?
ಕವಿಯಾದರವನ ಹೆಚ್ಚೇನು ?
ನವನವೋನ್ಮೇಷಶಾಲಿಗಳಿಗೂ ಅನುಭವದ
ಕವನಕಾರರ ಮಾತೆ ಜೇನು !

*   *   *

ಬಲು ಹೆದರಿ ಹೆದರಿ ನಡೆವಾತ ಸಾವನಕ
ಹೆದರಿ ಸಾಯಬೇಕು.

*   *   *

ಈ ಪ್ರಕೃತಿಯನ್ನು ಗೆದ್ದಾಳ ಬಯಸುವನಗೆ
ಪುರುಷಕಾರ ಬೇಕು ;
ಸ್ವಪ್ರಕೃತಿಯಾದ ದುರ್ದಮ್ಯ ತೇಜವನು
ಬೆಳಗಿ ತೋರ ಬೇಕು !

ಮೇಘನಾದದ ಮೊದಲ ಗೀತೆ "ಗುರುವಿನ ಅಡಿದಾವರೆಯ"ಲ್ಲಿ ಎಂಬುದು. "ಅಂಧಕಾರದಲಿ ಮಿಂಚು ಮೂಡಿ ಬರುವಂತೆ ಬಂದ ಬಂಧು"ವಾದ ಗುರುವನ್ನು "ಹುರುಪೆ ಇಲ್ಲದೀ ತಿರುಪೆ ಬಾಳಿನಲ್ಲಿ" ಮರೆಹೊಕ್ಕು ಈ ಕವಿ "ಕವಿ ಕನುಲೋಕ್ಷವ ಭಾಮಿನಿ"ಗೆ ಆಹ್ವಾನ

ವೀಯುತ್ತಾರೆ. ಆಕೆಗೆ "ಭಾವವೆ ನಗೆ, ಮೇಣ್ ನವರಸವೆ ಒಳಬಗೆ, ಜೀವದುಸಿರು ಪ್ರತಿಭಾಶಕ್ತಿ, ಹಾವವೆ ಸುಂದರ ಶೈಲಿ, ವಿಭೂಷಣ ಭೂಷಣ, ಗುಣವರ್ಥವ್ಯಕ್ತಿ". ಆಕೆ ಯೋಗಿಗಳು ಧ್ಯಾನದಿಂದ ಪಡೆಯುವ ಸುಖವನ್ನು ಸಹೃದಯರಿಗೆ ಸುಲಭವಾಗಿ ದೊರಕಿಸಿ ಕೊಡುವಳು. ಕವಿ "ಪುಟ್ಟದೊಂದು ಪಟ್ಟಣದಲ್ಲಿ ತನ್ನ ಪುಟ್ಟ ಬಾಳ ಬೆಳಗಿ ದಿಟ್ಟತನದಿ ಸರಸವಾಡುತ" ಇದ್ದುದನ್ನೊಂದು ಪದ್ಯ ರಮ್ಯವಾಗಿ ವರ್ಣಿಸುತ್ತದೆ. ಬಾಳಿನಲ್ಲಿ ಏಳಿಳಿತ ಗಳು ಸಹಜವೆಂದು ಸೋದಾಹರಣವಾಗಿ "ಎಷ್ಟು ಛಲವಿರಲೇನು . . . ." ಎಂಬ ಕವನ ತಿಳಿಸುತ್ತದೆ. "ಜೀವ ಜೀವಕೂ ನಂಟನು ಬೆಸೆಯಲು ಬಾರ ಬಾ ಮನವೆ ದುಂಬಿಯೊಲು" ಎಂದು "ಮನದುಂಬಿ"ಗೆ ಕವಿ ಪ್ರಾರ್ಥಿಸುತ್ತಾರೆ. "ಹಳೆಯ ಜೀವನ ಸೂತ್ರ ಹರಿದು ಹಾಳಾಯ್ತು ; ಹುಳಿತು ಹಳಸಿದ ಹಿಟ್ಟಿನಂತೆ ಬಾಳಾಯ್ತು. ತುಕ್ಕುಹಿಡಿದಿದೆ ಬುದ್ಧಿಯಲಗು, ಸಿಕ್ಕದಾಯ್ತು ತ್ಯಾಗಬಲೆಗು. . . . .ಪ್ರಾಣನರೆಯಾಯ್ತು ; ಪುರುಷಾರ್ಥ ಸುಕ್ಕಾಯ್ತು, ಕಾಲಾಣೆ ಬೆಲೆಗಿಳಿಯಿತೇ ಜೀವನದ ವರ್ತನೆಯು" ಎಂದು ಮರುಗಿ "ನೆಲೆನಿಂತ ಕೊಳೆನೀರ ತೊಳೆಬೀಸಿ" ಎಂದು ಬಿರುಗಾಳಿಗೆ ಕವಿ ಆಹ್ವಾನವೀಯುತ್ತಾರೆ. "ಕಟ್ಟು ಕಟ್ಟಳೆಯೆಲ್ಲ ಬೇಕು ; ಆದರೂ ಗುಟ್ಟರಿದು ಬದಲಿಸಲು ಬೇಕು" ಎಂದು ಈ ಕವಿಗಳ ಸೂತ್ರ ನವಭಾರತದ ಪುನರುಜ್ಜೀವನದ ಝುಂಝಾವಾತದ ಸಂದೇಶವನ್ನು ಸಾರುತ್ತದೆ. "ಎದೆಯ ರಾಣಿಗೆ" ಎಂಬ ಕವಿತೆ ವಿರಹದುರಿಯಿಂದ ಬೆಂದ ನಲ್ಲನ ಅಳಲನ್ನು ತೋಡಿದರೆ ಅದರ ಮುಂದಿನ "ದೀನ ಲಕ್ಷ್ಮಿಯೆ ಬಾರ" ಎಂಬ ಗೀತೆ ನಮ್ಮ ನಾಡಿನ ಬಡತನದ ಚಿತ್ರವನ್ನು ಕಣ್ಮುಂದೆ ನಿಲ್ಲಿಸಿ ಓದುಗರ ಮನವನ್ನು ಕರಗಿಸುತ್ತದೆ. "ಈ ಜಗದ ಬೆಳಕೆಂಬ ಕತ್ತಲೆಯ ಕಂಡು ಮನ ಸೋತು ಮುದವೆಂದು" ಕುಗ್ಗದೆ ಆಡಿದವರಿಗೆ ಅದು "ಮುದದ ನೆರಳೆಂದು ನೊಂದು ಮಿಡು ಕುವ ಪಾಡು ಬಂತು". ಆಗ ಕವಿ ಹೀಗೆ ಹೇಳುತ್ತಾ ಮರುಗುತ್ತಾರೆ :—

"ದೀನ ಲಕ್ಷ್ಮಿಯೆ ಬಾರ, ದಯೆಯ ಭಿಕ್ಷುಕ ಕರೆವ
  ಕಾನನವೆ ಗತಿಯೆಮಗೆ ಪೋಪ ಬಾರ ;
ಮಾನವಂತರ ಜಗವು ನಮಗಲ್ಲ ; ನಮಗಿಲ್ಲ
  ಹೀನತೆಯ ತಿರಿದುಂಬ ತಂಗಿ ಬಾರ !"

"ಅಯ್ಯೊ ನನ್ನ ಮೆಚ್ಚುಗಳಿರಾ ! ನಿಮ್ಮೊಳೊಬ್ಬ ಗೆಳತಿಯನ್ನು ಬರುವನಂತೆ ನೋಡಲು ವರ. ಜೀವನದಲ್ಲಿ ಇದೇ ಮಧುರ ಬೇರೊಂದಿಲ್ಲ" ಎಂದು ಒಂದು ಗೀತೆಯಲ್ಲಿವರು ಪ್ರಿಯರ ಪ್ರಥಮಸಂದರ್ಶನದ ಸುದ್ದಿಯನ್ನುಕೇಳಿ ಹಿಗ್ಗಿ ನುಡಿದಿರುವರು. "ಅಂಟಿಗೆ ಅಂಟಾಗಿ ಹುದೀ ಮನವೆರಡರ ಬೆಸುಗೆ" ಎಂದು ಹಾಡಿರುವ ಈ ಕವಿ ಮಿತ್ರರಸಿಕನಿಗೆ ಮರೆಯಲಾರದ ಮಾತುಗಳಲ್ಲಿ ಚೆಲುವಿನ ಬೀಡನ್ನು ಹೀಗೆ ವರ್ಣಿಸಿದಾರೆ :—

"ಎಲ್ಲಿ ಹೃದಯಕೊಂದು ಹೃದಯರಾಗ ಬಂಧ ಬೆಸೆಯತಿಹುದೋ
ಅಲ್ಲಿ ತೆರಳು ರಸಿಕ, ಬರುವೆ ಇಲ್ಲಿಗೇತಕೆ ?
ಸೊಗವ ಹಾಸಿ ಒಲವ ಬೀಸಿ ನಲವನುಣಿಸಿ ದಣಿವ ಹರಿಸಿ
ಮೊಗವ ಮಿಂಚಿ, ಹೊಂಚುಕಾಂಬ ಕಂಗಳಿರುವೆಡೆ—
ಅಂತರಂಗಕುಂದಕುಸುಮವಂತು ಅರಳುತಿರುವುದೆಲ್ಲೊ,
ಹಳ್ಳಿಯೂರ ಮುಗಿಲು ತೆಳ್ಳತೆಳ್ಳಗಾಡೆ ಬರುವುದೆಲ್ಲೊ,
ಒಕ್ಕಲಾಕೆಯಾತ ಸಕ್ಕರೆಯನು ಸವಿವನೆಲ್ಲೊ,
ಅಲ್ಲಿ ತೆರಳು ರಸಿಕ, ಬರುವೆ ಇಲ್ಲಿಗೇತಕೆ ?"

'ಭರತಮಾತೆ'ಯ ವರ್ಣನೆ ಸುಂದರವಾಗಿದೆ. ದುಷ್ಯಂತನ ವಿರಹದಿಂದ, ಬಿರುನುಡಿಯಿಂದ, ನೊಂದ ಭರತಮಾತೆಯಂತೆ ಈಗ ದಾಸ್ಯದುಗಿಯಿಂದ ಬೇಯುತ್ತಿರುವ ತೊಳಲುತ್ತಿರುವ ಭಾರತಮಾತೆಗೆ "ಜೀವ ಜಡ"ವೆನಿಸಿದೆ! ಆಕೆಯ ಹೃದಯವು "ತೋರದೋಳ್ಗಳ ನೀಡಿ ತನ್ನನು ಕಾಯುವಾಹವಮಲ್ಲನನ್ನು" ಕೋರುತ್ತಿದೆ. ಆದರೆ ನಾಡಿನಲ್ಲಿ "ತಾವು ಸಾಕಿದ ಕುರಿಯ ತಾವೆ ಕಡಿದುಂಬಂತೆ ಕಡಿದುಂಬ ನರರ-ನರವ ಬೇರು ಜೇರಗೆದು ಸುಡಬಾರದೇಕೆನಿಸುತಿದೆ, ಕತ್ತರಿಸಿ ಅವರ ಶಿರವ. ಕೊಲ್ಲಬಹ ಕುನ್ನಿಗಳ ಕೂರಳನರಿವುದೆ ಧರ್ಮ. ತಿಳಿಯಿರಿದು ವೀರಯೋಗ. "ಧೀರತ್ವದ ಹಿರಿನಂಜೇ ನಂಜು." ದೈವವು ತಡೆಗಟ್ಟಿದರೂ ಹಿಂಜರಿಯದೆ "ತಾಯ್ನಾಡಿನ ಸೇವೆಗೆ ಮುಂದಡಿಯಿಡುವುದೆ ಶೀಲ" ಎಂದು ಹಾಡಿ ಸಂಗಡಿಗರಾದ ಕನ್ನಡಿಗರಿಗೆ ಪರಾಕುಹೇಳಿ, ಅವರನ್ನು ತಾಯಿ ಸೇವೆಗೆ ಹುರಿದುಂಬಿಸಿ ಈ ಕವಿಗಳು "ಜಯಸಿದ್ಧ" ಎಂದು ಆಶ್ವಾಸನವೀಯುತ್ತಾರೆ. ಶರತ್ಕಾಲದ ಸೊಬಗನ್ನು ಕಂಡು "ಸುಖವ ಪಡಲು ಅಂತರಂಗದಿ ದಾಸ್ಯದಗ್ನಿ ಸುಡಲು" ಸಾಧ್ಯವಿಲ್ಲ. ಆದುದರಿಂದ ಕವಿ ಹೀಗೆ ಮರುಗುತ್ತಾರೆ!—

"ಶರದ ಕಾಲವೆ ಇಂದು ಬರದಕಾಲವೊ, ಬೀದಿ
ತುರುಗಳಿಗು ಕಡೆ ನರರ ಹಿಂಡು; ಭೂಮಿ
ಕರೆವ ಸುಖ ಸಾಧನವನುಣಬಿಡನು ಪಶ್ಚಿಮದ
ದೊರೆ ರಾಜ್ಯತೃಷ್ಣಾತರಂಗ ಗಾಮಿ!"

ಆದರೂ ಎದೆಗೆಡದೆ ಧೈರ್ಯದಿಂದ ಯುದ್ಧಕ್ಕೆ ಅನುವಾಗುವಂತೆ ಕವಿ ಹೀಗೆ ಪ್ರೋತ್ಸಾಹವನ್ನು ಹೃದಯಕ್ಕೆ ಕೊಡುವರು. "ನೂರ್ಕಾಲ ಬದುಕಿ ಫಲವೇನು? ಹೇಡಿ ತಾನಿದ್ದು ಯಿದ್ದು ಸತ್ತ! ಮೂರ್ಖರಿಗೆ ಎತ್ತದಿರೆ ಮತ್ತೆ ದೇವ ನಿನಗೇಕೆ ಮುಷ್ಟಿಯಿತ್ತ? ವಿಧಿವಾದ ಶರಣತೆಯ ನಂಬಬೇಡ, ನಡೆ. ತಿಳಿವನೀಂಟಿ ತೇಗು. ಅಧಿಕಾರದಿಂದ ಭಯವೃತ್ರನನ್ನು ಅರಿದೊಗೆದು ಇಂದ್ರನಾಗು! ಈ ಆತ್ಮ ತಾನು ಬಲಹೀನರಿಗೆ ಲಭ್ಯನಲ್ಲೆಂಬುದರಿಯೆಯೇನು? ಕ್ಷುದ್ರಾತ್ಮರೆಂದುದಕೆ ಹೆದರಿ ನಡೆಯೆ ಧೀಶಕ್ತಿ ಸತ್ತಿತೇನು? ಸಿಡಿದೆದ್ದು ಕಾಲದಿ ವಿರುದ್ಧ ಶಕ್ತಿಗಳ ಕಡಿದು ಚಂಡನಾಡು! ಹಿಡಿ, ಕೊಡುವೆ ವೀಳ್ಯ, "ಯುದ್ಧಾಯ ಯುಜ್ಯಸ್ವ" ಹೃದಯ. ದೈನ್ಯಬೇಡ. ನಡೆ ಇರುವೆ ನಾನು ಮತಿಕೃಷ್ಣ ಕಾರ್ಯರಥ ನಡೆಸಲೀಗ ನೋಡ!"

ಪ್ರಕೃತಿಯವರ್ಣನೆಗೆ ಮೀಸಲಾಗಿರುವ ಗೀತಗಳಲ್ಲಿ 'ಮೂಡಿತ್ತದೊಂದು ದಿವ್ಯಪ್ರಭೆ' 'ಸೌಂದರ್ಯಸೂಕ್ತ', 'ಬೆಟ್ಟಕುಳಿ', 'ಶರತ್ಕಾಲ', "ಕನ್ನಡ ಕಡಲು ಸೀಮೆ" ಎಂಬ ಗೀತೆಗಳು ಬಹುರಮ್ಯವಾಗಿವೆ.

ಶರತ್ಕಾಲದ ಒಂದು ಪದ್ಯವಿದು:—

'ಹಸಿರುಟ್ಟ ಭೂದೇವಿ ಹಾಯಾಗಿ ಮಲಗಿಹಳು
ದಣಿವುಗಳೆಯಲು ಧೇನು ಮಲಗಿದಂತೆ:
ಅಳಿಗಿಳಗಳತ್ತಿತ್ತ ಹೂ ಹಣ್ಣ ಹುಡುಕುತಿವೆ
ಬಂದು ಪಶ್ಚಿಮಘಟ್ಟದತ್ತಣಿಂದೆ!
ಎಳಬಿಸಲ ಹೊಳಪನ್ನು ಪಡಿಗೊಡುವ ನದಿನದಗ—
ಳಿಳಿದೆಯ್ದುತಿವೆ ಮೆಲ್ಲನಬ್ಧಿಯತ್ತ!

ಚಳಿಗಾಲ ತುದಿಗಾಲನೂರಿಹುದು ; ಅರೆಮಾಗಿ
ಕೆಳಗೆ ತಲೆ ಹಾಕಿಹುದು ಗದ್ದೆ ಬತ್ತ !"

"ನಿರ್ವ್ಯಾಜ ರಮ್ಯ ಭೂರಮೆಯ" ಸೊಗಸನ್ನು ನೋಡಿದರೆ "ಇಳೆಯೆ ಸಾಕು ಮತ್ತಿದರಸುತ್ತ ಆ ಸಗ್ಗವನ್ನು ಸುಳಿದಿಕ್ಕ" ಎನಿಸುತ್ತದೆ ಈ ಕವಿಗೆ. "ಕರ್ನಾಟಕದಲ್ಲಿ ಹೆಜ್ಜೆ ಹೆಜ್ಜೆಗೊಂದು ಹೊಳೆ! ಹಚ್ಚ ಹಸಿರು ತುಂಬು ಬೆಳೆ! ಬೆಟ್ಟದಟ್ಟಹಾಸ—ಮಳೆ! ಎತ್ತೆತ್ತಲು ತೆಂಗು! ಪಚ್ಚೆಪಯಿರ ರಂಗು!" ಎಂದು ಮುಂತಾಗಿ ವರ್ಣಿಸಿ ಕನ್ನಡ ಕಡಲು ಸೀಮೆಯನ್ನು ಹೀಗೆ ಕವಿ ಹರಸುತ್ತಾರೆ. "ಎರಡು ಪಯಿರ ಹೊಲವೆ ಬಾಳ್! ಕರಡಿಹರಿವ, ಜಲವೆ ಬಾಳ್! ತೆಂಗಿನ ತವರೂರೆ ಬಾಳ್, ತೆಂಗನ್ನಡ ನೀರೆ ಬಾಳ್!" ಪ್ರೇಮಗೀತಗಳಲ್ಲಿ "ಎದೆಯರಾಣಿಗೆ" 'ಪ್ರೀತಿಯ ನೆನೆನೆನೆವೆ', 'ಬಲ್ಲೆಯ ಅನಲ್ಲೆಯ', 'ಸೊಗಸುಗಾರ' ಎಂಬ ಕವಿತೆಗಳು ಬಲು ಸೊಗಸಾಗಿವೆ. "ಪ್ರೀತಿಯ ನೆನೆನೆನೆವೆ" ಎಂಬ ಗೀತೆಯ ಕೆಲವು ಸಾಲುಗಳಿವು:—

"ಅಚ್ಚನೇಹದ ಮಾತು ಬಿಚ್ಚಿದೆಯ ಕಡೆಯಿಂದ
ಹುಚ್ಚು ಹರಿಸದಲಿ ಬಂದೆನ್ನ ಮಿಾಯಿಸಿದ
ಸ್ವಚ್ಛತೆಯ ನೆನೆವೆ ಸಿರಿಯಾಣ್ಮ !
ನಿನ್ನೆ ತಳಪಾಯದಲಿ ಮುನ್ನಿನಶ್ಮಗಳನಿಟ್ಟು
ಚೆನ್ನಾಗಿ ಇಂದನಳವಡಿಸಿ ಕಟ್ಟಿದಾ
ಚೆನ್ನಿಗರೆ ಬನ್ನಿ ಮನೆಗಾಗಿ !
ಹೃದಯ ವೇದಿಕೆಯಲ್ಲಿ ಮೃದುಮಧುರಭಾವಗಳ
ಹದನಾದ ಪಾಕ ನಿಮಗಾಗಿ ಕಾದಿಹುದು
ಚದುರರೇ ಬನ್ನಿ ಮನೆಗಾಗಿ !"

ಸ್ನೇಹಗೀತೆಗಳಲ್ಲಿ 'ನಿಜದ ನುಡಿ', 'ಮಿತ್ರನಿಗೆ ಪತ್ರ' ಎಂಬುವು ಮನನೀಯವಾಗಿವೆ. ಶಿಶುಗೀತೆಗಳಲ್ಲಿ "ಮಕ್ಕಳಿಗೆ ಕರೆ" ಎಂಬ ಹಾಡು ಅಮರವಾಗುವುದರಲ್ಲಿ ಸಂಶಯವಿಲ್ಲ. ಮಕ್ಕಳು "ಮುಗ್ಧತೆವೆತ್ತಿಹ ಮಣಿಗಳು, ಸ್ನಿಗ್ಧತೆ ತುಂಬಿದ ಖಣಿಗಳು, ಮೃದುಮಧುರಾತ್ಮಕ ಯತಿವರರು, ನಂದನವನದರವಿಂದಗಳು, ಮಂದಾರದ ಮಕರಂದಗಳು, ಜೀವನದ ಹೂವುಗಳು, ಮಂಗಲಮಯ ಜಲ್ಪನೆಗಳು, ತಂಗಾಲದ ಕಲ್ಪನೆಗಳು, ದೇವತೆಗಳು, ತಾವರೆಗಳು" ಎಂದು ಬಗೆಬಗೆಯಾಗಿ ಶ್ರೀಧರರು ವಾತ್ಸಲ್ಯಪೂರ್ಣ ವಾಣಿಗಳಿಂದ ಮಕ್ಕಳನ್ನು ಲೀಲೆಗೆ ಕರೆದಿದಾರೆ. "ಜನ್ಮಕಥೆ" ವಿಶ್ವಕವಿ ರವೀಂದ್ರನಾಥ ಠಾಕೂರರ ಗೀತೆಯ ಸರಸ ಸುಂದರ ಸರಳಾನುವಾದ. ಕೊನೆಯ ಗೀತೆಯೂ ಬಹುಸುಂದರವಾಗಿ, ಭಾವಗರ್ಭಿತವಾಗಿ ಇದೆ.

"ಮೇಘನಾದ" ಹೊಸಗನ್ನಡದ ಕವನಸಂಗ್ರಹಗಳಲ್ಲಿ ಅತ್ಯುತ್ತಮವಾದವುಗಳಲ್ಲಿ ಒಂದಾಗಿ ರಸಿಕರಿಗೆ ಆನಂದದಾಗರವಾಗಿ ಚಿರಕಾಲ ನಿಲ್ಲುವುದು. ಇಂತಹ ಸುಂದರ ಕೃತಿಗಳನ್ನು ಶ್ರೀಧರರು ರಚಿಸುತ್ತಾ 'ಸಾಹಿತ್ಯಮಂದಿರ'ದಂತಹ ಸಂಸ್ಥೆಗಳು ಅವುಗಳನ್ನು ಪ್ರಕಟಿಸುತ್ತಾ ನಾಡ ಸೇವೆಯನ್ನು ಬಹುಕಾಲ ಮಾಡುತ್ತಿರಲಿ !

— ಅ. ನ. ಶ್ರೀ.

**ನಸುಕು** (ಗೀತಗಳು): ಕವಿಗಳು: ಶ್ರೀ ನರೇಗಲ್ಲ ಪ್ರಹ್ಲಾದರಾಯರು. ಪ್ರಕಾಶಕರು: ಬಿ. ಜಿ. ಸಂಕೇಶ್ವರ. ಸಂಪಾದಕರು: ಶ್ರೀ. ಕಲಮದಾನಿ ಗುರುರಾಯರು, 'ಸಂಜೀವಿನಿ ಪ್ರಕಾಶನ', ಹುಬ್ಬಳ್ಳಿ. ಬೆಲೆ: ರೂ. ೧-೦-೦. V+೬೪.

"ನಸುಕು" ಹುಬ್ಬಳ್ಳಿಯ "ಸಂಜೀವಿನಿ ಪ್ರಕಾಶನ"ದ ಮೊದಲನೆಯ ಗ್ರಂಥ. ಗೆಳೆಯರ ಗುಂಪಿನ ಶ್ರೀ. ನರೇಗಲ್ಲ ಪ್ರಹ್ಲಾದರಾಯರ ಪರಿಚಯವನ್ನು ಸಂಪಾದಕರು ಮಾಡಿಕೊಟ್ಟಿದ್ದಾರೆ. ಕವನಗಳಿಗೆ "ಅವತಾರಿಕೆ"ಯ ರೂಪದಲ್ಲಿ ಕವಿಗಳೇ ಮುನ್ನುಡಿಯನ್ನು ಬರೆದು ಕವಿತೆಯ ಸಂದರ್ಭ, ತಾತ್ಪರ್ಯಗಳನ್ನು ಸೂಚಿಸಿದಾರೆ. ಇದು ಈ ಕವನ ಸಂಗ್ರಹದ ವೈಶಿಷ್ಟ್ಯ; ಈ ಪದ್ಧತಿಯನ್ನು ಎಲ್ಲ ಪ್ರಕಾಶಕರೂ ಕವಿಗಳೂ ಮುಂದೆ ಅನುಸರಿಸುವುದು ಉಚಿತವೂ ವಾಚಕರಿಗೆ ಉಪಯೋಗಕರವೂ ಆಗಿ ಕಂಡುಬರುತ್ತದೆ.

"ಕನ್ನಡದಲ್ಲಿ ಒಳ್ಳೊಳ್ಳೆಯ ಗ್ರಂಥಗಳನ್ನು ಪ್ರಕಟಿಸಬೇಕು, ರಸಿಕ ಓದುಗರನ್ನು ತಣಿಸಬೇಕು, ಈ ಮೂಲಕ ಕನ್ನಡ ತಾಯಿಗೆ ಸೇವೆಸಲ್ಲಿಸಬೇಕು" ಎಂಬ ಬಯಕೆಯಿಂದ ಶ್ರೀ. ಕಲಮದಾನಿ ಗುರುರಾಯರು ಆರಂಭಿಸಿರುವ ಗ್ರಂಥಮಾಲೆಗೆ "ಸಂಜೀವಿನಿ ಪ್ರಕಾಶನ" ಎಂಬ ಹೆಸರು ಸರ್ವಥಾ ಒಪ್ಪುತ್ತದೆ. ಕವಿಯು ಕಲೆಯಿಂದ ಕೀರ್ತಿಕಾಯದಲ್ಲಿ ಜರಾಮರಣರಹಿತನಾಗಿ ಚೆನ್ನಾಗಿ ಜೀವಿಸುವುದರಿಂದ ಕವಿಗಳ ಗ್ರಂಥಗಳ ಪ್ರಕಾಶನಕ್ಕೆ ಈ ಹೆಸರಿಡುವುದು ಉಚಿತವಾಗಿದೆ. "ಅಂಬಿಕಾತನಯದತ್ತ"ರಿಂದ ಸ್ಫೂರ್ತಿಯನ್ನು ಪಡೆದು, "ವಿಶ್ವಭಾರತಿ"ಯ ಸ್ನಾತಕರಾಗಿ ಕರ್ನಾಟಕಕ್ಕೆ ದಯಮಾಡಿಸಿ, ಹುಬ್ಬಳ್ಳಿಯಲ್ಲಿ ಪವಿತ್ರವಾದ ಶಿಕ್ಷಣವೃತ್ತಿಯ ದೀಕ್ಷೆಯನ್ನು ಕೈಕೊಂಡಿರುವ ಶ್ರೀ. ನರೇಗಲ್ಲ ಪ್ರಹ್ಲಾದರಾಯರ ಮತ್ತು ಇತರ ಉತ್ತಮ ಸಾಹಿತಿಗಳ ಬಗೆಬಗೆಯ ಕೃತಿಗಳು "ಸಂಜೀವಿನಿ ಪ್ರಕಾಶನ"ದ ಮೂಲಕ ಬೇಗಬೇಗ ಪ್ರಕಟವಾಗಲಿ!

ಶ್ರೀ. ಪ್ರಹ್ಲಾದರಾಯರ ಬಾಳಿನ ಹಾಡುಗಳಿವು. ಕವಿಗಳು ತಮ್ಮ ತಾರುಣ್ಯ ಮತ್ತು ಯೌವನದ ಪೂರ್ವ ಭಾಗಗಳ ರಸನಿಮಿಷಗಳನ್ನು ಇದರ ೪೧ ಗೀತೆಗಳಲ್ಲಿ ಸುಂದರವಾಗಿ ಚಿತ್ರಿಸಿದಾರೆ. ಇವುಗಳಲ್ಲದೆ ಈ ಗೀತೆಗಳ ಸಂಕಲನದಲ್ಲಿ ಕವೀಂದ್ರರವೀಂದ್ರರ ಮೂಲ ವಂಗಗೀತೆಗಳಿಂದ ಕನ್ನಡಕ್ಕೆ ನೇರವಾಗಿ ಈ ಕವಿಗಳು ಪರಿವರ್ತಿಸಿರುವ ಹೃದ್ಯವಾದ ಹತ್ತು ಗೀತೆಗಳಿವೆ. ಶ್ರೀ. ಪ್ರಹ್ಲಾದರಾಯರು "ಗೀತಾಂಜಲಿ"ಯನ್ನು ಬೇಗ ಈ ಗೀತೆಗಳ ಶೈಲಿಯಲ್ಲಿ ಪರಿವರ್ತಿಸಿ ಕೊಡಬೇಕೆಂದೂ ಅವುಗಳನ್ನು "ಸಂಜೀವಿನಿ ಪ್ರಕಾಶನ" ಪ್ರಕಟಿಸಬೇಕೆಂದೂ ಸಂಪಾದಕರಂತೆ ಸಹೃದಯರೆಲ್ಲರೂ ಹಾರೈಸುತ್ತಾರೆ.

ಶ್ರೀ. ದ. ರಾ. ಬೇಂದ್ರೆಯವರ ಪ್ರಿಯಮಿತ್ರರಾದ ಈ ಕವಿಗಳು ಧಾರವಾಡದಲ್ಲಿ ಕಳೆದ ಮೇ ತಿಂಗಳ ಕೊನೆಯಲ್ಲಿ "ಬೇಂದ್ರೆ ಸತ್ಕಾರ ಸಮಿತಿ" ನಡೆಸಿದ ಸಾಹಿತ್ಯೋತ್ಸವದ ಸಂದರ್ಭದಲ್ಲಿ ತಮ್ಮ ಕಾವ್ಯಗುರುಗಳಾದ 'ಅಂಬಿಕಾತನಯದತ್ತ'ರಿಗೆ ಈ ಗೀತಾ ಗುಚ್ಛವನ್ನು ಅರ್ಪಿಸಿರುವರು. ಆ ಕವಿವರ್ಯರ "ಹರಕೆ"ಯನ್ನು ಹೊತ್ತು ಮೆಚ್ಚಿಗೆಯನ್ನು ಗಳಿಸಿರುವ "**ನಸುಕು**" ಎಂಬ ಮೊದಲನೆ ಗೀತೆ ಈ ಕವನಗಳಲ್ಲಿ ಕಂಡುಬರುವಂತೆ ಹೆಸರನ್ನು ಕೊಟ್ಟಿದೆ. "ಶ್ರೀಧರ"ರ ಕವನಗಳಲ್ಲಿ ಕಂಡುಬರುವಂತೆ ಶ್ರೀ. ಪ್ರಹ್ಲಾದರಾಯರ ಕವಿತೆಗಳಲ್ಲಿಯೂ ಸಾಮಾನ್ಯವಾಗಿ ಹಳಗನ್ನಡದ ಆದಿಪ್ರಾಸವೂ ಹೊಸಗನ್ನಡದ ಅಂತ್ಯಪ್ರಾಸವೂ ಸಮರಸವಾಗಿ ಕಂಡುಬರುತ್ತವೆ. "ಜಯಕರ್ನಾಟಕ"ದ ಸಹ ಸಂಪಾದಕರಾಗಿಯೂ ಕೆಲಸಮಾಡಿರುವ ಶ್ರೀ. ನರೇಗಲ್ಲ ಪ್ರಹ್ಲಾದರಾಯರ ಕವಿತೆಗಳಿಂದ ಈ ಅಂತ

ಸಿದ್ಧವಾಗುತ್ತದೆ. ಭಾವವ್ಯಕ್ತಿಗೆ ಪ್ರಾಸದ ನಿಯಮ ಅಡ್ಡಿಯಾಗಲಾರದು. ಅವರ ಕೆಲವು ಸಾಲುಗಳನ್ನು ನಾವು ಬೇಗ ಮರೆಯಲಾರೆವು. ಉದಾ:—

"ಸೊಬಗುಳ್ಳ ಸುದ್ದಿ ಸೊಗಸಿನ ಸೂರಿ", "ಬೇವಿನೊಳು ಬೆಲ್ಲವನು ಕಾಣಬೇಕು", ಎನಿತು ಸೊಬಗಿನದು! ಸೌಭಾಗ್ಯವೈ? ಹಿಗ್ಗಿಸೈ! ಜನತೆಗೋಸುಗ ಸಾಯ್ವುದು!

"ನಸುಕಿ"ನ ಗೀತೆಗಳನ್ನು ಪ್ರಕೃತಿಗೀತೆಗಳು, ಶಿಶುಗೀತೆಗಳು, ಸ್ನೇಹಗೀತೆಗಳು, ರಾಷ್ಟ್ರಗೀತೆಗಳು, ಭಕ್ತಿಗೀತೆಗಳೆಂದು ನಾವು ವಿಭಾಗಿಸಬಹುದು.

ಗೆಳೆಯನ ಅಗಲಿಕೆಯಿಂದ ನೊಂದ ಕವಿ ಹೀಗೆ ನುಡಿಯುತ್ತಾರೆ:—

"ಶ್ಲೋಕ—ಯೋಗಕ್ಷೇಮ ಕೇಳುವವರಾರವರು
ಏಕಾಂತದೊಳಗೆ ಇರುವವರಿ ಇಲ್ಲದಮೇಲೆ?
ಏಕಾಕಿಯಾಗಿರುವೆಯಾ ಎಂಬ ಮಾತೇಕೆ?
ಮಾತಿನಾ ಮೊನೆಯದೇಕೆ?"

ಕೈಹಿಡಿದ ಮಡದಿಯ ಒಲುಮೆ "ಬಾಳ ದಾರಿದೀವಿಗೆ" ಎಂದು ಹಾಡಿರುವ ಈ ಕವಿಗಳು "ಜೀವ ಪ್ರವಾಹವು ಸ್ನೇಹಸಾಗರದಲ್ಲಿ ಬೆರೆತ ಮುಹೂರ್ತವೆ ಮುಹೂರ್ತ" ಎಂದು ಉಸುರಿರುವರು. "ಗೆಳೆತನದ ಎಣಿಕೆ" ಎಂಬ ಕವನ ಬಹು ಮುದ್ದಾಗಿದೆ. ಮಕ್ಕಳಿಗೆ ಆಟವಾಡಲು ಇದನ್ನು ಕಲಿಸಬಹುದು. ಮಕ್ಕಳನ್ನು ಆಡಿಸಲು ಹಾಡಿದ ಇವರ ಕವನವೂ "ಹೊಯಿಸಳ"ರ ಮಗುವಿನ ಹುಟ್ಟಿದ ಹಬ್ಬದ ದಿನ ಹರಸಿದ "ಜೋಗುಳ"ವೂ ಸುಂದರವಾಗಿವೆ; ಉತ್ತಮವಾದ ಶಿಶುಗೀತೆಗಳಿವು. "ನಸುಕಿ"ನಲ್ಲಿ ಕಂಡುಬರುವ ಇವರ ಪ್ರಕೃತಿಪ್ರೇಮ ಆಸ್ವಾದ್ಯಶವಾದುದು. ಹಲವು ರಾಷ್ಟ್ರಗೀತೆಗಳು ಈ ಸಂಗ್ರಹದಲ್ಲಿವೆ. "ಸ್ವರಾಜ್ಯಸ್ಥಾಪನೆ", "ಭಾರತದ ಭಾಗ್ಯತಿಲಕ", "ವಿಜಯ ವಿದ್ಯಾರಣ್ಯರಿಗೆ", "ಜಯ ಹಿಂದ್!", "ಬಿಡುಗಡೆಯ ಬಳಿಕ", ಎಂಬವು ಇವುಗಳಲ್ಲಿ ಕೆಲವು. ದಾಸ್ಯದ ಕಷ್ಟವನ್ನು ಈ ಪದ್ಯಗಳು ಚೆನ್ನಾಗಿ ವರ್ಣಿಸುತ್ತವೆ:—

ಅಮ್ಮಯ್ಯ ಅನಬೇಕು ಅಡಿಗು ಅಡಿಗೂ
ದಮ್ಮಯ್ಯ ಎನಬೇಕು ನುಡಿಗು ನುಡಿಗೂ
ಹೊರಬೇಕು ಹೊರಬಾರದಂಥ ಅಪವಾದ
ಇರಬೇಕು—ಯಾರಿಚ್ಛೆ? ಬಂದ ಅಪರಾಧ.
ನರವೀರ ಮಾಡುವುದು ನರಗುರಿಯ ಕಾರ್ಯ.
ಗುರಿಯಿಂದ ಹೊರೆಯಾಯ್ತು ಬಾಳ ತಾತ್ಪರ್ಯ!

ಆದರೂ, ಎಲ್ಲವೂ ಕಲುಷಿತವಾಗಿದ್ದರೂ, ಅಕಲಂಕ ರಾಮಭದ್ರನ ಅನುಗ್ರಹದಿಂದ ಪುರುಷಾರ್ಥಸಿದ್ಧಿಸಲಿ! ಎಂದು ಹಾರೈಸಿ ಕವಿ ಸಮಾಧಾನ ಹೊಂದುತ್ತಾರೆ.

"ಗೆಳೆಯರ ಗುಂಪಿ"ನ ಕವಿ ಗೆಳೆತನದ ಮೇಲೆ ಹಲವಾರು ಹಾಡುಗಳನ್ನು ಹಾಡಿರುವುದು ಅಚ್ಚರಿಯಲ್ಲ. ಗೆಳೆಯರಾದ ಶ್ರೀ ರಾಮುರಂಗವಿನಾಯಕರನ್ನು "ಪ್ರೇಮದತ್ತಾತ್ರೇಯ"ನೆಂದು ಇವರು ಹಾಡಿದಾರೆ. "ವಿನಾಯಕ"ರ ಹುಟ್ಟಿದ ಹಬ್ಬದ ದಿನ ಈ ಕವಿಗಳು ಬರೆದ ಪದ್ಯ ಬಹು ಚೆನ್ನಾಗಿದೆ, ಇವರ ಸ್ನೇಹ ಆ ಪದ್ಯದ ಪ್ರತಿಚರಣದಲ್ಲೂ ಉತ್ಸಾಹದಿಂದ ಕುಣಿಯುತ್ತಿದೆ. ಸಂಕಲನದ ಕೊನೆಯಲ್ಲಿ ಬಂದಿರುವ ದಿವಂಗತ ಕವಿಚಕ್ರವರ್ತಿ ರವೀಂದ್ರನಾಥ ಠಾಕೂರರ ಅನುವಾದಗಳಂತೂ ಬಹು ಸೊಗಸಾಗಿವೆ. ಅನುವಾದವೆಂದು ತಿಳಿಸದೇ ಇದ್ದರೆ

ಕನ್ನಡಿಗರೇ ಇದನ್ನು ಹಾಡಿದಂತೆ ನಂಬಬೇಕಾಗಿ ಬರುವುದು. ರವೀಂದ್ರನಾಥಠಾಕೂರರ ಕೆಲವು ಪದ್ಯಗಳ ಪರಿವರ್ತನವನ್ನುದ್ಧರಿಸಿ ಈ ಕಾವ್ಯಾವಲೋಕನವನ್ನು ಮುಗಿಸಬಹುದು.

ಅಂತರಂಗವನು ಅರಳಿಸು ಹರಿಯೇ,
ಅಂತಃಕರಣದ ಒಳ-ದೊರೆಯೇ!
ನಿರ್ಮಲಗೊಳಿಸೈ, ಉಜ್ವಲಗೊಳಿಸೈ!
ಸುಂದರ ಗೊಳಿಸೈ ಶ್ರೀಹರಿಯೇ!

* * *

ಬಾರೈ ಸುಂದರಸ್ನಿಗ್ಧ ಪ್ರಶಾಂತಾ
ಬಾರೈ ನಿರ್ಮಲ ಉಜ್ವಲಕಾಂತಾ
ಬಾರೈಸುಖದಲಿ ದುಃಖದಲಿ ಮರ್ಮದಲಿ
ತೋರೈ ನಿತ್ಯದ ಜೀವನ ಕರ್ಮದಲಿ!

* * *

ಎನಿತೋ ದಿನ ಇರುತಿರುವುದೊ ಈ ಉಸಿರು
ಅನಿತೂ ದಿನ ಹಾಡೈ ಆತನ ಹೆಸರು

* * *

ಸೋಂಕದಿರೆ ಬೆಂಕಿ, ಧೂಪದ ಗಂಧ ಬಂದೀತೆ
ಎಲ ಎಲಾ ನಿಷ್ಠುರಾ!
ಕೊಂಕುತಿರೆ ದೀಪವದು ಬೆಳಕು ಬಲು ಸಂದೀತೆ
ಎಲ ಎಲಾ ನಿಷ್ಠುರಾ.

* * *

ತಡವೇಕೆ ತಡವೇಕೆ? ಈ ಹೂವ ಕೊಯ್ದುಕೊಳ್ಳೈ!
ಹುಡಿಗೂಡಿ ಹೋದೀತು ಎಂಬ ಈ ಭಯವ ತಳ್ಳೈ!

* * *

ಸಂಗ ಹೀನರ ಸಂಗವೇ ನಿನಗೆ ಮೆಚ್ಚು
ಒಡವೆ ಹೀನರ ಗೊಡವೆಯೇ ನಿನಗೆ ಹೆಚ್ಚು!
ನನ್ನೆದೆಯು ನಿನಗೆ ಬಲುದೂರೆ
ಅಧಮರಲಿ ಅಧಮರಾದವರ ಅಡಿಯಲ್ಲಿ
ಕಳೆದು ಕಂಗೆಟ್ಟವರ ಕಟ್ಟಕಡೆಯಲ್ಲಿ
ನಿನ್ನಡಿಯು ರಾರಾಜಿಸುವುದು!

* * *

ನಿನ್ನಡಿಯೊಳು। ನನ್ನಯ್ಯನೆ।
ಕಲ್ಯಾಣವ ಮನಗಾಣುವ
ಭಾರತ ನರ ನಾರಾಯಣ।
ತನುಮನ ಧನ।
ನಿನಗರ್ಪಣವು?

—ಅ. ನ. ಶ್ರೀ.

ರಂಜನ: (ಕವನ ಸಂಗ್ರಹ) ಕವಿಗಳು ಮತ್ತು ಪ್ರಕಾಶಕರು: ಶ್ರೀ. ವಸುದೇವ್ ಭೂಪಾಲಂ, ಎಂ.ಎ. ಅವರು; ಮಾರಾಟಗಾರರು: ಕರ್ಣಾಟಕ ಸಂಘ, ಶಿವಮೊಗ್ಗ; ಬೆಲೆ: ರೂ. ೧; ಪುಟ xiii, ೭೫.

ಶಿವಮೊಗ್ಗೆಯ ಸಾಹಿತ್ಯ ಸಮ್ಮೇಳನದ ಸ್ವಾಗತ ಗೀತೆಯನ್ನು ರಚಿಸಿದ ಶ್ರೀ. ವಸುದೇವ್ ಭೂಪಾಲಂ, ಎಂ.ಎ. ಅವರ ೪೫ ಕವನಗಳ ಈ ಸಂಗ್ರಹದ ಕೊನೆಯ ಕವಿತೆ "ರಂಜನ" ಎಂಬುವ ಹೆಸರನ್ನೇ ಈ ಗ್ರಂಥಕ್ಕೆ ಕೊಟ್ಟಿದೆ. ಅಂದವಾದ ಮುದ್ರಣದಿಂದಲೂ ಸುಂದರವಾದ ಚಿತ್ರದಿಂದ ಶೋಭಿಸುವ ಮೇಲುಹೊದಿಕೆಯಿಂದಲೂ ಕೂಡಿರುವ ಈ ಪುಸ್ತಕದ ಆದಿಯಲ್ಲಿ ಕವಿಗಳೇ ಬರೆದ 'ಪ್ರವೇಶ'ವಿದೆ. ಇದರ ಜತೆಗೆ 'ನಸುಕು' ಎಂಬ ಕಾವ್ಯಮಾಲೆಯಲ್ಲಿರುವಂತೆ ಸಂದರ್ಭ ಸೂಚನೆಯೂ ಇದ್ದಿದ್ದರೆ "ರಂಜನ"ವು ರಸಿಕರಿಗೆ ಮತ್ತಷ್ಟು ರಂಜಕವಾಗುತ್ತಿತ್ತು. ಪ್ರವೇಶದಲ್ಲಿ ಶ್ರೀ. ಭೂಪಾಲಂ ಅವರು ಕವಿಯ ಹಿರಿಮೆಯನ್ನೂ ವೈಲಕ್ಷಣ್ಯವನ್ನೂ ಪ್ರತಿಪಾದಿಸುತ್ತಾ ಹೀಗೆ ಬರೆದಿದಾರೆ:—"ಪ್ರತಿ ಮಾನವನೂ ಕವಿಯೆ . . . . ಸಹಾನುಭೂತಿ, ಸೌಂದರ್ಯಾನುಭೂತಿ; ಪ್ರಸವೀಶಕ್ತಿ ಸಾಧಾರಣರಿಗಿಂತ ವಿಶೇಷ ರೀತಿಯಲ್ಲಿ ಪ್ರಕಟವಾಗುವ ಪುರುಷರನ್ನು ಜನ ವಾಡಿಕೆಯಾಗಿ ಕರೆಯುತ್ತಾರೆ 'ಕವಿ' ಎಂದು . . . . ಸ್ವಹೃದಯದಿಂದ ಮಿಡಿದು ಬಂದ ರಾಗ-ರಸ-ಭಾವಗಳನ್ನು ಮೋದಕವಾಗಿ ನಿರೂಪಿಸಬಲ್ಲನಲ್ಲದೆ, ಸ್ವಕೀಯ ಜೀವನಕ್ಕೆ ಅನ್ಯವಾದ ಅನನುಭವವಾದ ವಿಷಯನಿರೂಪಣೆಯಲ್ಲಿ ಫಲಪ್ರದನಾಗನು ಕವಿ . . . ಮಹೋನ್ನತ ಕವಿ ಪ್ರಾಸಬದ್ಧ ಸಾಲುಗಳನ್ನು ಹೆಣೆಯುವ ದೇವಾಂಗದವನಲ್ಲ; ಸೌಂದರ್ಯಾರಾಧಕ, ವೇದಾನ್ತಿ, ರಾಜಕಾರಣಪಟು, ಯೋಧ, ಆಲೋಚನಾಪರ ಇತ್ಯಾದಿ ಸಮಸ್ತವೂ ಹೌದು . . . ಪ್ರೇಮ ಸತ್ಯಗಳೇ ಕವಿಯ ಜೀವಾಳ . . . ಕವಿಗೆ ಶ್ರದ್ಧೆ, ಉಪಾಸನೆ, ಅಂತರ್ಯಗ್ರಹಣಶಕ್ತಿ ಇವು ಅವಶ್ಯಕ . . ." "ಭಾವನೆ ಶಬ್ದಗಳಲ್ಲಿ ಆವೇಶ ಪ್ರವಹಿಸುವುದೇ ಕಾವ್ಯ. ವಿಕೃತವನ್ನು ಸುಂದರವಾಗಿ ಬಿಂಬಿಸುವ ಅಪೂರ್ವ ದರ್ಪಣ. ಕವಿತೆ ಜೀವನದ ಬಿಂಬವನ್ನು ಅದರ ಅನಂತ ಸತ್ಯತೆಯಲ್ಲಿ ನಿರೂಪಿಸುವ ಪ್ರಯತ್ನ. ವಿಶ್ವದ ಉತ್ತುಂಗ ಮಹತೆ, ಉಜ್ವಲಸೌಂದರ್ಯಗಳನ್ನು ಅಮರವಾಗಿ ಸುತ್ತದೆ ಕಾವ್ಯ. ಕಾವ್ಯ ಸರ್ವದಾ ಆನಂದಸಂಯೋಜಿತ" ಎಂದು ಹೇಳಿ ಈ ಕವಿ ನಾನಾ ಭಾಷೆಗಳ ಕಾವ್ಯಮೀಮಾಂಸಾ ವಿದ್ವಾಂಸರ ಅಭಿಪ್ರಾಯಗಳನ್ನು ನಿರೂಪಿಸಿದ್ದಾರೆ. ಅವನ್ನು ಎಲ್ಲರೂ ಅನುಮೋದಿಸಬಹುದು. ಆದರೆ ಪ್ರವೇಶದ ೩-೪ನೆಯ ಭಾಗಗಳಲ್ಲಿ ಬರುವ ಎಲ್ಲಾ ಅಂಶಗಳನ್ನೂ ಎಲ್ಲರಿಗೂ ಒಪ್ಪಲಾಗುವುದಿಲ್ಲ. "ಕನ್ನಡ ಭಾವಗೀತೆಯ ಮೂಲ ಇಂಗ್ಲಿಷ್‌ನ ಲಿರಿಕ್" ಎನ್ನುವ ಮಾತು ಅವುಗಳಲ್ಲಿ ಒಂದು. ಹೊಸಗನ್ನಡದ ಹಲವು ಕವನಗಳು ಇಂಗ್ಲಿಷ್ ಲಿರಿಕ್‌ಗಳಿಂದ ಪ್ರೇರಿತವಾಗಿರುವುದು ನಿಜ. ಆದರೆ ಕನ್ನಡಭಾವಗೀತೆಯ ಮೂಲ ಇಂಗ್ಲಿಷ್‌ನ ಲಿರಿಕ್ ಎಂದು ಇದರಿಂದ ಸಿದ್ಧವಾದಂತಾದೀತೇ? ಭಾರತೀಯ ಸಾಹಿತ್ಯದಲ್ಲಿ ಭಾವಗೀತೆಗಳು ವಿರಳ ಎಂಬ ಪ್ರವಾದವೂ ಈ ಮಾತಿನಂತೆ ಸಂಶೋಧನೆಗೆ ಅರ್ಹವಾದುದು. ಭಾವಪ್ರಧಾನವಾದ ಗೀತೆಗಳು ಋಗ್ವೇದದ ಸೂಕ್ತಿಗಳಲ್ಲಿಯೂ ಆಳ್ವಾರುಗಳ ದಿವ್ಯ ಪ್ರಬಂಧಗಳಲ್ಲಿಯೂ ಸಂಸ್ಕೃತ ಸ್ತೋತ್ರಮಾಲೆಗಳಲ್ಲಿಯೂ ಹೇರಳವಾಗಿವೆ. ಪ್ರಕೃತಿಪ್ರೇಮದ ಅಥವಾ ಭಕ್ತಿಯ ಆವೇಶದ ಅಥವಾ ಸೌಂದರ್ಯದ ಸರ್ವಸ್ವನಿಧಿಯಾದ ಪರಮಪುರುಷನ ಅನುಭವದ ಫಲವಾಗಿ ಹೊರಹೊಮ್ಮಿದ ಗೀತೆಗಳು ಭಾವಗೀತೆಗಳಲ್ಲವೇ? ಈ ಅಂಶವನ್ನು ಬಲ್ಲವರು ವಿಮರ್ಶಿಸಬೇಕಾಗಿದೆ.

"ಹೊಸಕವಿಗಳು ಪ್ರಕಟರಾದಾಗ ಪರೀಕ್ಷಿಸಿ ನೋಡದೆ ದೃಷ್ಟಿತಿರಸ್ಕಾರವನ್ನು ಸೂಸುವುದು ಅತ್ಯಂತ ಅನುಚಿತ'' ಎಂಬ ಕವಿವಾಣಿಯನ್ನು ಎಲ್ಲರೂ ಒಪ್ಪುವರು. ವಿಮರ್ಶಕನು ಸಹೃದಯನಾಗದಿದ್ದಲ್ಲಿ ಕಾವ್ಯರಸಾಸ್ವಾದಮಾಡಲಾರನೆಂದು ಹೊಸದಾಗಿ ಹೇಳಬೇಕಾಗಿಲ್ಲ. ಆಂಗ್ಲಭಾಷಾ ಸಾಹಿತ್ಯವಿಚಾರಗಳ ಪ್ರಭಾವಕ್ಕೆ ಒಳಗಾದ ನಮ್ಮವರೇ ನಮ್ಮ ಹಿಂದಿನವರ ವಿಚಾರಸರಣಿಯನ್ನು ಸರಿಯಾಗಿ ತಿಳಿದುಕೊಳ್ಳದೆ ಅವರನ್ನು ಟೀಕಿಸು ವುದೂ ಉಚಿತವಲ್ಲ. ಸಂಸ್ಕೃತ ಕಾವ್ಯಪ್ರಚಾರಕರು ನುಡಿದಿರುವುದರಲ್ಲಿ ತಪ್ಪೇನೂ ತೋರುವುದಿಲ್ಲ. "ಸುಕೃತಿಗಳಾದ ಕವೀಶ್ವರರು ರಸಸಿದ್ಧರು; ಅವರಿಗೆ ಕೀರ್ತಿಕಾಯದಲ್ಲಿ ಜರಾಮರಣಭಯವಿಲ್ಲ'' ಎಂಬ ಭರ್ತೃಹರಿಯ ಸುಭಾಷಿತ ಸದಾ ಸಾಧುವಾಗಿಯೇ ಉಳಿಯುವುದು. ಕಾವ್ಯದಿಂದ ಆನಂದದಂತೆಯೇ ಜ್ಞಾನ, ಯಶಸ್ಸು, ಹಣ, ವ್ಯವಹಾರಜ್ಞಾನ, ಅಮಂಗಳಪರಿಹಾರಗಳು ಉಂಟಾಗಿವೆ; ಉಂಟಾಗುತ್ತವೆ. ಭಕ್ತರ ಗೀತೆಗಳ ಪಾರಾಯಣದಿಂದ, ಪೂರ್ವಾಚಾರ್ಯರ ಮಂಗಲಾಶಾಸನದ ಪ್ರಭಾವದಿಂದ ತುರುಕರಿಂದ ಆಕ್ರಮಿತವಾಗಿದ್ದ ಶ್ರೀರಂಗದ ಸಂಪತ್ತು ಮತ್ತೆ ಚಿಗುರಿ ಬೆಳೆದಿರುವುದನ್ನರಿತವರಿಗೆ ಕಾವ್ಯಪ್ರಕಾಶಕಾರರ ಮಾತು "ಧಾರ್ಮಿಕಹೃದಯಿಗಳ ಅಸಮಂಜಸ ಕಲ್ಪನೆಯಾಗಿ ತೋರುವುದಿಲ್ಲ. ಸೂರ್ಯ-ಶತಕವನ್ನು ರಚಿಸಿದ ಸಂಸ್ಕೃತಕವಿಯ ಚರಿತ್ರೆಯನ್ನೂ ಇಂದಿನ ಕನ್ನಡ ಕವಿಗಳೊಬ್ಬರು ಕವಿತೆಯನ್ನು ರಚಿಸಿ ರೋಗಮುಕ್ತರಾದ ಸುದ್ದಿಯನ್ನೂ ತಿಳಿದವರು ಈ ಕವಿಗಳ ಆ ಮಾತನ್ನು ಒಪ್ಪುವುದಿಲ್ಲ. ಈ ಕವಿಗಳೇ "ಕಾವ್ಯ ವಾಹಿನಿಯಾಗಿ ಹರಿ''ದು, "ಹಾಡಾಗಿ ಜನವನ್ನು ತಣಿ''ಸಲು ಬಯಸಿದಾರೆ, "ಕಲೆಯಾಗಿ ಅಮರನಾಗಲು'' ಬಯಸಿದಾರೆ. ಮರ್ತ್ಯನಿಗೆ ಅಮರ್ತ್ಯನಾಗುವ ಆಸೆ ಇರುವುದು ಸಹಜ. ಅಂತೆಯೇ ಸತ್ಕವಿತೆಯಿಂದ ಕವಿ ಅಮರನಾಗು ವುದರಿಂದ ಸಂಜೀವನವಾದ ಕವಿತೆಯಿಂದ ಯಶಸ್ಸು ಬರುವುದು ಎಂಬ ಮಾತೂ ನಿಜವಾಗುವುದು. ಕಾವ್ಯವನ್ನು ಕೇಳಿದ ಒಡನೇ ಪರಮಾನಂದವಾಗುವುದು ಎಂದು ಹೇಳಿ, ಕಾವ್ಯಪ್ರಕಾಶಕರು ಅದರಂತೆ ಅದರೊಡನೆ ಉಳಿದ ಫಲಗಳೂ ಬರುವುವು ಎಂದು ನುಡಿದಿರುವುದು ಎಲ್ಲರಿಗೂ ಒಪ್ಪುವಂತಿದೆ.

ತುಂಗಾತೀರದ ಈ ಕವಿಗಳೂ "ಕುವೆಂಪು" ಅವರಂತೆ ತುಂಗಾತಟದ ಮತ್ತು ಮಲೆನಾಡ ಚೆಲುವನ್ನು ಪರಿಪರಿಯಾಗಿ ಈ ಪುಸ್ತಕದ ಹಲವು ಕವನಗಳಲ್ಲಿ ಮನೋಹರವಾಗಿ ವರ್ಣಿಸಿದಾರೆ. ಅವುಗಳಲ್ಲಿ "ಕೃಷ್ಣಾಂಬರ, ಚಂದ್ರಕಲಂಕ, ಮೇಘಾಚ್ಛಾದನ, ಸಂಧ್ಯಾ ಸೌಂದರ್ಯ, ತುಂಗಾತಟಾ ಉಷಾ, ಜಲಧರ, ನಿಸರ್ಗ ಸಂಗೀತ" ಎಂಬುವು ಮುಖ್ಯವಾದುವು. "ಮನುಜನದು ಅರೆಬಾಳು ಸೃಷ್ಟಿಸೌಂದರ್ಯವನು ಸವಿಯದಿರೆ" ಎಂಬ ಈ ಕವಿಯ ಮಾತು ನಿಜವಾದುದು. "ವಾಣಿ ವೀಣೆ ಮಿಡಿಯುತಿರೆ, ದನಿಯು ಎದೆಯ ಸುಳಿದು ಬರೆ, ಭಾವದೊರತೆ ಉಕ್ಕುತಿರೆ, ಸ್ಫೂರ್ತಿ ತನುವ ಕಂಪಿಸಿರೆ" ಕಾವ್ಯಪ್ರವಾಹ ವೇಗವಾಗಿ ಹರಿಯುವುದು. ಅದರ ತೆರೆಗಳ ಕುಣಿತಕ್ಕೆ ಒಪ್ಪುವಂತೆ 'ನಾಟ್ಯಾಂಗನೆ' ಕುಣಿಕುಣಿದು ಮನವ ನಲಿಸುವಳು. "ವಿಶ್ವಪ್ರೇಮ"ದ ಹಾರೈಕೆ ಬೇಗ ಫಲಿಸಲಿ! ಕವಿ "ಏಕಾಕಿ"ಯಾಗಿ ಹತ್ತುಸಾವಿರ ವರುಷ ಜೀವಿಸಿದರೂ ಅವನಿಗೆ ಪ್ರಕೃತಿ ಸಂಗಾತಿಯಾಗಿರುವುದರಿಂದ ಅವನ ಹೃದಯ ಆನಂದದಿಂದ ತುಂಬಿರುವುದು. ಪುಸ್ತಕ ಪುರೋಹಿತನು ಅವರ ಮದುವೆಯನ್ನು ಮಾಡಿಸುವನು. ಅಂದವಾದ ಬೆಳಗಿನಲ್ಲಿ ಹಕ್ಕಿಗಳುಲಿದರೆ "ಪುಸ್ತಕ ಲೋಕದ ಎಲ್ಲೆಯ ಮೀರಿ" ಕವಿಯೆದೆಯಲ್ಲಿ ಉಲ್ಲಾಸ ಉಕ್ಕುವುದು. ಆಗ ಅವನು "ಜಡಪುಸ್ತಕ ಮಂದಿರ"ವನ್ನು ತೆಗೆದೆಸೆದು "ಹೊರಭುವನದ ನವಜೀವನಸಿರಿ"ಯ ಚಂದಿರನಾಗುವನು. "ಬಕಧ್ಯಾನ"

ದಲ್ಲಿ ಬೆಳ್ಳಗಿರುವುದೆಲ್ಲ ಹಾಲಲ್ಲ, ಬಕಧ್ಯಾನ ಜಾರಿಸುವ ಜಲದಡಿಯ ಹಾವಸಿ" ಎಂದು ಕವಿ ಉಪದೇಶಿಸಿದಾರೆ. "ಕ್ಷಣವಿಲಾಸ", "ಅಚಿರಜೀವನ", "ನಶ್ವರ" ಗೀತೆಗಳಲ್ಲಿ ಒಳ್ಳೆಯ ಉಪಮೆಗಳಿವೆ; ಬಾಲ್ಯ, ಹರೆಯ, ಮುಪ್ಪು ಬಂದುರುಳುತ್ತವೆ; ಕರ್ಮ ಸವೆದರೆ ಜೀವನ ನಾಟಕ ಮುಗಿಯುವುದು ಎಂದು ತಿಳಿಸಿ, "ಎಲ್ಲ ಅಳಿಯುವುದು, ಮಾತು ಮಡಕೆಯ ತೂತು, ಮೌನಸ್ವರ್ಗದ ಹಾಡು" ಎಂದು ಕವಿ ಹಾಡಿದಾರೆ.

"ಜೀವನಸುಮಕುತ್ಸಾಹವೆ ಗಂಧ
ಉಲ್ಲಸವರಿಯದ ಬಾಳೇನಂದ?
ದೌರ್ಬಲ್ಯವೆ ಆಲಸ್ಯದ ಗೂಡು
ಉತ್ಸಾಹವು ಸವಿ ತೋಷದ ಜಾಡು"

ಎಂದು ತಿಳಿಸಿ "ಉತ್ಸಾಹಭಂಗ"ದ ಹಲವು ನಿದರ್ಶನಗಳನ್ನು ಕೊಟ್ಟಿದಾರೆ. ನಾಡಿನಜನಗಳ ತನುಮನಗಳ ಚಿಂತೆಯ ಉರಿಬೆಂಕಿ ಸುಡುತ್ತಿದೆ ಊರಿನ ಜನರಿಗೆ ಹಕ್ಕಿಯ ಕೊರಲ ಸವಿಯನ್ನು ಅನುಭವಿಸಲು ಮನವಿಲ್ಲ. ಆದುದರಿಂದ ಕವಿ ಕಾಡಿಗೆ ಹೋಗಿ ಗಿಳಿ ಕೋಗಿಲೆಗಳ ಸವಿಗೊರಲನ್ನು ಕೇಳುತ್ತಾ ಹಸುರಿನ ಸೊಂಪಿನ ಸವಿನೋಟದಿಂದ ಆನಂದಿಸಲು ತೆರಳ ಬಯಸುತ್ತಾರೆ.

"ಕನಸು" ಬಹು ಸುಂದರವಾದ ಗೀತೆ. "ನನಸೆಲ್ಲ ಕನಸಾಗಿ ಕನಸೆಲ್ಲ ನನಸಾಗೆ ಎನಿತು ಸೊಗವೀ ಜಗವು" ಎಂದು ಕವಿಯಂತೆ ನಮಗೂ ಅನ್ನಿಸುತ್ತದೆ "ಹೊಲ್ಲಮಾತಿನ ಬದಲು, ಎಲ್ಲ ಕಾರ್ಯದ ಬದಲು, ಕನಸ ನನಸಾಗಿರಿಸೆ ಜನುಮ ಚೆಲುವು" ಎಂದು ನಾವೂ ಒಪ್ಪಿ ಕವಿಯಂತೆ ಜಗದಳಲನ್ನು ಕಳೆದು ಅದಕ್ಕೆ ಮುದವ ತರಲು ಕನಸ ನನಸಾಗಿಸುವ ಶಕ್ತಿಯನ್ನೀಯಲು ಪರಮಪುರುಷನನ್ನು ಪ್ರಾರ್ಥಿಸೋಣ. ಸಂಜೆಯಲ್ಲಿ "ಹಾಡುವ ಹಕ್ಕಿಯ ಹೊನ್ನಿನ ಕೊರಲನ್ನು ಕೇಳಿ" ಕವಿ ಮೈಮರೆತು ಮನ ನಾಕದಿ ನೆಲಸಿದ ಪರಿಯನ್ನು "ಸಂಧ್ಯಾ ಸೌಂದರ್ಯ" ಚೆನ್ನಾಗಿ ವರ್ಣಿಸುತ್ತದೆ. "ಪ್ರತೀಕ್ಷೆ" ಮತ್ತು "ದೀನಕವಿ" ಎಂಬ ಕವಿತೆಗಳಲ್ಲಿ ಭಾವದೇವತೆಗೂ ಕಾವ್ಯದೇವಿಗೂ ಕವಿ ಆಹ್ವಾನವೀಯುತ್ತಾರೆ. ಯುಗಾದಿಯ ದಿನ ಆದಿತ್ಯನ ಉದಯವನ್ನು ಕಂಡು 'ಅರಿವಿನ ದಿನಕರ ಉದಿಸಲು, ತಮದ ಯುಗವಳಿಯಲು, ಜ್ಞಾನದ ಒಲುಮೆ"ಯಿಂದ ತುಂಬಿ, "ಅರಳಿದ ಕವಿಯೆದೆ" ನಲಿದು ಕವನವ ರಚಿಸಲು ಬೇಡುವುದು. ಹೊಸವರುಷದಲ್ಲಿ ಮಾಯೆ ಹರಿಯಲಿ, "ಅರೆತಿಳಿಯಾದ ಮತಿ"ಯೊಡನೆ ಹೊಸ ಶಕ್ತಿ ಹರ್ಷಗಳು ಬರಲಿ ಎಂದು ಕವಿ ಹಾರೈಸುತ್ತಾರೆ. ಆದರೆ ಬಾಳಿನಲ್ಲಿ ಆಗಾಗ ಉತ್ಸಾಹವಡಗುವುದು. ದೇಹ ಜಡವಾಗಿ ಮನ ಸೋಲುವುದು. ಆಗ ಕವಿಗೆ ಹೀಗೆನಿಸುವುದು:

"ದೀರ್ಘ ನಿದ್ರೆಯೆ ಶರಣು ಉತ್ಸಾಹ ಬರುವನಕ
ಆಸೆ ಮೊಳೆಯುವತನಕ ಬಾಳ ಸವಿ ಬೆಳೆವನಕ"

ಮಳೆ ಆಗಸದೇವಿಯ ಆನಂದಬಾಷ್ಪ, "ಮಾನವ ಹೃದಯದ ಕೊಳೆಯನು ತೊಳೆಯಲು" ನೀರನ್ನು ತರುವುದೆಂದು ಕವಿ ಬಗೆದಿರುವುದು ಮನೋಹರವಾಗಿದೆ. "ಜೀವನ ಅಚಿರವಾದುದರಿಂದ ಸುಖವೊದಗಿದಾಗ ನಾವು ನೆನ್ನೆ ನಾಳೆಗಳ ಚಿಂತೆಯನ್ನು ತೊರೆದು ಸಂತೋಷಪಡಬೇಕು. ಸಂತಸವು ದೇವನಿತ್ತಿಹ ಕುಸುಮ" ವೆಂದರಿತು ಅದನ್ನು ಸ್ವೀಕರಿಸಿ ನಾವು ನಲಿದಾಡಬೇಕೆಂದು "ಭವಿಷ್ಯತ್" ಸಾರುತ್ತದೆ. "ನೂತನ"ದಲ್ಲಿ,

ಹೊಸತ ತಾನು ತಿಳಿದು ಇರಲು ಹಳೆಯದಾಗಿದೆ
ಹಳೆಯದನ್ನು ಅರಿಯದಿರಲು ಹೊಸತೆ ಆಗಿದೆ"

ಎಂಬ ತತ್ತ್ವ ಸೋದಾಹರಣವಾಗಿ ವರ್ಣಿತವಾಗಿದೆ.

"ನಾಟಕದ ಹೆಣ್ಣು" ತನ್ನ ಪಾತ್ರದಲ್ಲಿ ತಲ್ಲೀನಳಾಗಿ ಅಭಿನಯಿಸಿದರೂ ಉಳಿದ ಪಾತ್ರಧಾರಿಗಳು ಅಂತಹ ತಾದಾತ್ಮ್ಯವನ್ನು ಪಡೆಯದಿರುವುದನ್ನು ಕಂಡು ಹೀಗೆ ನುಡಿಯುವಳು:

"ರತಿಯ ನೃತ್ಯವ ನೋಡಿ ಅವರೆದೆಯು ಕುಣಿಯುವುದು ಪಾದದೊಡನೆ
ಬಿನ್ನಾಣ ಬಡಿವಾರ ಉಲ್ಲಸವನುಸುರುವುದು ಅವರ ಮನದೊಳಗೆ"
"ನಟಿಯ ಪದವಿಯನೊಲಿದು ಕರುಬುವರು ಚೆಲುವೆಯರು.
ಸಭಿಕರಲಿ ನಾ ಕುಳಿತು ನಲಿವ ಸೊಗವೆಂದೋ ?"

ಎಂದು ನಟಿ ಕೊರಗುವಾಗ ಅವಳಿಗಾಗಿ ನಮ್ಮ ಎದೆಯೂ ಮರುಗುವುದು. ಹುಣ್ಣಿಮೆ—ಅಮಾವಾಸ್ಯೆಯನ್ನು ಕುರಿತ ಎರಡು ಗೀತಗಳೂ ಕಲಾ-ವಿಜ್ಞಾನಗಳ ದೃಷ್ಟಿಭೇದವನ್ನು ಚೆನ್ನಾಗಿ ತೋರಿಸುತ್ತವೆ. "ಜನವ ನಲಿಸಿ ತಿರೆಯ ತಣಿಸುವ" ಚಂದ್ರನು "ಅಮಿತ ಲಕ್ಷ ತಾರೆ ಜೊತೆಗೆ ಸೆಣಸಲು ಬೆಳಗೆ ಅಸುರತಮದ ವಕ್ಷವಹೊಗುವನು" ಎಂದು ಕಲಾವಿದ ನುಡಿದರೆ ವಿಜ್ಞಾನಿ ಇಂತೊರೆಯುವನು :—ರವಿಯ ಕಿರಣಗಳು ಚಂದ್ರನಮೇಲೆ "ಬೀಳುತಿರೆ ಪೂರ್ಣಶಶಿ ಅದನಿಳೆಗೆ ಬಿಂಬಿಸಿ"ದಾಗ ಹುಣ್ಣಿಮೆಯು "ಮೇದಿನಿಯು ಶಶಿ ಇವರ ನಡು ಬಂದು ಬೆಳಕೆಲ್ಲ ತಡೆಯುತಿರೆ, ಚಂದಿರನು" ಮರೆಯಾಗಿ ನಿಲ್ಲುವನು; ಅಂದೇ "ಅಮಾವಾಸ್ಯೆ" ದಿಕ್ತಟದಿ ಜನಿಸುವನು, "ಎದುರಿನಲಿ ಅಳಿಯುವನು" ಎಂಬುದೆಲ್ಲ ಬರಿಸುಳ್ಳು; "ದುಂಡುಧರೆ ಚಂದಿರರು ವ್ಯೋಮದಲ್ಲಿ ಬಳಸುತಿರೆ ಅಂತೆಮಗೆ ತೋರುವುದು." ಈ ವಿಶ್ವನಿಯಮಗಳು ಬಿಗಿಯಾಗಿವೆ ಎಂದು ವಿಜ್ಞಾನಿ ಉಪದೇಶಿಸುವನು.

"ನೀರು ಹರಿಯುವುದು" ಏಕೆ ಎಂದರೆ, ಫಲದಾಸೆಯನ್ನು ತೊರೆದು ತನ್ನ ಕಾರ್ಯವನ್ನು ಚೆನ್ನಾಗಿ ಮಾಡಿದರೆ ಮುಕ್ತಿ ಬರುವುದು, ಎಂದು ಸಾರುತ್ತಾ ನೀರುಹರಿಯುವುದು ಎಂದು ವರ್ಣಿಸುವರು. ಈ ಪದ್ಯ ಪ್ರಕೃತಿಯ ಕವಿಯಾದ ವರ್ಡ್ಸ್‌ವರ್ತ್ ರಸಋಷಿಯ 'ಪ್ರಕೃತಿ ನಿನ್ನ ಗುರುವಾಗಿರಲಿ' ಎಂಬ ವಾಣಿಯನ್ನು ನೆನಪಿಗೆ ತರುವುದು.

"ರಂಜನ"ದಲ್ಲಿ ಕವಿಗಳು ಹಲವು ಹೊಸಛಂದಸ್ಸುಗಳನ್ನು ಪ್ರದರ್ಶಿಸಿದಾರೆ. "ಬಾನ್-ಬನ" ಮತ್ತು "ವೇದಾಂತ" ಎಂಬ ಎರಡು ಕವಿತೆಗಳಲ್ಲಿ ಎರಡು ಮಾತ್ರೆಗಳ ಸಾಲುಗಳಿವೆ. "ಬನದಸಿರಿಗೆ ಮನ ಹಿರಿಹಿಗ್ಗಿತು, ಬಾನ್ ಸೊಕ್ಕಿತು, ಜನ ಕಿಲಕಿಲ ನಕ್ಕಿತು. ಈ ಬುವಿಯಲಿ ಉಲಿ ಸವಿ. ಜನನವ ಮರಣವ ಮರೆತಿರೆ ಜೀವನ ಪಾವನ" ಎಂದು ಈ ಕವಿ ತಮ್ಮ ಮತವನ್ನು ಹೊಸಧಾಗಿ, ಇನಿದಾಗಿ ಸಾರಿದಾರೆ.

"ಆಶಾ" ಎಂಬ ಕವನದಲ್ಲಿ ಆಸೆ-ನಿರಾಸೆಗಳು ಹಗಲು-ರಾತ್ರಿಗಳಂತೆ ಒಟ್ಟಿಗೆ ಇರುತ್ತವೆ. "ಹುಣ್ಣಿಮೆ ಬೇಕೆನಲು ಅಮಾವಾಸ್ಯೆಯನುಣ್ಣು. ಬೇಸಗೆಯ ಉರಿಯಿರದೆ ಮಳೆ ಎಂತುಬಂತು? ಮಳೆಯ ತಣ್ಪಲಿ ನಲಿಯೆ ಬೇಯಬೇಕುರಿಯಲಿಂತು. ವಿರಹದೊಡನೆಯ ಕೂಟ ಸವಿಯಸಕ್ಕರೆಯೂಟ" ಎಂದು ಕವಿ ನುಡಿದಿದಾರೆ. ಚೆಲುವಿನಾಗರವಾದ ಈ ವಿಶ್ವದಲ್ಲಿ ಕೀಳ್ ಮನುಜರ ಗರ್ವ ಮದವ ಕೊಲ್ಲಲೆಳಸುವುದು. ಆದುದರಿಂದ ಜನರೆಲ್ಲ ಶೋಕಕ್ಕೆ ತುತ್ತಾಗುವರು. ಆದಕಾರಣ ಬಂಧುರದ ಧರೆಯಲ್ಲಿ ಪ್ರಕೃತಿಯಿತ್ತಿಹ

ಸುಖವನ್ನುಂಡು ಜನರಿಗೆ ಉಣಿಸಿ ಮನವ ಸಂತೃಪ್ತಿಪಡಿಸಲು ಬೇಕೆಂದು ಕವಿ "ಏತಕೀಪರಿ ನೋವು?" ಎಂಬ ಗೀತೆಯಲ್ಲಿ ಹಾರೈಸಿದಾರೆ. "ಜಸದ ಸಿರಿಕನ್ನೆ ಮಹಿಮನನು ಒಲಿದೆ ಒಲಿಯುವಳು. ಕೀರ್ತಿ ಕಾಮಿನಿ ಸುಕೃತರ ಬಿಡದೆ ಅಪ್ಪುವಳು" ಎಂಬುದಾಗಿ ಈ ಕವಿ "ಕೀರ್ತಿ" ಎಂಬ ಅಷ್ಟ-ಷಟ್ಪದಿಯಲ್ಲಿ ಹಾಡಿ ಒಂದೇ ಕೀರ್ತಿಗಾಗಿ ದುಡಿಯುವವರ ಬಯಕೆಯನ್ನು ಹಳಿದು ಯಶೋದೇವಿಯನ್ನೆಲ್ಲರೂ ಕಾಣುವುದಸಾಧ್ಯವೆಂದು ಸಾರಿದಾರೆ. ಹಕ್ಕಿಗಳು ಸುಖವಾಗಿ ತಮಗೆ ಸಿಕ್ಕಿದ ಕಾಳನ್ನುಂಡು ಗೂಡಲ್ಲಿ ನೆಲಸಿ ಉಲ್ಲಾಸದ ತೌರಾಗಿ ಸುಖವ ಸೂಸುತ್ತ ಹಾಡುವುದನ್ನು ಕೇಳಿ ಕವಿ ಹೀಗೆ ನುಡಿಯುವುದನ್ನು ಕೇಳಿ ಸಹೃದಯನ ಎದೆ ತವಕಗೊಳ್ಳುವುದು.

"ಏತಕೆ ಈ ಸಂಸ್ಕೃತಿ ಧನ ವಿದ್ಯೆಯು ಒಣ ಓದು
ಸುಖ ಕಾಣದೆ ತೊಳಗಿ। ಕಡುಶೋಕದಿ ಮುಳುಗಿ।
ರೇಜಿಗೆ ಪಡುತಿದೆ ಮನ ಗೋಳ್ ನೋವುಗಳಲಿ ಕಾದು."

'ರಂಜನ'ವು ರಸಿಕರ ಮನವನ್ನು ಸಂತೋಷಪಡಿಸುವುದರಲ್ಲಿ ಸಂಶಯವಿಲ್ಲ. ಕೆಲವು ದೋಷಗಳನ್ನು ತಿದ್ದಿಕೊಂಡರೆ ಈ ಕವಿಗಳಿಂದ ಕನ್ನಡ ಸಾಹಿತ್ಯಕ್ಕೆ ಈ ಗೀತೆಗಳಿಗಿಂತ ಉತ್ತಮವಾದ ಕವನಗಳು ಕಪ್ಪವಾಗಿ ಸಲ್ಲುವುವು ಎಂಬ ಆಸೆಯಿಂದ ಕೆಳಗೆ ಕೆಲವು ಸೂಚನೆಗಳನ್ನು ಮಾಡಿದೆ.

"ಸ್ವಾರ್ಥ ತ್ಯಾಗದ ಸವಿ ಸಂಬಂಧವು" ಎಂಬ ಚರಣದಲ್ಲಿ ಅನುಪ್ರಾಸವಿದ್ದರೂ "ಸವಿ" ಎಂಬ ಪದ ಹಿಂದಿನ ಮತ್ತು ಮುಂದಿನ ಸಂಸ್ಕೃತ ಶಬ್ದಗಳಿಗೆ ಅನುರೂಪವಾಗಿಲ್ಲ. "ಸರುವ ರಚಿಸದಿರಲಿ" ಎಂಬ ಚರಣದಲ್ಲಿ "ಎಲ್ಲ ರಚಿಸದಿರಲಿ" ಎಂದರೆ ಯಾವ ನಷ್ಟವೂ ಆಗದು. ಕನ್ನಡಶಬ್ದಗಳನ್ನೇ ಆದಷ್ಟು ಬಳಕೆಗೆ ತರುವುದು ಒಳ್ಳೆಯದು. ಸಂಸ್ಕೃತಶಬ್ದಗಳನ್ನು ಕನ್ನಡಿಸುವಾಗಲೂ ಎಚ್ಚರಿಕೆ ಇರಬೇಕು. 'ಸೀತಾ' 'ಸೀತೆ' ಎಂದು ಆಗುವಂತೆ 'ಅಂಗನಾ' ಶಬ್ದ "ಅಂಗನೆ" ಎಂದಾಗುವುದು. ಆದರೆ ಇವರು "ಸುಂದರಾಂಗಿನಿ" "ಭಾವನಾಂಗಿನಿ" ಎಂದು ಪದಪ್ರಯೋಗ ಮಾಡಿದಾರೆ. ಇವುಗಳ ಬದಲು ಹಳೆಯ ಸರಿಯಾದ ರೂಪಗಳನ್ನು ಕವಿಗಳು ಬಳಸುವುದು ಒಳ್ಳೆಯದು. ಕನ್ನಡದಲ್ಲಿ ಕವಿತೆ ಬರೆಯುವವರು ಕನ್ನಡದಲ್ಲಿ ಸುಲಭವಾದ ಪದಗಳಿರುವಾಗ ಅವುಗಳ ಬದಲು ಸಂಸ್ಕೃತರೂಪಗಳನ್ನು ಬಳಸುವುದರ ಅಗತ್ಯವಿಲ್ಲವೆಂದು "ಅಂಬಿಕಾತನಯದತ್ತ"ರ, "ಶ್ರೀಧರ"ರ, "ಶ್ರೀ" ಯವರ ಮತ್ತು "ಶ್ರೀನಿವಾಸ"ರ ಕವಿತೆಗಳಿಂದ ಸ್ಪಷ್ಟವಾಗಿರುವಾಗ ನಮ್ಮ ಹೊಸಕವಿಗಳು ಅನವಶ್ಯಕವಾಗಿ "ತವಧ್ಯಾನ" "ಸರಸ್ಸ" ಎಂದು ಮುಂತಾಗಿ ಏಕೆ ಬಳಸುವರೋ? "ತುಂಗಾತಟ"ದಲ್ಲಿ "ಸರಸ್ಸತೋರಿದೆ" ಎಂಬುದರಲ್ಲಿ ಮೊದಲ ಪದದ ಬದಲು ಬೇರೊಂದನ್ನು ಬಳಸಿದರೆ ಕಿವಿಗಿಂಪಾಗಿಯೂ ಇನಿದಾಗಿಯೂ ಆಗುವುದಲ್ಲದೆ ಅರ್ಥವೂ ಸುಲಭವಾಗಿ ತಿಳಿಯಲು ಅನುಕೂಲವಾಗುವುದು.

—ಅ. ನ. ಶ್ರೀನಿವಾಸೈಯಂಗಾರ್

**ಪ್ರೇಮ ಕಾಶ್ಮೀರ:** 'ಕುವೆಂಪು' ವಿರಚಿತ; vi+೭೪ ಪುಟಗಳು; ಬೆಲೆ ರೂ. ೧-೮-೦; ಪ್ರಕಾಶಕರು: ಕಾವ್ಯಾಲಯ, ಮೈಸೂರು.

ಕಾಶ್ಮೀರ ಭರತಮಾತೆಯ ವದನಾರವಿಂದದಂತೆ ಕಂಗೊಳಿಸುವ 'ಮಿಗಿಲು ರಮ್ಯದ ಬೀಡು;' ಶಾರದೆಯ ಪೀಠ; ರಸಿಕರಿಗೆ ನಂದನವನ; ಹುಡುಗರಿಗೆ ಕ್ರೀಡಾವನ;

ಪ್ರಣಯಿಗಳಿಗೆ ಉದ್ಯಾನವನ; ವೃದ್ಧರಿಗೆ ತಪೋವನ; ಭಕ್ತರಿಗೆ ಪುಣ್ಯಭೂಮಿ; ದಿವ್ಯದೇಶ; ಸೌಂದರ್ಯಾರಾಧಕರಿಗೂ ಕವಿಗಳಿಗೂ 'ಆನಂದದಾಗರ.' ಆದರಂತೆಯೇ ಪ್ರೇಮವೂ ಮಾನವನ ಜೀವನಕ್ಕೆ ತಂಪನ್ನೂ ಸಂತೋಷವನ್ನೂ ನೀಡುವ ಅಮೂಲ್ಯ ಭಾವನೆಗಳ ಆಗರ; 'ಕಾಶ್ಮೀರ' ಕುಸುಮದಂತೆ ಜೀವನಲತೆಯಲ್ಲಿ ಅರಳಿ 'ಆನಂದಗ್ರಂಥಿ' ಯ ಫಲವನ್ನೀಯುವ ಸುಮಧುರ ಕುಸುಮ. ಆದುದರಿಂದಲೇ ಹೊಸಗನ್ನಡ ಕವಿಗಳಲ್ಲಿ ಹಿರಿಯ ಹೆಸರನ್ನು ಗಳಿಸಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಹಲವಾರು ವರ್ಷಗಳಿಂದ ಕನ್ನಡ ಸಾಹಿತ್ಯ ಪಾಠಪ್ರವಚನವನ್ನು ಮಾಡುತ್ತಿರುವ ಶ್ರೀಮಾನ್ ಕುಪ್ಪಳ್ಳಿ ವೆಂ. ಪುಟ್ಟಪ್ಪ, ಎಂ.ಎ. ಅವರ ಪ್ರೇಮಗೀತಗಳ ಈ ಮಾಲೆಗೆ, "ಕನ್ನಡ ಕಾವ್ಯಮಾಲೆ" ಯ ೪ಗನೆಯ ಕುಸುಮವಾಗಿ ಅರಳಿರುವ ಗೀತಗಳ ಗೊಂಚಲಿಗೆ, 'ಪ್ರೇಮ ಕಾಶ್ಮೀರ' ಎಂಬ ಹೆಸರು ಎಲ್ಲ ಬಗೆಯಲ್ಲೂ ಒಪ್ಪುತ್ತದೆ.

ಹೊಸಗನ್ನಡ ಕವಿಗಳೆಲ್ಲರೂ ಸಾಮಾನ್ಯವಾಗಿ ಪ್ರಣಯಗೀತೆಗಳನ್ನು ರಚಿಸಿದ್ದಾರೆ. ಆದರೆ ಎಲ್ಲರ ಪ್ರಣಯಗೀತೆಗಳೂ ಪುಸ್ತಕ ರೂಪದಲ್ಲಿ ಒಂದೇ ಕಡೆ ಮುದ್ರಿತವಾಗಿಲ್ಲ. ಶ್ರೀಮಾನ್ ತೀ. ನಂ. ಶ್ರೀ. ಅವರ 'ಒಲುಮೆ,' ಶ್ರೀ. ಕೆ. ಎಸ್. ನರಸಿಂಹಸ್ವಾಮಿಯವರ 'ಮೈಸೂರ ಮಲ್ಲಿಗೆ' ಮತ್ತು "ಐರಾವತ," ಅಂಬಿಕಾತನಯದತ್ತರ" "ಕಾಮಕಸ್ತೂರಿ," ಶ್ರೀ. ಬೆಟಗೇರಿ ಕೃಷ್ಣಶರ್ಮರ "ಒಡನಾಡಿ" ಎಂಬ ಐದು ಕವಿಗಳ ಸಂಗ್ರಹಗಳು ಮಾತ್ರ ಇದುವರೆಗೆ ಪ್ರಕಟವಾಗಿವೆ. ಇವುಗಳ ಜತೆಗೆ ಶ್ರೀ. ಅ. ನ. ಕೃಷ್ಣರಾಯರು ಪ್ರಕಟಿಸಿರುವ "ಪ್ರಣಯಗೀತೆಗಳು" ಎಂಬ ಮುದ್ದಾದ ಪುಟ್ಟ ಪುಸ್ತಕದಲ್ಲಿ ಹೊಸಗನ್ನಡದ ಕೆಲವು ಹಿರಿಯ ಕವಿಗಳ ಪ್ರೇಮಗೀತೆಗಳು ಸೇರಿವೆ ಎಂದು ಹೇಳಬೇಕಾಗಿದೆ. ಉಳಿದ ಕವಿಗಳ ಪ್ರಣಯಗೀತೆಗಳೂ ಇವುಗಳಂತೆ ಬೇಗ ಪ್ರಕಟವಾಗಲಿ ಎಂದು ರಸಿಕರೆಲ್ಲರೂ ಹಾರೈಸುವರು.

'ಪ್ರೇಮ ಕಾಶ್ಮೀರ'ದಲ್ಲಿ ಒಟ್ಟು ೫೬ ಗೀತೆಗಳಿವೆ. ಇವುಗಳಲ್ಲಿ ಕೆಲವು ಕನ್ನಡಿಗರಿಗೆ ಈ ವೇಳೆಗೆ ಪರಿಚಿತವಾದವು; ಉಳಿದವು ಹೊಸದಾಗಿ ಇಲ್ಲಿ ಪ್ರಕಟವಾಗಿವೆ. 'ಹೋದ ಬಾಳ ಬೆಳಕು' ಎಂಬ ಕವನದ ಶೈಲಿಯಲ್ಲೇ ಸಂಸ್ಕೃತದ ಸುಂದರವಾದ ಶೃಂಗಾರ ಪದ್ಯಗಳನ್ನೂ ನಮ್ಮ ಹೊಸಕವಿಗಳು ಅನುವಾದಿಸಿ ಪ್ರಕಟಿಸಿದರೆ ರಸಿಕರಿಗೆ ಬಹಳ ಉಪಕಾರವಾದೀತು. 'ಒಲುಮೆ' ಯ ಕೊನೆಯಲ್ಲಿ ಸಂಸ್ಕೃತ, ಪ್ರಾಕೃತ, ಗ್ರೀಕ್ ಮತ್ತು ಇಂಗ್ಲಿಷ್ ಕವನಗಳ ರಮ್ಯವಾದ ಪರಿವರ್ತನಗಳಿವೆ. ಅವುಗಳಂತೆ ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿರುವ ಉತ್ತಮವಾದ ಶೃಂಗಾರ ರಸಪೂರ್ಣವಾದ ಪದ್ಯಗಳನ್ನು ಪರಿವರ್ತಿಸಿ ಒಂದೆಡೆ ಪ್ರಕಟಿಸಬೇಕಾದ ಕಾರ್ಯವಿದೆ ಎಂದು ಇಲ್ಲಿ ಸೂಚಿಸುವುದು ಅನುಚಿತವಾಗಲಾರದು.

'ಕನ್ನಡ ನುಡಿ' ಯ ಕಳೆದ ಸಂಪುಟದ ಕೊನೆಯ ಸಂಚಿಕೆಯಲ್ಲಿ ಶ್ರೀ. ಪುಟ್ಟಪ್ಪನವರ ಪರಿಚಯವನ್ನು ಒಂದು ಲೇಖನ ಮಾಡಿಕೊಡುತ್ತದೆ. ಶ್ರೀ. ಪುಟ್ಟಪ್ಪನವರು "ಕನ್ನಡದ ಮಲೆನಾಡಿನ ತುಂಗಾತೀರದ ನೇಗಿಲ ಯೋಗಿಗಳ" ಕುಲದಲ್ಲಿ ಹುಟ್ಟಿದ ಕವಿ ಕೋಕಿಲ. 'ಕಿಶೋರ ಚಂದ್ರವಾಣಿ' ಯ ಪ್ರತಿಭೆಯನ್ನೂ 'ಕೊಳಲಿ'ನ ಸವಿದನಿಯನ್ನೂ 'ಪಾಂಚಜನ್ಯ'ದ ಘೋಷವನ್ನೂ ಹೊಸದಾಗಿ ಕನ್ನಡಿಗರಿಗೆ ಸಾರಬೇಕಾಗಿಲ್ಲ. "ವಾಲ್ಮೀಕಿಯ ಭಾಗ್ಯ" ವನ್ನು ಬಹಿರಂಗಪಡಿಸಿ, ಹಳಗನ್ನಡದ ಹಿರಿಯ ಕವಿಗಳಿಗೆ ಪ್ರಬಂಧ ಕುಸುಮಾಂಜಲಿ ಯನ್ನರ್ಪಿಸಿ, ತಮ್ಮ ಹೊಸಕವನ ಮಾಲೆಗಳಿಂದ ಕನ್ನಡ ನುಡಿಯ ದೇವಿಯನ್ನು ಆರಾಧಿಸುತ್ತಿರುವ 'ಕುವೆಂಪು' ಅವರು ಚಿರಕಾಲ ಕನ್ನಡ ನಾಡಿನ ಪ್ರಖ್ಯಾತ ಪ್ರಕಟನ ಸಂಸ್ಥೆಯಾದ "ಕಾವ್ಯಾಲಯ" ಕ್ಕೆ ಹಿರಿಯ ಆಸರೆಯಾಗಿ ಬಾಳುತ್ತಿರಲಿ!

"ಪ್ರೇಮ ಕಾಶ್ಮೀರದ" ದಲ್ಲಿ ಕವಿಗಳು 'ಪ್ರಣಯಸಂಹಿತೆ' ಯನ್ನು ರಚಿಸಿದ್ದಾರೆ ಎನ್ನಬಹುದು. ಸಮರ್ಪಣೆಯಲ್ಲಿ ಬರುವ ಈ ಭಾವನೆ, ಪ್ರೇಮದಿವ್ಯವಾದುದು, ಒಲುಮೆಗೆ ಅವಸರವಿಲ್ಲ, ಅದು "ಜನುಮ ಜನುಮದಾಟ," ಎಂದು ತಿಳಿಸುತ್ತದೆ:—

"ದೇವನಿಚ್ಛೆಗಿದಿರೆ ಹೇಳು ನನ್ನ ನಿನ್ನ ಬೇಟ ?
ಅವನು ಒಪ್ಪುವನಕ ತಾಳಲೆಮ್ಮ ನೇಹ ನೋಟ:
ಅವನು ಒಪ್ಪಿದೊಲವೆ ನಮಗೆ ಬಾಳೊಳಮೃತದೂಟ
ಅವನು ಒಪ್ಪದಿರಲು ಅದುವೆ ಮೃತ್ಯು ಕಾಳಕೂಟ
ಅವಸರವೇಕೊಲಿವುದೆಮಗೆ ಜನುಮ ಜನುಮದಾಟ !"

ಶ್ರೀ 'ಕುವೆಂಪು' ಅವರು ಈ ಗೀತೆಗಳಲ್ಲಿ ಚಿತ್ರಿಸಿರುವ ನಲ್ಲೆನಲ್ಲೆಯರ ಪ್ರೇಮ ಆದರ್ಶವಾದುದು. ಅದು ಅವರ ಅನುಭವದ ಸಾರ, ಅಂತೆಯೇ ರಸಿಕರ ಮನಸಿಗೆ ವಿಹಾರ. ಈ ಗೀತೆಗಳಲ್ಲಿಯೂ ಪ್ರಕೃತಿಯ ಮಲೆನಾಡಿನ ಚೆಲುವಿನ ವರ್ಣನೆಗೆ ಮೀಸಲಾದ ಹಲವು ಕವನಗಳು ಇವೆ. ಅವುಗಳಲ್ಲಿ "ಜ್ಯೌತಿಯ ಚಂದ್ರ, ಶಿಶು, ಬಿದಿಗೆಯ ಚಂದ್ರ, ಶಶಿಕಲಾ, ದುರ್ದಿನ, ಮುಗಿಲಲೀಲೆ" ಎಂಬ ಕವಿತೆಗಳಲ್ಲಿ ಬರುವ ಪ್ರಕೃತಿಯ ವರ್ಣನೆ ಬಹು ಸುಂದರವಾಗಿದೆ. ಕಾಮನಬಿಲ್ಲಿನಂತೆ ಹರನ ಜಡೆಯ ಚಂದ್ರನಿರುವನಂತೆ! "ಹಸುರಿನುಯ್ಯಾಲೆಯಲಿ ಬಿಸಿಲು ತೂಗಾಡು" ವುದು! "ಮೌನದ ಮಡಿಲಲಿ ಹಸುರು ಹಸಲೆಯಲಿ" ಪ್ರಿಯೆ ಎಂದಿಗೆ ಬರುವಳೆಂದು ಚಿಂತಿಸುತ್ತಾ ರಸಿಕ ಪ್ರಣಯಿ ಒಂಟಿಯಾಗಿ ಮಲಗುವನು. "ಕತ್ತಲೆಯ ಮಡಿಲಲ್ಲಿ ಮುಗಿಲ ಮಲ್ಲಿಗೆಗೊಂಡೆ ಬೆಳ್ಳನೆ ಬೆಳಗುವಂತೆ," ತೇಲಾಡುವುದು. ಧರೆಯೆಲ್ಲ "ಬೆಳ್ದಿಂಗಳಲಿ ಮಿಂದು" "ಹಿಂಜಿದರಳೆಯ ಬಂಡೆ ಬಾನ್ನೀಲಿ ನೀರಿನಲಿ ತೇಲ್ವಂತೆ ಬಿಳಿಮುಗಿಲು ಮೆರೆಯೆ," ಹುಣ್ಣಿಮೆಯಿರುಳು ಹಗಲು ನಗುತ್ತಾ ನಲಿಯುವುದು ಎಂದು ಫಾಲ್ಗುಣದ ಹುಣ್ಣಿಮೆಯನ್ನು ಕವಿ ವರ್ಣಿಸಿದಾರೆ. ಮಳೆಮುಗಿಲ ಮಬ್ಬು ಆಗಸವನ್ನು ಕವಿದರೆ ಸೃಷ್ಟಿಯ ಕರಿಹುಬ್ಬು ಗಂಟಿಕ್ಕಿರುವಂತೆ ಕಾಣುವುದೆಂಬ ಉತ್ಪ್ರೇಕ್ಷೆ ರಮ್ಯವಾಗಿದೆ. "ಮುಗಿಲಲೀಲೆ" ಯನ್ನು ವರ್ಣಿಸುತ್ತಾ ಕವಿ ಬಾನಿನ ಜಗಲಿಯ ನೀಲಿಯಲಿ ಆಡುವ ಬಿಳಿಮುಗಿಲನ್ನು ಕೂಸೆಂದು, "ಹಡಗಿನ ಪಟ" ವೆಂದು, "ನಿದ್ದೆಯ ಹಂಸ" ವೆಂದು, "ಬೆಣ್ಣೆಯ ಮುದ್ದೆ" ಎಂದು, ಬಿಳಿಗನಸಿನ ಶಿಶುವೆಂದು ಪರಿಪರಿಯಾಗಿ ವರ್ಣಿಸಿರುವುದು ಸೋಜಿಗವಾಗಿದೆ.

ಈ ಸುಂದರವಾದ ಪ್ರಕೃತಿಯ ಹಿನ್ನೆಲೆಯಲ್ಲಿ ಬೆಳಗುವ ಕವಿಕಲ್ಪಿತ–ಅನುಭವ ಚೈತನ್ಯದೀಪ್ತ–ದಂಪತಿಗಳ ಬಾಳು ಓದುಗರ ಮನವನ್ನು ಅಪಹರಿಸುತ್ತದೆ. ರಸಿಕನಿಗೆ ತನ್ನವಳು "ಗುರುವಿತ್ತ ಪರಮಭಿಕ್ಷೆ, ಧರ್ಮರಕ್ಷೆ," ಅವಳ ನೆನಪೆ ಅವನ ಪ್ರೇಮದ ಹೃದಯಕ್ಕೆ ನೀತಿಶಿಕ್ಷೆ; ಆಕೆ ಅಮೃತದ ಸುಖವನ್ನೀಯುವ ಶಿಶುಚಂದ್ರನುದಯಿಸುವ "ದಿಶಾದೇವಿ." ಆ ಪ್ರಣಯಿ "ಜೀವನ ಪಂಕದಿ ಜೀವದ ಕಮಲವ ಪ್ರೇಮದಿ ಸಾಕು" ವನು. ಕೆಸರಿನಲ್ಲಿ ಅಳಿಯುತ್ತಿದ್ದ ಹೂವನ್ನು ಮನದನ್ನೆ "ಮುದ್ದಿಸಿ ಮುಡಿದರೆ" ಪ್ರಿಯನು ಮರ್ತ್ಯನಾದರೂ ಅವಳ "ಪ್ರೇಮ ಮಕರಂದ" ವನ್ನು, ಪ್ರಣಯ ರಸಾಮೃತವನ್ನು, ಕುಡಿದು ಅಮರನಾಗುವನು, ಸಾವನ್ನು ಗೆಲ್ಲುವನು. "ಹೃದಯ ಕಮಲ" ದಿ ಇರುವ "ಪ್ರೇಮಮಕರಂದ" ವನ್ನು "ಅಧರ ಚುಂಬನದಿಂದ ಸವಿಯಲು ಬಾ" ಎಂದು ಹೂವು ದುಂಬಿಯನ್ನು ಕೋರುವಂತೆ ನಲ್ಲೆನಲ್ಲೆಯರಿಗೆ ಪರಸ್ಪರ ಆಹ್ವಾನವಿದೆ. ಸೊಬಗನ್ನು ಹಳಿಯಬಾರದು; ಸೊಬಗು

ದೇವನ ಅಂಶ. ಪರಮಪುರುಷನು ಸೃಜಿಸಿರುವ ಸೃಷ್ಟಿಯೆಲ್ಲ ಪರಸ್ಪರ ಆಲಿಂಗನದಿಂದ ಮೋಹಕವಾಗಿ ತೋರುವುದರ ಪಾಠವೇನೆಂದರೆ ಪ್ರೇಮದಿಂದ ಎಲ್ಲರೂ ಆಲಿಂಗಿಸ ಬೇಕು ಎಂಬುವುದೇ. "ರವಿ ಧರೆಯನೆಳೆವಂತೆ, ಧರೆ ಶಶಿಯನೆಳೆವಂತೆ, ಭೀಮನೀಹಾರಿಕೆಯು ರವಿಶಶಿಗಳನೆಲ್ಲ" ಸೆಳೆಯುವಂತೆ ನಲ್ಲೆನಲ್ಲೆಯರು ಒಬ್ಬರನ್ನೊಬ್ಬರು ಸೆಳೆಯುವರು. "ಪ್ರೇಮಶಕ್ತಿ ನೇಮದಾಲಿಂಗನದಿ" ಎಲ್ಲರನ್ನೂ "ವಜ್ರಬಂಧದಲಿ ಬಂಧಿಸಿದೆ." ಜನರ ಮೆಚ್ಚಿಗೆಗಿಂತ ಮುದ್ದುಮಗುವಿನ ಆಲಿಂಗನವೇ ಸಾರತರವಾದುದು! ಜಗದೀಶ್ವರನೆ "ವಿಶ್ವಕುಟುಂಬಿ." ಆದುದರಿಂದ ಸಂಸಾರ ಪಾಶವೆನ್ನಬಾರದು. ಮಾಡುವುದನ್ನೆಲ್ಲ ಆತ್ಮಸಾಧನೆ ಎಂದು ಕೆಲಸವನ್ನು ಮಾಡುವುದೇ "ಕರ್ಮ" ಯೋಗ. ಭಗವಂತನಿಗೆರಗಿ ಅವನ ಕೆಲಸಕ್ಕೆ ನೆರವಾಗುವುದೇ "ಪರಮಪಾವನ ಧರ್ಮ." ಹಸುಳೆಯನು ಮಿಾಯಿಸು ವುದೇ ಭಗವಂತನಿಗೆ ಅಭಿಷೇಕ; ಶಿಶುವಿಗೂಡಿಸುವುದೇ ನೈವೇದ್ಯ. ಮಗುವಲ್ಲಿ ದೇವನನ್ನು ಕಾಣುವ ಬಂಧನವೆ ಮುಕ್ತಿ! ತಪಕ್ಕೆ ಅಸಾಧ್ಯವಾದುದು ತಾಯ್ತನಕೆ ಸಾಧ್ಯವೆಂದು ಕವಿಗಳು "ಸಂಸಾರ ಸಂಹಿತೆ" ಯನ್ನು ಕೆಲವು ಗೀತೆಗಳಲ್ಲಿ ಹಾಡಿ ಹೊಸಗಾಲದ ಪ್ರಣಯಿ ಗಳಿಗೆ ಸಂದೇಶವನ್ನು ಸಾರಿದಾರೆ. ನಲ್ಲನಲ್ಲೆಯರು ಯಾವಾಗಲೂ ಒಟ್ಟಿಗೇ ಇರಲಾಗುವು ದಿಲ್ಲ. ಜಗದಲ್ಲಿ ವಿರಹ ಅನಿವಾರ್ಯವಾದುದರಿಂದ ಅವರು ಪರಸ್ಪರ ವೇದನೆಗೆ ಗುರಿ ಯಾಗುವರು. ಈ ಕವನಮಾಲೆಯಲ್ಲಿ ಸುಂದರವಾದ ಹಲವು ವಿರಹಗೀತೆಗಳಿವೆ. ಅವುಗಳ ಸಾರಾಂಶವಿದು :—

ನಲ್ಲನಿಗೆ ತನ್ನ "ರಾಧೆ" ಬಳಿಗೆ ಬಾರದೆ ಹೋದ ಒಂದು ಕ್ಷಣ ಯುಗವ ಮಿಾರುವುದು! ಅವಳನ್ನು ಕೂಗಿಕರೆದು ಆತ ತನ್ನ ಭಿನ್ನಮನವ ಸಲಿಸಬಯಸಿ "ಯಮುನೆ ಯಾಗಿ ಹರಿದು ಬರುವನು, ತೆರೆಯ ಮುತ್ತುಕೊಟ್ಟು" ಕರೆಯುವನು. "ಷೋಡಶ ಚೈತ್ರದ ರಸಮಯ ಶೃಂಗಾರಾನನೆಯಾದ ಸೌಂದರ್ಯದಖನಿ" ಯನ್ನು ಪ್ರಿಯನು ಕಾಣಬಯಸುವನು. ಆಕೆಯ "ಚೆಂದುಟಿಯ ಸವಿಮುಕ್ತಿ" ಗಾಗಿ ಯುಗಯುಗಾಂತರಗಳಲ್ಲಿ ನಾನಾಜನ್ಮಗಳನ್ನೆತ್ತಿ ಅವಳನ್ನು ಹುಡುಕಿ ತೊಳಲುವನು. ಅವನಂತೆಯೇ ಆಕೆಯೂ ಅವನನ್ನು ಹುಡುಕಿ ನೊಂದಿರುವುದನ್ನು ಆತ ಬಲ್ಲ. "ಕಲ್ಪಾಂತರದ ಹಿರಿಯರ ಬಯಕೆ" ಅವರ "ಸ್ನೇಹ ಮೋಹದ ಮುತ್ತಿ" ನಲ್ಲಿ ಫಲಿಸುವುದು! "ರಾಧೆ" ಕೆನ್ನೆಗೆ ಮುತ್ತನಿತ್ತರೆ ಆ "ನಲ್ಲೆಗಾಣ್ಕೆ" ಅವನಿಗೆ "ಪುಣ್ಯನಿಧಿ," ಚಿರಸ್ಮರಣೀಯವಾದ ಅಮೂಲ್ಯವಸ್ತು! ಪ್ರಿಯಪತಿ "ನಲ್ಲಳ ಹೃದಯದ ಅಮೃತ ಮೂರುತಿ, ಜೀವದ ಮಂಗಳಾರತಿ." ತನ್ನ "ಮೈಚೆಲುವಿನ ಹೊಳೆ ನೀರಲಿ ಮಿಾಯಲಿ" ಎಂದು ಆಕೆ ಹಾರೈಸಿ ಕೆಳದಿಯಿಂದ ಸಿಂಗಾರ ಮಾಡಿಸಿಕೊಳ್ಳುವಳು, ಹೊಸ ಹೂಹಾರವನ್ನು ಕಟ್ಟುವಳು. ಆಕೆಯು "ತನ್ನ ಸೌಂದರ್ಯಮೂರುತಿಯನ್ನು, ಸುಪ್ರೇಮದ ಅಮರ ಸಿಂಧುವನ್ನು, ಚಿರರಸನವೀನ ಬಂಧುವನ್ನು" ಹೀಗೆ ಕರೆಯುತ್ತಾಳೆ:—

"ಏಕಾಂತವಿದು ಸಹಿಸಲಾರದಿದೆ; ಬಾರಯ್ಯ,
ಸೌಂದರ್ಯ ಮೂರುತಿಯೆ ಹೃದಯವನಕೆ.
ಬರಲು ನೀಂ ಚೈತ್ರಪಕ್ಷಿಯ ಗಾನಬಂದಂತೆ
ನಂದನಾನಂದವೈತಹುದು ಮನಕೆ!
ಕಣ್ಣೆ ಕೆಂದಳಿರ ತಾ, ನಗೆಯು ನಲ್ಮುಗುಳ ತಾ,
ತೊಂಡೆವಣ್ದುಟಿಯು ತಾ, ಲತೆ ಮೆಯ್ಯ ತಾ!

ರವಿಯುದಯದಂತೆ ಬಾ, ಶಶಿಯುದಯದಂತೆ ಬಾ,
ಯೌವನೋದಯದಂತೆ ಬಾರಯ್ಯ ಬಾ !"

ಪ್ರೇಯಸಿ "ತನ್ನ ಹೃದಯ ಮಂದಿರದಲ್ಲಿ ಮಧುರ ಪ್ರಾಣೇಶನಿಗೆ ಪ್ರಣಯದಾರತಿಯ ಪೂಜೆ ಮಾಡುವಳು! ಕಂಬನಿಯ ಚುಂಬನದ ಪ್ರೇಮಾಂಬು ಜಾತದಲಿ ತುಂಬಿ ಜೀವವನ್" ಮುಡುಪಾಗಿ ಒಪ್ಪಿಸುವಳು. ಹಾಗೆಯೇ ಪ್ರಣಯಿಯೂ ತನ್ನ ಪ್ರಿಯೆಯ ಮೈಯ "ಪೂಜಾರಿ!" ಅವನಿಗೆ ಮನದನ್ನೆಯೇ ದೇವತೆ, ಪ್ರೇಮದಾಲಾಪನೆಯೇ ಮಂತ್ರ, ಪ್ರಣಯ ಪ್ರಸಾದದಿಂದ ತಣಿಯುವುದೇ ಪೂಜೆ! ಇಂತಹ ಪ್ರೇಮ ಪ್ರಪಂಚದಲ್ಲಿ ಕವಿ ನುಡಿಯು ವಂತೆ "ರಾಗವೇ ವೈರಾಗ್ಯವಾಗುವುದು, ಭೋಗವೇ ತ್ಯಾಗವಾಗುವುದು, ಮೋಹವೇ ಭಕ್ತಿಯಾಗಿ ಪ್ರೇಮದ ಮುಕ್ತಿಯನ್ನೀಯುವುದು!"

ರಸಿಕನಾದ ಕಬ್ಬಿಗನು ತನ್ನ ಪ್ರೇಯಸಿಯನ್ನು "ಮೋಹಿನಿ" ಎಂದು, "ಮಾಧುರಿ" ಎಂದು "ಮಾನಸಿಕ ಸುಂದರಿ" ಯೆಂದು ಬಗೆಬಗೆಯಾಗಿ ಕರೆಯುವನು. ಅವಳಿಲ್ಲದ ತಿರೆ ಜಡವಾಗಿ ಸೆರೆಯಾಗಿ, ಹೊರೆಯಾಗಿ ಬರಿಯ ಮರುಧರೆಯಾಗಿ ತೋರುವುದು! ವಿರಹದಿಂದ ಅವನ ಎದೆಬಿರಿದು, ಮೈ ಉರಿದು, ಕಂಬನಿ ಉದುರುವುದು! ಅವಳು ಬಾರ ದಿರಲು ಆತ ಭಸ್ಮವಾಗುವನು. ಆದುದರಿಂದ ಆಕೆ ಬಂದು ಎದೆಯ ಬಿರುಬೇಗೆಯನ್ನು ತವಿಸಲು ತನ್ನ ಬಳಿಗೆ ಕರೆದುಕೊಂಡು ಸವಿಮುತ್ತಿನ ಮದ್ದನ್ನಿಕ್ಕಬೇಕೆಂದು ಕೋರುವನು.

ಮನದನ್ನನು ಬಳಿಯಲ್ಲಿದ್ದರೆ "ಜಗತುಂಬಿ ತುಳುಕುವುದು; ದೂರ ಹೋದರೆ, ಶೂನ್ಯವಾಗುವುದು." ಪ್ರೇಯಸಿಯು ಹೃದಯೇಶನಿಗಾಗಿ ಬಹಳವಾಗಿ ಕಾಯುವಳು. ಪರಿಪರಿಯಾಗಿ ತನ್ನ ಜೀವನದ ಸರ್ವಸ್ವವಾಗಿರುವ ಪ್ರೇಮತೋಯದ ಮೂರ್ತಿಯನ್ನು, ಆನಂದ ಸತ್ಯಸುಂದರ ಮೂರ್ತಿಯನ್ನು ಒಡನೇ ಬರುವಂತೆ ಕರೆಯುವಳು. ಏಕೆಂದರೆ ಆತ ಬಂದರೆ ಆಕೆಯ "ಬಾಳರಳಿ ಹಬ್ಬುವುದು." ಅನುಕೂಲರಾದ ದಂಪತಿಗಳ "ಮಿಲನಸಾರ ಆತ್ಮವಿಕಸನವಲ್ತೇ?" ಎಂದು ಕವಿ ನುಡಿದಿರುವುದನ್ನು ರಸಿಕರೆಲ್ಲರೂ ಒಪ್ಪುವರು.

ಇಂಥ ಪ್ರಣಯಿಗಳು ಒಬ್ಬರನ್ನೊಬ್ಬರು ಕಾಣಲು, ಕೂಡಲು, ಹಾತೊರೆಯುವುದು ಸಹಜವಾಗಿದೆ. "ಬಿಸಿಲಿನುರಿಗೆ ಬೆಂದಭೂಮಿ ಮುಂಗಾಳನು ಹಾರುವಂತೆ, ಬಾಯಾರಿದ ಹಸಿದ ಹಸುಳೆ ಎದೆಯ ಸೊದೆಯ ಕೋರುವಂತೆ, ರಸ ತುಂಬಿದ ಹೊಸ ತಾವರೆ ಭೃಂಗ ಸಂಗಕೆಳಸುವಂತೆ, ನೀರಾಳಕೆ ಮುಳುಗಿದವನು ಉಸಿರಾಡಲು ಹೋರುವಂತೆ" ಅವರು ಪರಸ್ಪರ ದರ್ಶನ ಸ್ಪರ್ಶನಗಳನ್ನು ಹಾರೈಸುವರು. ಇಂಥವರಿಗೆ "ಮೈಗೆ ಮೈ ಸೋಂಕಿದರೆ ನಂದನವೋ ನಮ್ಮಧರೆ!" ಎಂದೆನ್ನಿಸುವುದು! "ಮೈಗಳೆರಡಪ್ಪಿದರೆ ದ್ವೈತವದ್ವೈತದಲಿ ಧುಮ್ಮಿಕ್ಕಿ ಲೀನ" ವಾಗುವುದು ಎಂಬ ಮಾತು ಭರ್ತೃಹರಿಯ "ಆಲಿಂಗಿತಾಯಾಂ ಪುನರಾಯತಾಕ್ಷ್ಯಾಂ ಆಶಾಸ್ಮಹೇ ವಿಗ್ರಹಯೋರಭೇದಂ" ಎಂಬ ಸೂಕ್ತಿಯನ್ನು ನೆನಪಿಗೆ ತರುವುದು.

ಜೀವನದ ನಶ್ವರದ ಕಾಲನಿಧಿ ಜಾರುತ್ತಿರುವುದು. ಕಳೆದ ನಿಮಿಷ ಮತ್ತೆ ಬಾರದು. ಆದುದರಿಂದ ತಿಳಿದ ಮನುಷ್ಯ ಹೊತ್ತ ಕೊಲೆಗೈಯಬಾರದು, ನಾಚಿ ನಿಂತರೆ ಅಮೃತವೇ ವಿಷವಾಗುವುದು! ಎಂದು ಹೇಳಿ ನಲ್ಲ ಇನಿಯಳಿಗೆ ಎಚ್ಚರಿಕೆ ಕೊಡುವನು. ಹಾಗೆಯೇ ಆಕೆಯೂ ತನ್ನ "ಪ್ರೇಮದ ಅತಿಥಿ" ಯು ತಾನು ಕೈಯಲ್ಲಿ ಹಿಡಿದಿರುವ ಕುಸುಮ ಮಾಲೆ

ಬಿಸುಸುಯ್ಲಿಗೆ ಬಾಡುವ ಮುನ್ನ ಬರುವಂತೆ ಸಿಂಗರಿಸಿಕೊಂಡು ಕಾಯುವಳು. ಪತಿದೇವ ಬಂದ ಒಡನೆ ಆತನಿಗೆ "ತನ್ನೆಲ್ಲ ಹಕಣದೊಲ್ಮೆಯ ಹಿರಿಯ ರಸನಿಧಿಗೆ," ತನ್ನನ್ನು ಆಕೆ ಒಪ್ಪಿಸುವಳು. ಆಗ ಇಬ್ಬರೂ ತುಟಿಯದುರಿ ಎದೆಬೆದರೆ ಕಣ್ತುಂಬಿ ಕೈಚಾಚಿ ಮೈಚಾಚಿ ತಬ್ಬುವರು."

ಸಂಶ್ಲೇಷ ವಿಶ್ಲೇಷಕ್ಕೆ ದಾರಿಯಲ್ಲವೇ? ಮತ್ತೆ ಪ್ರಣಯಿಗಳು ಅಗಲುವರು. ಆಗ "ಸುಂದರ ಸಂಜೆ" ಮಡದಿಯಿಲ್ಲದೆ "ಬಂಜೆ"ಯಾಗಿ ಆತನಿಗೆ ತೋರುವುದು. ಹಾಲು, ಹೂವು, ಜೊನ್ನ, ಜೇನು, ಎಲ್ಲ ಸೇರಿಯಾದ ನಲ್ಲೆಗೆ, ಅವುಗಳಿಗಿಂತ ಹೆಚ್ಚು ಸವಿಯಾದ ಆಕೆಗೆ, ಬಿಸುಸುಯ್ಯುತ್ತ "ತಬ್ಬಲಿ" ಯಂತೆ ಒಬ್ಬನೆ ಕಾಯುವನು. "ಪ್ರೇಮವಿಲ್ಲದೆ ಏಕಾಂತ ಸಾಕು! ಈ ಒಂಟಿವೇದಾಂತ ನರಕ" ಎಂದುಸುರುವನು. ಪ್ರೇಯಸಿ "ಇನ್ನೂರು ಮೈಲಿಗಳ" ದೂರದಲ್ಲಿದ್ದರೂ "ದೇಶವನು ಕಾಲ ಗೆಲ್ಲುವುದೆಂದು ನಂಬಿ" ಅರಳಿದ ಹೂವಿಗೆ ಬಾಯಾರಿ ಹಾರಾಡುವ ದುಂಬಿಯಂತೆ ಆಕೆಗಾಗಿ ಆಶಿಸುತ್ತಾ ಪ್ರಿಯನು ಕಾಯುವನು. ಆಕೆಯೂ ಅವನಂತೆಯೇ "ಬೇಸರಿನ ಸಂಜೆ" ಯಲ್ಲಿ ಇನಿಯನ ಜೊತೆಯನ್ನು ಬೇಡಿ, ವಿರಹದುರಿಯಿಂದ ಬೆಂದು "ಮನೆಯ ಬಾಗಿಲೊಳೊಬ್ಬಳೆಯೆ ಕುಳಿತು ಹೊಸ್ತಿಲಲಿ" ಅವನಿಗಾಗಿ ಆತ ಬೇಗ ಬರುವನೆಂದು, "ಹೃದಯ ಶೂನ್ಯತೆಯ ಪರಿಹರಿಸಿ ಪೂರ್ಣತೆಯನಿತ್ತು ಮುದಗೊಳಿಸು" ವನೆಂದು ಹಾರೈಸಿ ಹಾದಿನೋಡುವಳು. ಅವನ ಮೈಯನ್ನು ನೆನೆಯುತ್ತಾ, ಹೆಸರನ್ನು ಕರೆಯುತ್ತಾ; "ನೂರು ಸಾವಿರಬಾರಿ ಬರೆದು ಬರೆದು" ವಿರಹಯಾತನೆಯಿಂದ ಹರಿಯುವ ಕಂಬನಿಯಿಂದ ಪದೇ ಪದೇ ಅದನ್ನಳಿಸುತ್ತಾ "ನಾಳೆ ಕಳೆದರೆ ನಾಡಿದ್ದೈತರುವನೆಂದು" ನಲ್ಲನಿಗಾಗಿ ಒಂದು ದಿನವನ್ನು ಯುಗದಂತೆ ಕಳೆಯುತ್ತಿರುವಳು. ಒಂದು ದಿನವಾದರೂ "ನಲ್ಲನಿಲ್ಲದಿದ್ದರೆ ಆಕೆಯ ಮನ ಕೊರಗಿ ಕುದಿಯುವುದು, ಜೀವ ಬೇಸರಿಕೆಯಿಂದ ಬೇಯುವುದು, ಕಣ್ಣು ಅವನಾಕೃತಿಯ ಸುಧೆಗೆ ಕಾತರಿಸಿ ಕೋರಿ ಬಾಯಾರುವುದು." ಹೋಗುವಾಗ ಅವನನ್ನು ಬೀಳ್ಕೊಟ್ಟು ಹೊರಟುಹೋದರೆ ಕಣ್ಣೀರ ಮಳೆಗರೆದು ಆಕೆ ಹಂಬಲಿಸಿ ಹಲುಬುವಳು; ಅವನನ್ನು ನೆನೆಯುತ್ತಾ ನಾಳೆ ಬರುವನೆಂಬಾಸೆಯಿಂದ ಕಷ್ಟದಿಂದ ಉಸಿರೆಳೆಯುವಳು. ಕೊನೆಗೆ ಇಬ್ಬರೂ "ಬನದಂಚಿನ ತುಂಗೆಯು ಸಕ್ಕರೆ ಮರಳಲ್ಲಿ, ಬೆಳ್ದಿಂಗಳು ಹಾಲ್ ಚೆಲ್ಲಿದ ಹುಣ್ಣಿಮೆ ಇರುಳಲ್ಲಿ, ಇಬ್ಬರೂ ಕೂಡಿ ರಸದೋಕುಳಿಯಾಡು" ವರು. ಬೇರೆ ಗೊಡವೆಯಿಲ್ಲದೆ ಇಬ್ಬರೂ "ಹೊನ್ನೊಲುಮೆಯ ಹೊಂಬೊನಲಿನಲಿ ತೇಲಿ ಆಲಿಂಗನದಾವರ್ತನದಿ ಮುಳುಗಿದರೇನ್ ಸಾವೇ?" ಎಂದು ಒಬ್ಬರೊಬ್ಬರಿಗೆ ಹೇಳಿಕೊಳ್ಳುವರು. ಅಂದು "ಮಲಗು ಮಲಗೆನ್ನ, ಚಿನ್ನೇ, ಮನದನ್ನೆ," ಎಂದು ಇನಿಯಕನ್ನೆಗೆ ಕಬ್ಬಿಗನಾದ ನಲ್ಲನು ಜೋಗುಳವನ್ನು ಹಾಡಿ ನಲಿಯುವನು. "ಪಕ್ಕದಲಿ ಪವಡಿಸಿರೆ ಅಕ್ಕರೆಯ ಚೆಲುವೆ" ಅವನು "ನಂದನವನಲೆದಾಡಿ ಸ್ವರ್ಧುನಿಯನೀಸಾಡಿ ಕುಣಿದು" ನಲಿಯುವನು, ಉಲಿಯುವನು. ಸರ್ವ ಕವಿಗಳ ಕಾವ್ಯಶೃಂಗಾರ ರಂಗದಾ ಸಂಸಾರ ಸಾರವನುಂಡು ಬೇಸರಿಕೆಯಸುರಿಯನು ಹೊಡೆಸೀಳಿ ಕೊಲ್ಲುವನು!

ಇಷ್ಟಾದರೂ ಇವರ ಪ್ರೀತಿ ಬರಿಯ ಕಾಮವಲ್ಲ! ಅವರ "ಕಾಮಕನಕ ಕುದಿದು ಪ್ರೇಮ" ವಾಗಿದೆ. ನಲ್ಲೆ "ಮೈ ಚೆಲುವಿಗಾಗಿ ನನ್ನ ನೀನೊಲಿಯದಿರು" ಎಂದು ಮನದನ್ನನಿಗೆ ಹೇಳಿ ದೇಹದ ಚೆಲುವು ನಿತ್ಯವಲ್ಲವೆಂದುಸುರಿ ಆತ್ಮೀಯವಾದ ಸ್ನೇಹವನ್ನು ಬೆಳೆಸುವಂತೆ ಪ್ರಿಯನಿಗೆ ಉಪದೇಶಿಸುತ್ತಾಳೆ. ಈ ಸ್ನೇಹಕ್ಕೆ ಮೈ ಆಧಾರವಾದುದರಿಂದ ನಿಜವಾದ ಪ್ರೇಮಿಯಾವ ರಸಿಕನೂ ತನ್ನ "ಚೆಂಗುಲಾಬಿಯ ಚೆಂದುಟಿಯ ಚೆಲುವೆಯನ್ನು"

ಎಂತಾದರೂ ಗೆಲ್ಲಬಯಸುವನು. ಆಕೆ ''ಜೊತೆಯೊಳಿರುವುದೆ ಅವನಿಗೆ ನಾಕ, ದೂರ ಹೋದರೆ ನರಕ.'' ನಲ್ಲಳು ತೌರಿಗೆ ಹೋದಕಾಲದಲ್ಲಿ ಆತ ಸತ್ತಿದ್ದನಂತೆ! ''ಆ ಕೊಂದ ಕಾಲವನು ಕೊನೆಗೆ ಕೂಡಿಕೊಡುವೆಯ ನನ್ನಾಯುಮಾನಕ್ಕೆ ?'' ಎಂದು ಯಮನ ಸೋಲನ್ನು ಚಿತ್ರಿಸಿದ ಈ ಕವಿ ಕೇಳುವುದು ನಿಜವಾಗಿಯೂ ಸ್ವಾರಸ್ಯವಾಗಿದೆ. ಪತ್ನಿ ಯನ್ನುಳಿದು ಈ ರಸಿಕ ''ಕನ್ನಡದ ಮಲೆನಾಡಗೆಲುವ ಸೊಬಗಿನ ಬೀಡ''ನ್ನು ನೋಡಲಾರ. ''ಗುರುಕೃಪೆ'' ಯಂತೆ ಗುಡಿಯಿಂದ ಬಂದ ತನ್ನನೊಲಿದಾಕೆಯೊಡನೆ ಸುಖವಾಗಿ ಸಂಸಾರ ವನ್ನು ಮಾಡುತ್ತಾ ''ನವಜೀವನ ಅತಿಥಿಗೆ'' ಈ ರಸಿಕನು ಹೀಗೆ ಸ್ವಾಗತವನ್ನು ನೀಡುತ್ತಾನೆ:—''ತೆರೆದಿದೆ ಮನೆ, ಓ, ಬಾ ಅತಿಥಿ! ಹೊಸಬೆಳಕಿನ ಹೊಸಗಾಳಿಯ ಹೊಸ ಬಾಳನು ತಾ, ಅತಿಥಿ!'' ಸೂರ್ಯಚಂದ್ರರ ಉದಯದಂತೆ, ಇಷ್ಟಮಿತ್ರರಂತೆ ಬಂಧು ಬಳಗದಂತೆ, ಎಂತಾದರೂ ಸರಿಯೆ, ''ಬೇಸರವಿದನೋಸರಿಸುವ ಹೊಸ ಬಾಳುಸಿರಾಗಿ, ಹಾಡುವೆ ಹಕ್ಕಿಯ ಗೆಲುವಾಗಿ ಮೂಡುವ ಚುಕ್ಕಿಯ ಚೆಲುವಾಗಿ, ಚಿರನವಚೇತನ ಝುರಿಯಾಗಿ, ಉಲ್ಲಾಸದ ರಸಬುಗ್ಗೆಯ ಚಿಮ್ಮಿಸಿ ಬಾ, ಅತಿಥಿ!''

ಹೀಗೆ ಸಂಸಾರದ ಸುಖವನ್ನು ಅನುಭವಿಸುವ ಕವಿಗೆ ಮಗು ಹುಟ್ಟದರೆ ಪ್ರೇಮ ಕವಲೊಡೆದರೂ ಅವರ ಪ್ರೀತಿ ಹೆಚ್ಚುತ್ತಾ ಹೋಗುವುದು. ಮನದನ್ನೆ ಸಿಂಗರಿಸಿಕೊಂಡು ಹೂ ಮುಡಿದು "ಮೂದಿಂಗಳ ಕಂದನಿಗೆ ಹಾಲು ಕೊಡುವುದನ್ನು ಕಂಡು'' ರಸಿಕ ಕವಿ ಗಳು ಅಮೃತದ ಸುಖದಲ್ಲಿ ಮುಳುಗುವರು! ಆ ಮಗುವಿಗೆ ಒಂದು ವರುಷ ತುಂಬಿದ ದಿನ ಆ ಕಬ್ಬಿಗರು ಹೀಗೆ ಹರಸುವರು:—

"ಜೀವಿತ ಪಥವಾಗಲಿ ನಿನಗಿವರೆಲ್ಲರ
ಆಶೀರ್ವಾದದ ರಥ ರೇಖೆ,
ಕವಿಋಷಿ ಗುರುವರ ದೇವ ಮಹಾತ್ಮರ
ಜೀವಜ್ಯೋತಿಯ ಧ್ರುವರೇಖೆ!''

"ಹಾಲನು ಮಾರಿ ಹರಿಯನು ಕೊಳ್ಳುವ'' ಗೋಪಿಗಳ "ಆತ್ಮನಿವೇದನ'' ಎನ್ನುವ ಗೀತೆಯೂ "ಹೋದ ಬಾಳ ಬೆಳಕು" ಎಂಬ ಕವಿತಾನುವಾದವೂ ಕನ್ನಡಿಗರಿಗೆ ಮೊದಲೇ ಪರಿಚಿತವಾಗಿವೆ. ''ರಾಸಲೀಲೆ'' ಪ್ರೇಮ ಕಾಶ್ಮೀರದ ಅತ್ಯಂತ ಸುಂದರ ಗೀತೆಗಳಲ್ಲಿ ಒಂದು. ಕೊಳಲಿನ ಯೋಗಿಯ ಗಾನವನ್ನು ಕೇಳಿ ಹಸುಗಳೇ ಮೈಮರೆಯಲು, ಕಾಡು ಹೂಮಳೆಗರೆಯಲು, ತರಂಗಿಣಿ ನರ್ತಿಸಲು, ವಿಶ್ವವೆಲ್ಲ ಕುಣಿಯತೊಡಗುವುದು. "ಭೂ ಗ್ರಹನಿಕರಂ ರವಿತಾರಾಳಿ, ರಾಸಕ್ರೀಡಾವೇಶವ ತಾಳಿ ಒಂದನ್ನೊಂದಂ ಸೆಳೆದಿನೆ, ಮುತ್ತಿವೆ, ಎಂದೆಂದಿಗು ಬಿಡದಾಲಿಂಗನದಿ. ರಹಸ್ಯಛಂದೋಬಂಧನದಿ! ನಿಲ್ಲಲ್ ಪ್ರಳಯಂ! ಚಲಿಸಲ್ ಸೃಷ್ಟಿ! ನೃತ್ಯಗೀತೆಗಳೇ ಜೀವನ ತುಷ್ಟಿ! ಅಣು ಅಣುವಿಂ ನೀಹಾರಿಕೆವರೆಗೆ ಎಲ್ಲೆಲ್ಲಿಯು ರಾಸಕ್ರೀಡೆ! ಎಲ್ಲಿಯು ಎಲ್ಲೆಲ್ಲವು ರಾಸಕ್ರೀಡೆ!'' ಎಂದು ಕವಿ ಹಾಡಿರುವುದನ್ನು ಹಾಡುತ್ತಾ ರಸಿಕರೂ ಕುಣಿಯತೊಡಗುವರು.

ಕವಿಗಳನ್ನು ಕುರಿತೂ ಈ ಕವನ ಮಾಲೆಯಲ್ಲಿ ಮೂರು ಗೀತೆಗಳಿವೆ. ಕವಿವಿರಾಟ್ ವೈಣಿಕವರೇಣ್ಯನಿಗೆ ಸಂಭವಮಸಂಭವಂ ಎಂಬುದಿಲ್ಲ. ಆತನು ತನ್ನ ಗಾನಕ್ಕೆ ಬೇರೆ ಪ್ರೇರಣೆಯನ್ನು ಕಾಣನು. "ಭುವನವೆಲ್ಲ ಸವಿಯ ಸೊಲ್ಲ ಕವಿಯ ಗಾನ.'' ಅಲ್ಲಿ ರಸಿಕರ "ಹೃದಯ ಮಾನಕೆ ಜೇನ ಸೊಗದ ಸ್ನಾನ''ದೊಡನೆ "ಅಮೃತ ಪಾನ''ವುಂಟು. ಕವಿಯ

ಪ್ರೇಮದ ಅಮೃತ ಲೋಕದಲ್ಲಿ "ಪೂರ್ಣ ತ್ಯಾಗ ಪರಮ ಭೋಗ"; "ರಸಪ್ರಣಯ ಪರಸ್ಪರತೆ" ದಾಂಪತ್ಯದ ಲೋಕದಲ್ಲಿ ಬತ್ತದೊರತೆ! ಹಿರಿಯ ಪುರುಷಾರ್ಥ ಎಂದು ಇವುಗಳಲ್ಲಿ "ಕುವೆಂಪು" ಅವರು ಹಾಡಿದಾರೆ. ಪುಟ್ಟದಾಗಿದ್ದರೂ "ಮೊಸರಿನ ಹುಡುಗಿ" ರಸದ ಸಿಂಧುವಾಗಿವೆ. ಆಕೆಯ ಕೂಗು ಮೊಸರಿಗಿಂತ ಮನೋಹರವಾಗಿದೆ! ಮೊಸರನ್ನು ಬೇಡ ಎನ್ನುವರೇ? ಅವಳನ್ನು "ಕರೆದು ಅವಳ ಕೊರಳ ಸವಿಗಾಗಿ ಮೊಸರ ಕೊಂಡು ಧನ್ಯನಾಗು" ಎಂದು ಮಲೆನಾಡಿನ ಈ ಕವಿಕೋಕಿಲ ಹಾಡಿರುವುದೂ ಆ ಹುಡುಗಿಯ ಕೊರಲಂತೆಯೇ ಸವಿಯಾಗಿ ಮನೋಹರವಾಗಿದೆ. "ಹಾಲನು ಮಾರಿ ಹರಿಯನು ಕೊಳ್ಳುವ ನಾವೇ ಧನ್ಯರು" ಎಂಬ "ಆತ್ಮನಿವೇದನ" ಎಂಬ ಗೀತದ ನುಡಿ "ಕೃಷ್ಣ ಕರ್ಣಾಮೃತ"ದ ಈ ಪದ್ಯವನ್ನು ನೆನಪಿಗೆ ತರುತ್ತದೆ.

"ವಿಕ್ರೇತು ಕಾಮಾ ಕಿಲ ಗೋಪಕನ್ಯಾ ಮುರಾರಿ ಪಾದಾರ್ಪಿತ ಚಿತ್ತವೃತ್ತಿಃ ।
ದಧ್ಯಾದಿಕಂ ಮೋಹವಶಾದವೋಚತ್ ಗೋವಿಂದ ದಾಮೋದರ ಮಾಧವೇತಿ॥"

ಹೀಗೆ ಪ್ರೇಮರಸದಿಂದ ತುಂಬಿ ತುಳುಕುವ ಈ ಕವನಗಳ ಕುಸುಮ ಮಾಲೆ ರಸಿಕರ ಮನವನ್ನು ಸುಲಭವಾಗಿ ಆಕರ್ಷಿಸುವುದು. ಮುದ್ದಾದ ಮುದ್ರಣಕ್ಕೆ ಒಪ್ಪುವ ಸುಂದರ ಪತ್ರದಿಂದಲೂ ಅಂದವಾದ ಹೊದಿಕೆಯ ಚಿತ್ರದಿಂದಲೂ ಪಾರದರ್ಶಕವಾದ ಮೇಲು ಹೊದಿಕೆಯಿಂದಲೂ ಕಂಗೊಳಿಸುವ ಈ ಗ್ರಂಥ ರಸಿಕರೆಲ್ಲರಿಗೂ ಸಂಗ್ರಾಹ್ಯವಾಗಿದೆ.

—ಅ. ನ. ಶ್ರೀ

*The Heritage of Karnataka* (in relation to India) — by Prof. R. S. Mugali, M.A., B.T. Willingdon College, Sangli. Published by Satyasodana Publishing House. Fort, Bangalore City, 1946 pp. 231. Price Ordinary Edn. Rs. 4; Library Edn. Rs. 5.

ಶ್ರೀಮಾನ್ ಮುಗಳಿ ಅವರು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರಬಂಧಕಾರರೂ ವಿಮರ್ಶಕರೂ ಪ್ರಗತಿದೃಷ್ಟಿಯುಳ್ಳವರೂ ಎಂದು ಕನ್ನಡಿಗರಿಗೆ ಈಗಾಗಲೇ ತಿಳಿದ ವಿಷಯ. ಭರತಖಂಡದ ಚರಿತ್ರೆಯಲ್ಲಿ ನೂತನ ಯುಗವಾರಂಭವಾಗಿ ಕನ್ನಡಿಗರ ಹಳೆಯ ವಾಂಛೆಯಾದ ಕರ್ಣಾಟಕಪ್ರಾಂತನಿರ್ಮಾಣವಾಗುವ ಸಂದರ್ಭ ಒದಗಿರುವ ಕಾಲದಲ್ಲಿ ಸಮಸ್ತ ಭಾರತೀಯರಿಗೂ ಕರ್ಣಾಟಕದ ಸಂಸ್ಕೃತಿ ಮತ್ತು ಚರಿತ್ರೆಯನ್ನು ಆಧಾರಗಳ ಮೂಲಕ ಪರಿಚಯಮಾಡಿಕೊಡುವುದಕ್ಕಾಗಿ ಆಂಗ್ಲ ಭಾಷೆಯಲ್ಲಿ ಈ ಗ್ರಂಥವನ್ನು ರಚಿಸಿರುವರು. ೮೦,೦೦೦ ಚದರ ಮೈಲಿಗಳಲ್ಲಿ ವಾಸಮಾಡುವ ಒಂದೂವರೆ ಕೋಟಿ ಕನ್ನಡ ಜನರು ಮೈಸೂರು ಸಂಸ್ಥಾನ, ಬೊಂಬಾಯಿ, ಮುದರಾಸು, ಹೈದರಾಬಾದು, ಕೊಡಗು, ದಕ್ಷಿಣ ಮರಾಠಾ ಪ್ರಾಂತಗಳಲ್ಲಿ ಹಂಚಿಹೋಗಿದ್ದರೂ ಭಾಷಾದೃಷ್ಟಿ ಯಿಂದಲೂ ಚರಿತ್ರೆ ಮತ್ತು ಸಂಸ್ಕೃತಿ ದೃಷ್ಟಿಯಿಂದಲೂ ಒಂದು ಜನಾಂಗ ಎನಿಸಿಕೊಳ್ಳುವುದಕ್ಕೆ ಅರ್ಹರೆಂಬು ದನ್ನು ತೋರಿಸುವುದೇ ಈ ಪುಸ್ತಕದ ಉದ್ದೇಶವಾಗಿದೆ.

ಗ್ರಂಥವನ್ನು ಪ್ರಾಚೀನ ಕರ್ಣಾಟಕ, ಚಾರಿತ್ರ ಕರ್ಣಾಟಕ ಎಂದು ಎರಡು ಭಾಗ ಮಾಡಿ ಪ್ರಾಚೀನ ಕರ್ಣಾಟಕದ ವಿಭಾಗಗಳನ್ನೂ, ಕನ್ನಡ ಭಾಷೆಯ ಸ್ವರೂಪವನ್ನೂ ಚರ್ಚಿಸಿರುವರು. ಸಿಂಧು ಸಂಸ್ಕೃತಿಯ ವಿಷಯದಲ್ಲಿ ಹೆರಾಸ್ ಅವರ ಸಿದ್ಧಾಂತಗಳು ಕೇವಲ ಊಹೆ ಎಂದು ಅಭಿಪ್ರಾಯಪಡುವರು. ಕರ್ಣಾಟಕ ಎಂಬ ಶಬ್ದದ ಉತ್ಪತ್ತಿಯನ್ನು ಚರ್ಚಿಸಿ ಆರ್ಯ ಮತ್ತು ದ್ರಾವಿಡ ಸಂಪರ್ಕದಿಂದ ಉಂಟಾದ ಮಾರ್ಪಾಟುಗಳನ್ನು ಸೂಚಿಸಿರುವರು. ಮತ ವಿಷಯದಲ್ಲಿ ಕರ್ಣಾಟಕರು ಕೇವಲ ಭಕ್ತಿಪ್ರಧಾನವಾದ ಶೈವ ಮತ್ತು ವೈಷ್ಣವ ಮತ ಗಳಿಗೂ ಗ್ರಾಮದೇವತಾ ಪೂಜೆಗೂ ಹೆಚ್ಚು ಪ್ರಾಶಸ್ತ್ಯ ಕೊಟ್ಟರೆಂದೂ, ಸಮಾಜ ವ್ಯವಸ್ಥೆಯಲ್ಲಿ ಅಳಿಯ ಸಂತಾನ ಮತ್ತು ಮಾತೃ ಅಧಿಕಾರಪದ್ಧತಿಯನ್ನು ಅನುಸರಿಸುತ್ತಿದ್ದರೆಂದೂ ಅಭಿಪ್ರಾಯಪಡುವರು.

ದ್ವಿತೀಯ ಭಾಗದಲ್ಲಿ ಚಾರಿತ್ರಿಕ ದೃಷ್ಟಿಯಿಂದ ಕರ್ಣಾಟಕ ಸಾಮ್ರಾಜ್ಯಗಳ ಸ್ಥಿತಿಯನ್ನು ವಿಮರ್ಶಿಸಿರುವರು. ಶಾತವಾಹನ, ಕದಂಬ, ಬಾದಾಮಿ ಚಾಳುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ಹೊಯ್ಸಳ, ದೇವಗಿರಿ ಯಾದವ, ವಿಜಯನಗರ, ಬಹಮನೀ, ಮೈಸೂರು, ಪೇಶ್ವೆಗಳು ಮತ್ತು ಇಂಗ್ಲೀಷರು ಕಾವೇರಿಯಿಂದ ಗೋದಾವರಿಯವರೆಗೆ ಇದ್ದ ಕರ್ಣಾಟಕ ದೇಶವನ್ನು ೨,೦೦೦ ವರ್ಷಗಳಲ್ಲಿ ಎಷ್ಟು ಮಾರ್ಪಡಿಸಿದರೆಂದು ಸೂಕ್ಷ್ಮವಾಗಿ ವರ್ಣಿಸಿರುವರು. ಅನಂತರ ಕರ್ಣಾಟಕದ ಶೌರ್ಯ, ಆಡಳಿತ ಪದ್ಧತಿ, ದೇಶಾಭಿಮಾನ, ವಿದೇಶ ವ್ಯಾಪನೆಗಳಿಗೆ ಉದಾಹರಣೆಗಳನ್ನು ಕೊಟ್ಟು ಕನ್ನಡಿಗರ ದೇಶಾಭಿಮಾನ, ಸ್ವಾಮಿನಿಷ್ಠೆ, ಧರ್ಮಪರತೆ ಮುಂತಾದ ಗುಣಗಳನ್ನು ವಿಮರ್ಶಿಸಿ ಅನಾಗರಿಕ ಜನರ ಮತಗಳು, ಜೈನ, ಬೌದ್ಧ, ಪಾಶುಪತ, ಕಾಳಾಮುಖ, ಶ್ರೀವೈಷ್ಣವ, ಅದ್ವೈತ, ವೈಷ್ಣವ, ವೀರಶೈವ, ಇಸ್ಲಾಂ ಮತಗಳ ಪ್ರಭಾವಗಳನ್ನೂ ವ್ಯಾಪನೆಯನ್ನೂ ಸರ್ವಮತ ಸಹಿಷ್ಣುತೆಯನ್ನೂ ಆಧಾರ ಸಹಿತವಾಗಿ ಸ್ವಾರಸ್ಯವಾಗಿ ವರ್ಣಿಸಿರುವರು. ಭಕ್ತಿಮತಗಳು ಜನರ ಸಾಮಾನ್ಯ ಜೀವನದಲ್ಲಿ ಮತ್ತು ಸಾಹಿತ್ಯದಲ್ಲಿ ಎಷ್ಟು ಪ್ರಭಾವಶಾಲಿಗಳಾಗಿದ್ದವೆಂಬುದನ್ನು ಚರ್ಚಿಸಿರುವರು. ಆದರೆ ಮಾಧ್ವ ಸಂಪ್ರದಾಯದಿಂದ ಚೈತನ್ಯಮತವು ಹುಟ್ಟಿತೆಂಬುದಕ್ಕೆ ಆಧಾರವಿಲ್ಲ. ಶ್ರೀ ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಭಕ್ತಿ ಪ್ರಧಾನವಾದ ಸ್ಮಾರ್ತ ಭಾಗವತ ಮತಕ್ಕೆ ಸೇರಿದ್ದ ಶ್ರೀಧರಸ್ವಾಮಿ, ಈಶ್ವರಪುರಿ, ಮಾಧವೇಂದ್ರ ಪುರಿ ಎಂಬ ಅದ್ವೈತಾಚಾರ್ಯರನ್ನೇ ಚೈತನ್ಯರು ಅನುಸರಿಸಿದರು ಎಂಬುದಕ್ಕೆ ನಿದರ್ಶನಗಳಿವೆ. ಚೈತನ್ಯರ ಅಚಿನ್ತ್ಯ ಭೇದಾಭೇದ ಮತಕ್ಕೂ ದ್ವೈತಮತಕ್ಕೂ ಯಾವ ಸಂಬಂಧವೂ ಇಲ್ಲ. ಹಾಗೆಯೇ ಉತ್ತರ ಹಿಂದೂ ಸ್ಥಾನದಲ್ಲಿ ವೈಷ್ಣವ ಮತವನ್ನು ಪ್ರಚಾರಮಾಡಿದ ಮತ್ತು ಕಬೀರ್‌ದಾಸ್, ಮೀರಾಬಾಯಿ ಮುಂತಾದವರಿಗೆ ಗುರುಗಳಾಗಿದ್ದ ರಾಮಾನಂದರು ಶ್ರೀ ರಾಮಾನುಜಾಚಾರ್ಯರ ಸಂಪ್ರದಾಯದವರು ಎಂಬುದಕ್ಕೂ ಯಾವ ಆಧಾರವೂ ಇಲ್ಲ. ರಾಮಾನಂದರು ವಿಶಿಷ್ಟಾದ್ವೈತ ಸಿದ್ಧಾಂತಗಳನ್ನು ಒಪ್ಪದೆ ಅದ್ವೈತ ಮತವನ್ನು ಅವಲಂಬಿಸಿ ಅದರ ಧ್ಯೇಯದಂತೆ ವರ್ಣಾಶ್ರಮ, ಮುಸಲ್ಮಾನ ಮತ್ತು ಹಿಂದೂ ಜಾತಿ, ಸ್ತ್ರೀ-ಪುರುಷರೆಂಬ ಭೇದ ಎಲ್ಲವನ್ನೂ ಲೆಕ್ಕಿಸದೆ ಸಾಮಾನ್ಯ ಜನರನ್ನು ಉದ್ಧರಿಸುವುದಕ್ಕಾಗಿ ಭಾಗವತಾಗ್ರೇಸರೆಂದೆನಿಸಿದ ಶ್ರೀ ಶಂಕರಾಚಾರ್ಯರ ಅಭಿಪ್ರಾಯವನ್ನೆ ಪ್ರಚಾರಕ್ಕೆ ತಂದರು. ಹಾಗೆಯೇ ಹಿಂದಿಯಲ್ಲಿ ರಾಮಾಯಣವನ್ನು ರಚಿಸಿ ರಾಮ ಭಕ್ತಿ ಮತವನ್ನು ಪ್ರಚಾರಮಾಡಿದ ತುಲಸೀ ದಾಸನು ಪ್ರಸಿದ್ಧ ಅದ್ವೈತಾಚಾರ್ಯರಾಗಿದ್ದ ಮಧುಸೂದನಸರಸ್ವತಿಗಳ ಸಮಕಾಲೀನನೂ, ಶಿಷ್ಯನೂ ಆಗಿದ್ದನು. ಅಸ್ಸಾಂನಲ್ಲಿಯೂ ೧೬ನೆಯ ಶತಮಾನದಲ್ಲಿ ಶಾಕ್ತ ಮತಗಳನ್ನು ಎದುರಿಸಿ ಒಂದುವಿಧವಾದ ವೈಷ್ಣವ ಮತವನ್ನು ಪ್ರಚಾರಮಾಡಿದ ಶಂಕರದೇವನೂ ಕೂಡ ಶಾಂಕರಸಂಪ್ರದಾಯದವನಾಗಿದ್ದನು.

ಶ್ರೀಮಾನ್ ಮುಗಳಿಯವರು ಶಾಸನ ಮತ್ತು ಸಾಹಿತ್ಯ ಆಧಾರಗಳಿಂದ ಕನ್ನಡಿಗರ ನಿತ್ಯಜೀವನದಲ್ಲಿ ಕಂಡುಬರುವ ಉದಾತ್ತ ಧ್ಯೇಯಗಳನ್ನು ಚಿತ್ರಿಸಿರುವರು. ವಿದ್ಯಾಭ್ಯಾಸ ಕ್ರಮ, ಧಾನಧರ್ಮಗಳು, ವಾಸ್ತು ಶಿಲ್ಪ, ಸಾಹಿತ್ಯ, ಸಂಗೀತ, ಚಿತ್ರಕಲೆ ಇವುಗಳ ವೈಶಿಷ್ಟ್ಯಗಳನ್ನು ವಿಮರ್ಶಿಸಿ ಸಾಹಿತ್ಯದಲ್ಲಿ ೧೯ನೆಯ ಶತಮಾನದಿಂದ ಈಚೆಗೆ ಆಗಿರುವ ನೂತನ ಚಳುವಳಿಗಳನ್ನು ಸಂಕ್ಷಿಪ್ತವಾಗಿ ವರ್ಣಿಸಿರುವರು. ಕರ್ಣಾಟಕ ಸಂಸ್ಕೃತಿಯು ವೈದಿಕ ಸಂಸ್ಕೃತಿಯ ಪಡಿಯಚ್ಚು ಮಾತ್ರ, ಸಮಸ್ತ ಭಾರತೀಯ ಸಾಮಾನ್ಯ ಸಂಸ್ಕೃತಿಯ ಸ್ಥಾನಿಕ ರೂಪ ಮಾತ್ರ ಎಂಬ ವಾದವನ್ನು ಪ್ರತಿಭಟಿಸಿ ಕರ್ಣಾಟಕ ಸಂಸ್ಕೃತಿಗೆ ಅಸಾಧಾರಣವಾದ ಒಂದು ಗುಣವಿದೆಯೆಂದು ತೋರಿಸಲು ಯತ್ನಿಸಿರುವರು. ಕರ್ಣಾಟಕ ಸಂಸ್ಕೃತಿಯಲ್ಲಿ ಅನೇಕ ಅವಗುಣಗಳಿದ್ದರೂ ಈ ಸಂಸ್ಕೃತಿಯು ಜೀವಂತವಾಗಿರುವುದೇ ಇದರ ಆಧಿಕ್ಯವನ್ನು ತೋರಿಸುವುದೆಂದೂ, ಭಾರತೀಯ ಸಂಸ್ಕೃತಿಯು ಪ್ರಪಂಚದ ಸಮಸ್ತ ಸಂಸ್ಕೃತಿಗಳ ಒಂದು ರೂಪವಾಗಿರುವಂತೆ ಕರ್ಣಾಟಕ ಸಂಸ್ಕೃತಿಯೂ ಕೂಡ ಭಾರತೀಯ ಸಂಸ್ಕೃತಿಯ ಒಂದು ರೂಪವಾದರೂ, ಭಾರತೀಯ ಸಂಸ್ಕೃತಿಗೆ ಹೇಗೆ ವೈಶಿಷ್ಟ್ಯವಿದೆಯೆಂದು ಅಭಿಪ್ರಾಯಪಟ್ಟಿರುವರೋ ಹಾಗೆಯೇ ಕರ್ಣಾಟಕ ಸಂಸ್ಕೃತಿಯೂ ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳ ಮಿಳನೆಯನ್ನು ಭಾಷೆ, ವಾಸ್ತುಶಿಲ್ಪ, ಮತಸಹಿಷ್ಣುತೆ ಮುಂತಾದ ಅಂಶಗಳಲ್ಲಿ ವೈಶಿಷ್ಟ್ಯವನ್ನು ತೋರಿಸಿದೆಯೆಂದು ಹೇಳಿದರೆ, ಇದೇ ವಾದವು ತಮಿಳು, ತೆಲುಗು ಮುಂತಾದ ಇತರ ಪ್ರಾಂತಗಳಿಗೂ ಅಷ್ಟರಮಟ್ಟಿಗೇ ಅನ್ವಯಿಸುವುದು. ಭರತಖಂಡದ ಇತರ ಭಾಗಗಳಲ್ಲಿ ಕಾಣಿಸದ, ಕರ್ಣಾಟಕದಲ್ಲಿ ಮಾತ್ರ ಕಂಡುಬರುವ ಅಂಶಗಳು ಯಾವುವು ಎಂಬುದನ್ನು ಕೂಲಂಕಷವಾಗಿ ಚರ್ಚಿಸಿದ್ದರೆ ಶ್ರೀ ಮುಗಳಿ ಅವರ ಪ್ರಯತ್ನವು ಮತ್ತಷ್ಟು ಯಶಸ್ವಿಯಾಗುತ್ತಿದ್ದಿತು. ಭಾರತೀಯ ಸಂಸ್ಕೃತಿಯು ಧರ್ಮ, ಕರ್ಮ, ಪುನರ್ಜನ್ಮ, ಅದ್ವೈತ ಸಿದ್ಧಾಂತ ಮುಂತಾದ ಅಂಶಗಳಲ್ಲಿ ಪ್ರಪಂಚದ ಇತರ ಸಂಸ್ಕೃತಿಗಳಿಗಿಂತ ಭಿನ್ನವಾಗಿದೆ ಎಂಬುದು ಸ್ಪಷ್ಟವಾಗಿದೆ. ಈ ಮುಖ್ಯಾಂಶಗಳಲ್ಲಿ ಕರ್ಣಾಟಕ ಮತ್ತು

ಭಾರತೀಯ ಸಂಸ್ಕೃತಿಗಳಿಗೆ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ. ಕೇವಲ ಭಾಷಾ ವ್ಯಷ್ಟಿಯಿಂದ ಸಂಸ್ಕೃತಿಯೇ ಪ್ರತ್ಯೇಕವೆಂದು ಸಿದ್ಧಾಂತ ಮಾಡುವುದು ಅಷ್ಟು ಸಾಧ್ಯವಲ್ಲ. ಒಟ್ಟಿನಲ್ಲಿ ಆಂಗ್ಲ ಭಾಷೆಯಲ್ಲಿ ಇಂತಹ ಉಪ್ಗ್ರಂಥವನ್ನು ರಚಿಸಿ ಕರ್ಣಾಟಕ ಸಂಸ್ಕೃತಿಯ ವಿಷಯವನ್ನು ಇಂಡಿಯಾ ದೇಶದ ಎಲ್ಲರಿಗೂ ತಿಳಿಸುವ ಪ್ರಯತ್ನ ಮಾಡಿ ಕೃತಕೃತ್ಯರಾದ ಶ್ರೀಮಾನ್ ಮುಗಳಿಯವರು ವಂದನಾರ್ಹರು. ಇಂಗ್ಲಿಷ್‌ನಲ್ಲಿ ಕರ್ಣಾಟಕ ಚರಿತ್ರೆ ಮತ್ತು ಸಂಸ್ಕೃತಿ ವಿಷಯಕವಾದ ಗ್ರಂಥಗಳು ಅತ್ಯಲ್ಪ; ಈ ಗ್ರಂಥವು ಈ ಕುಂದನ್ನು ನಿವಾರಿಸಲು ಅತ್ಯಂತ ಉಪಯುಕ್ತವಾಗಿದೆ.

— ಎಸ್. ಶ್ರೀಕಂಠಶಾಸ್ತ್ರೀ

ಪ್ರಾಚೀನ ಸಾಹಿತ್ಯ: (ಕವಿ ರವೀಂದ್ರರ ಸಾಹಿತ್ಯ ಪ್ರಬಂಧಗಳು); ಅನುವಾದಕರು: ದಿ॥ ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು; ಪ್ರಕಾಶಕರು: ಎಚ್. ಎಸ್. ದೊರೆಸ್ವಾಮಿ, ಸಾಹಿತ್ಯಮಂದಿರ, ಮೈಸೂರು.

ಭಾರತೀಯ ಸಾಹಿತ್ಯದಲ್ಲಿ ಅನೇಕ ಶತಮಾನಗಳಿಂದ ಜನಮನ್ನಣೆಯನ್ನು ಪಡೆದು ಶಾಶ್ವತಕೀರ್ತಿಯನ್ನು ಗಳಿಸಿರುವ ಕೆಲವು ಕೃತಿರತ್ನಗಳನ್ನು ಕುರಿತು ಕವೀಂದ್ರ ರವೀಂದ್ರರು ಬರೆದ ಬಂಗಾಳಿ ಲೇಖನಗಳ ಕನ್ನಡ ಅನುವಾದ ಈ ಗ್ರಂಥ. ಮಹಾಕವಿಯೊಬ್ಬನು ವಿಮರ್ಶೆಗೆ ಕೈಹಾಕಿದರೆ ಫಲಿತಾಂಶ ಎಷ್ಟು ರಸಪೂರ್ಣವೂ ಅಮೂಲ್ಯವೂ ಆದೀತು ಎಂಬುದಕ್ಕೆ ಇದು ಸಾಕ್ಷಿಯಾಗಿದೆ. ಕವಿಯ ಹೃದಯವನ್ನು ಹೊಕ್ಕುನೋಡಿ ಅದರ ಸಂಪತ್ತನ್ನು ಹೊರಗೆಡಹಲು ವಿಮರ್ಶಕನಿಗೆ ಎಂತಹ ತೀಕ್ಷ್ಣದೃಷ್ಟಿ, ವಿಶಾಲಮನೋಧರ್ಮ, ಸಹಾನುಭೂತಿ, ವಿಶ್ಲೇಷಣ ಸಾಮರ್ಥ್ಯ, ಜನತೆಯ ನಡೆನುಡಿಗಳ ಆದರ್ಶ ಆಕಾಂಕ್ಷೆಗಳ ಪರಿಚಯ ಆಗತ್ಯವೆಂದು ಅರಿಯಲು ಈ ಲೇಖನಗಳು ಕೈಗನ್ನಡಿಗಳಂತಿವೆ. ಭಾರತೀಯ ಸಾಹಿತ್ಯದ ಜೀವಜೀವಾಳದ ವೈಶಿಷ್ಟ್ಯ ಇಲ್ಲಿ ಕವಿಸಾರ್ವಭೌಮ ರವೀಂದ್ರರ ಆದರಪೂರ್ವಕವಾದ ಕೊಂಡಾಟಕ್ಕೆ ಪಾತ್ರವಾಗಿದೆ; ವಿಮರ್ಶೆಯೇ ಸಾಹಿತ್ಯದ ಮಟ್ಟಕ್ಕೆ ಏರಿದೆ, ಉತ್ತಮ ಕಾವ್ಯದಂತಿದೆ.

ಪುಸ್ತಕದಲ್ಲಿ ಅಡಕವಾಗಿರುವ ರವೀಂದ್ರ ವಿರಚಿತವಾದ ಏಳು ಲೇಖನಗಳಲ್ಲಿ ಮೊದಲನೆಯದು ರಾಮಾಯಣವನ್ನು ಕುರಿತದ್ದು. ಒಂದು ಇಡೀ ದೇಶದ ಅಥವಾ ಕಾಲದ ಹೃದಯ ಮಹಾಕಾವ್ಯದಲ್ಲಿ ವ್ಯಕ್ತವಾಗಿರುತ್ತದೆ. "ರಾಮಾಯಣ ಮಹಾಭಾರತಗಳು ಗಂಗಾ ಹಿಮಾಚಲಗಳಂತೆ ಸಮಗ್ರ ಭರತಖಂಡದವುಗಳು." ಭಾರತೀಯರ ಜೀವನ ತತ್ವಗಳೂ ಧ್ಯೇಯಗಳೂ ಅವುಗಳಲ್ಲಿ ಪ್ರತಿಬಿಂಬಿತವಾಗಿವೆ. ಇತರ ದೇಶಗಳ ಮಹಾಕಾವ್ಯಗಳಲ್ಲಿರುವಂತೆ ರಾಮಾಯಣದಲ್ಲಿ ಬರಿಯ ವೀರರಸ, ಬಾಹುಬಲ, ಸಮರ ಚಾತುರ್ಯಗಳಿಗೆ ಪ್ರಧಾನತೆಯಿಲ್ಲ. "ಸಂಸಾರದ ಕಥೆಗೆ ಅತ್ಯಂತ ಮಹತ್ವವನ್ನು ಕೊಟ್ಟಿರುವುದೇ" ರಾಮಾಯಣದ ಮುಖ್ಯವಿಶೇಷ. ಗೃಹಕ್ಕೂ ಗೃಹಧರ್ಮಕ್ಕೂ ಭರತಖಂಡದಲ್ಲಿರುವ ಪ್ರಾಶಸ್ತ್ಯ ಈ ಕಾವ್ಯದಿಂದ ವಿದಿತವಾಗುತ್ತದೆ. ರವೀಂದ್ರರ ಈ ವಾದವನ್ನು ಯಾರೂ ಅಲ್ಲಗಳೆಯುವಂತಿಲ್ಲ.

ಕಾಳಿದಾಸನ ವಿಷಯ ಮೂರು ಪ್ರಬಂಧಗಳ ವಸ್ತುವಾಗಿದೆ. ಕಾಳಿದಾಸ ಕೇವಲ ಸೌಂದರ್ಯವನ್ನೂ ಭೋಗವನ್ನೂ ವರ್ಣಿಸುವ ಕವಿಯಲ್ಲ. ಅವನ ಸೌಂದರ್ಯಚಾಂಚಲ್ಯದ ಮಧ್ಯದಲ್ಲಿ ಭೋಗವೈರಾಗ್ಯ ಸ್ತಬ್ಧವಾಗಿರುತ್ತದೆ." ಅವನ ಕಾವ್ಯ ಸೌಂದರ್ಯದ ವಿಲಾಸದ ಬಾಹ್ಯಾವರಣಗಳೆಲ್ಲವನ್ನೂ ಅತಿಕ್ರಮಿಸಿ ಮುಂದೆಹೋಗಿ ನಿರ್ಮಲವಾದ ಸ್ನಿಗ್ಧವರ್ಣದ ಶುಭ್ರಕಾಂತಿಯ ಮಂಗಳ ಸಮಾಗಮದಲ್ಲಿ ಮನೋಹರವಾಗಿ ಪರಿಣಮಿಸುತ್ತದೆ. ಕುಮಾರಸಂಭವ, ಶಾಕುಂತಲ ಇವೆರಡರಲ್ಲೂ ವ್ಯರ್ಥಪ್ರಣಯ ಸಾರ್ಥಕ ಸಮ್ಮಿಳನದಲ್ಲಿ ಕೊನೆಗಾಣುವ ಚಿತ್ರವನ್ನು ಕವಿ ಸೃಷ್ಟಿಸಿದ್ದಾನೆ. ಎರಡು ಕಾವ್ಯಗಳಲ್ಲೂ ಮೋಹದ ನಿಷ್ಫಲತೆಯೂ ಪ್ರಶಾಂತ ಪ್ರೇಮದ ಸಫಲತೆಯೂ ಪ್ರತಿಪಾದಿತವಾಗಿವೆ. ಈ ಪರಿಣತ ಪ್ರೇಮವೇ ಕಾಳಿದಾಸನ ಕೃತಿಗಳ ರಸಕೇಂದ್ರವೆಂದು ರವೀಂದ್ರರು ಮನೋಜ್ಞವಾಗಿ ಚರ್ಚಿಸಿ ತೋರಿಸಿಕೊಟ್ಟಿದ್ದಾರೆ.

ಬಾಣಭಟ್ಟನ ಕಾದಂಬರಿಯ ವಿಷಯವಾಗಿ ಎರಡು ಸೊಗಸಾದ ಉಪಯುಕ್ತವಾದ ಪ್ರಬಂಧಗಳಿವೆ. ಕಾದಂಬರಿಯ ವಿಶೇಷ ಮಾಹಾತ್ಮ್ಯ ಅದರಲ್ಲಿರುವ ಜೀವಕಳೆಯಿಂದ ತುಂಬಿರುವ ಚಿತ್ರಗಳು; ಸಮಗ್ರ ಕಾದಂಬರಿ ಒಂದು ಚಿತ್ರಶಾಲೆ; ಅದರ ಭಾಷೆ ಒಂದೊಂದು ಚಿತ್ರಕ್ಕೂ ಕಳೆಗೊಡುವ ಕೆತ್ತನೆಯ ಕೆಲಸದಿಂದ ಕೂಡಿದ ಬಂಗಾರದ ಚೌಕಟ್ಟು; ಆ ಚಿತ್ರಗಳ ಸೌಂದರ್ಯವನ್ನು ನೋಡಿ ಆನಂದಪಡಲಾರದವನು ನಿಜವಾಗಿಯೂ ನಿರ್ಭಾಗ್ಯ ಎಂಬುದು ರವೀಂದ್ರರ ಅಭಿಪ್ರಾಯ.

"ಕಾವ್ಯದ ಅನಾದರ" ಎಂಬ ಪ್ರಬಂಧದ ಸ್ವಾರಸ್ಯವನ್ನೂ ಶೈಲಿಯ ಮಾಧುರ್ಯವನ್ನೂ ಓದಿ ಸವಿಯಬೇಕು. ""ಕವಿಗಳಿಂದ ಸಂಪೂರ್ಣವಾಗಿ ಉಪೇಕ್ಷಿತರಾಗಿದ್ದರೂ ಅಮರಲೋಕದಿಂದ ಭ್ರಷ್ಟರಾಗದಿರುವಂತಹ" "ಸಂಸ್ಕೃತ ಸಾಹಿತ್ಯದ ಕಾವ್ಯಯಜ್ಞಶಾಲೆಯ ಪ್ರಾಂತಭೂಮಿಯಲ್ಲಿ" ಅನಾದರಕ್ಕೆ ಪಾತ್ರರಾದರೂ ನಮಗೆ ಚಿರಪರಿಚಿತರಾಗಿರುವ ರಾಮಾಯಣದ ಊರ್ಮಿಳಾ, ಶಾಕುಂತಲಾ ನಾಟಕದ ಅನಸೂಯಾ ಪ್ರಿಯಂವದೆಯರು, ಕಾದಂಬರಿಯ ಪತ್ರಲೇಖೆ—ಇವರ ಪರಿಸ್ಥಿತಿಯಿಂದ ಕೆರಳಿದ ಕವೀಂದ್ರರ ಕೋಮಲಾಂತಃಕರಣ ಇಲ್ಲಿ ಧಾರೆಧಾರೆಯಾಗಿ ಬಹು ಸುಂದರವಾಗಿ ಹರಿದಿದೆ.

ಬೌದ್ಧರ ಪವಿತ್ರಗ್ರಂಥವಾದ "ಧಮ್ಮಪದ"ದ ಮೇಲಿನ ವಿಮರ್ಶೆ ಇತರ ಲೇಖನಗಳಂತೆಯೇ ತಲಸ್ಪರ್ಶಿಯೂ ಭಾರತೀಯ ಧರ್ಮ ಸಂಸ್ಕೃತಿಗಳ ಅಂತರಾಳವನ್ನು ಎತ್ತಿ ತೋರಿಸುವುದೂ ಆಗಿದೆ.

ಕಡೆಯಲ್ಲಿ ಪ್ರಸಿದ್ಧ ಕಾದಂಬರೀಕಾರರಾದ ಬಂಕಿಮಚಂದ್ರರ ಎರಡು ಪ್ರಬಂಧಗಳಿವೆ. ಇವುಗಳ ವಿಷಯ ಕಾಳಿದಾಸನ ಶಕುಂತಲೆಗೂ ಷೇಕ್ಸ್‌ಪಿಯರನ ಮಿರಾಂಡ ಮತ್ತು ಡೆಸ್ಡಿಮೋನಳಿಗೂ ಇರುವ ಹೋಲಿಕೆ ಮತ್ತು ವ್ಯತ್ಯಾಸಗಳು. ಇವೆರಡು ಪ್ರಬಂಧಗಳೂ ಸಾಹಿತ್ಯಪ್ರೇಮಿಗಳಿಗೆ ಸಂತೋಷಕರವೂ ಆಲೋಚನಾ ಪ್ರಚೋದಕವೂ ಆಗಿವೆ.

ಅನುವಾದವಾದರೂ "ಪ್ರಾಚೀನ ಸಾಹಿತ್ಯ" ಕನ್ನಡದಲ್ಲಿ ಪ್ರಕಟವಾಗಿರುವ ಉತ್ತಮವಾದ ವಿಮರ್ಶೆಯ ಗ್ರಂಥಗಳಲ್ಲಿ ಒಂದೆಂದು ಬೇರೆ ಹೇಳಬೇಕಾಗಿಯೇ ಇಲ್ಲ. ಇಂತಹ ರಸದೂಟವನ್ನು ಸಹೃದಯರಿಗೆ ನೀಡಿದ ಪುಣ್ಯ ಡಾ॥ ಪ್ರೊ॥ ವೆಂಕಣ್ಣಯ್ಯನವರದು. ಅವರ ಉಪಕಾರವನ್ನು ಸ್ಮರಿಸಿ ಅವರು ಬರೆದುದನ್ನು ಓದಿ ಪ್ರಯೋಜನ ಪಡೆಯಬೇಕಾದುದು ಕಲಿತ ಕನ್ನಡಿಗರೆಲ್ಲರ ಕರ್ತವ್ಯ.

— ಎಂ. ರಾಮರಾವ್

ಧ್ವಜರಕ್ಷಣೆ.—ಬರೆದವರು: ಪು. ತಿ. ನರಸಿಂಹಚಾರ್, ಪ್ರಕಾಶಕರು: ಕಾವ್ಯಾಲಯ, ಮೈಸೂರು. ಬೆಲೆ ಸಾದಾಪ್ರತಿ ರೂ ೧-೪-೦, ಕ್ಯಾಲಿಕೋ ಪ್ರತಿ ೨-೪-೦.

'ಧ್ವಜರಕ್ಷಣೆ' ಎರಡು ಕಾರಣಗಳಿಂದ ಸಾಹಿತಿಗಳ ಸುಸ್ವಾಗತಕ್ಕೆ ಅರ್ಹವಾಗಿದೆ. ಆಧುನಿಕ ರಾಜಕೀಯ ವಾತಾವರಣವನ್ನು ಅದ್ಭುತವಾಗಿ ಚಿತ್ರಿಸಿರುವ ಮೊದಲಕಥೆಗಾಗಿ ಮತ್ತು ಮಾನಸಿಕ ಭಾವಗಳನ್ನು ಸರೂಪಕಶೈಲಿಯಲ್ಲಿ ಮಳೆಬಿಲ್ಲಿನಂತೆ ಹರಡುವ ಈ ಕಥೆಗಳ ಕಲೆಗಾಗಿ. ಕವಿಯ ಮನೋಭಾವವು ಎಲ್ಲವುಗಳಿಗೂ ಏಕವಾದರೂ ಈ ಕಥೆಗಳ ವಸ್ತುವೈವಿಧ್ಯ ವಿಸ್ಮಯಗೊಳಿಸುವಂತಹುದು. ನಾಲ್ಕು ವರುಷಗಳ ಕೆಳಗಿನ ರಾಜಕೀಯ ಚಳುವಳಿಯು ಸುಸಂಸ್ಕೃತವಾದರೂ ಭೀರುವಾದ ಒಬ್ಬ ಗುಮಾಸ್ತೆಯ ಹೃದಯವನ್ನು ಹೇಗೆ ಧೈರ್ಯದ ಎಲ್ಲೆಯನ್ನು ಸೇರಿಸಿತು ಎಂಬುದನ್ನು 'ಧ್ವಜರಕ್ಷಣೆ' ನಿರೂಪಿಸುತ್ತದೆ. ಲಾಠಿಯ ಹೊಡೆತದಿಂದ ಬಿದ್ದ ಬಾಲಕನ ಕೈಯೊಳಗಿನ ಬಾವುಟದ ಮೇಲೆ ಮೋಜವನ್ನೂರಿ ದಫೇದಾರನು ಅದನ್ನು ಸೆಳೆದುಕೊಳ್ಳಲು ಬಗ್ಗಿದಾಗ ಮುಕುಂದ ಆತ್ಮಾವಮಾನವನ್ನು ಸಹಿಸಲಾರದೆ ತನ್ನನ್ನೇ ಮರೆತು ಧ್ವಜರಕ್ಷಣೆಗೆ ಧಾವಿಸುತ್ತಾನೆ. ಬಡ ಗುಮಾಸ್ತನ ಚಿಂತಾಮಾಲೆಯನ್ನು ಚಿತ್ರಿಸಿಕೊಂಡು ಬಂದು ಈ ನಿಮಿಷದ ಆವನ ಧನ್ಯತೆಯಲ್ಲಿ ಕಥೆಯು ತನ್ನ ರಸಾವೇಶವನ್ನು ಮುಟ್ಟುತ್ತದೆ.

ಮೂಲಭಾವಗಳಲ್ಲೊಂದರ ಲೋಕದಿಂದಿನ್ನೊಂದರ ಲೋಕಕ್ಕೆ ಮನಸ್ಸು ಚಿಮ್ಮುವ ಭವ್ಯದೃಶ್ಯವು ಇಲ್ಲಿ ಕಂಡಂತೆ ಎರಡನೆ ಕಥೆಯಾದ 'ವಿಷಾದಯೋಗ' ದಲ್ಲಿಯೂ ಕಾಣುತ್ತದೆ. ಪ್ರಪಂಚವೇ ಒಬ್ಬ ಬಡನೌಕರನ ನೋದ್ವೇಗದೃಷ್ಟಿಗೆ ಆವನಿಂದ ಹೊರತಾದ ಆನಂದಲೋಕದಂತೆ, ಸ್ವಪ್ನರಾಜ್ಯದಂತೆ, ತೋರುತ್ತದೆ. ಸಂಧ್ಯೆಯ ಸೌಂದರ್ಯವೂ ಸ್ತ್ರೀಪುರುಷರ ಆಸೆಗಳಿಂದ ಬೆಳಗುವ ಮುಖಗಳೂ ಆವನ ಅಸುಖವನ್ನು ಹಿಂದೊತ್ತಾಗಲೇ ಹೆಚ್ಚಿಸುವುವು. ನಿರ್ಧನತೆಯೂ, ನಿಷ್ಪ್ರೀತಿಯು, ನದಿಯ ಈಚೆದಡದಲ್ಲಿವನು, ಆಚೆದಡದಲ್ಲಿ ಆವರು. ಕಡೆಗೆ ಆವನ ಸ್ನೇಹಿತ, ಕೇಶವ, ಬೆನ್ನಿನ ಮೇಲೊಂದು ಗುದ್ದಿ ನಿಂದ ಆವನನ್ನೆಚ್ಚರಿಸಿ, ದಾಳಿಂಬೆಯೊಂದರ 'ರತ್ನಭಂಡಾರ' ವನ್ನೊಡೆದು ಮಮತೆಯಿಂದಿತ್ತಾಗ, ಬಳಿಕ ವಿನೋದಾಭಿಮುಖರಾಗಿ ಇಬ್ಬರೂ ಪೇಟೆಯೊಳಕ್ಕೆ ಹೊರಟಾಗ, ಬಡಬಿಂದುಮಾಧವನ ಆತ್ಮ 'ಈ ಸ್ನೇಹದ ಜೀವಾಣುವಿನಿಂದ ವಿಷಾದಜಾಡ್ಯಮುಕ್ತವಾಗಿ' ಚೇತರಿಸಿಕೊಂಡು ಸುಖವಾಗಿತ್ತು.

'ರಾಗಿಣಿ', 'ಸಿಂಗಿಯೋ ಲವಂಗಿಯೋ', 'ಕಾಲದೊಡನೆ ಅಶ್ವತ್ಥನ ಸ್ಪರ್ಧೆ'—ಈ ಮೂರು ಸಣ್ಣಕತೆಗಳು ಪ್ರೇಮದ ಕ್ರಾಂತಿಕಾರತೆಯನ್ನು, ಕ್ಷಮೆಯನ್ನು, ತಟಿದ್ವಿಲಾಸವನ್ನು, ಚಿತ್ರಿಸುತ್ತವೆ. ಸಮಾಜದ ಅಸದೃಶ ವಿಭಾಗಗಳ ವ್ಯವಹಾರಗಳಲ್ಲಿ ಪ್ರೇಮ ಒಮ್ಮೆ ನ್ಯಾಯಪಾತ ಹೇಳುವುದು 'ರಾಗಿಣಿ' ಯ ವಸ್ತು, ರಂಗಾಮೇಸ್ತ್ರಿಯ

ಮಗ ದೇವ, ಕಂಟ್ರಾಕ್ಟದಾರ ರಾವ್‌ಸಾಹೇಬ್ ಶಂಭುಸ್ವಾಮಿಯ ಮಗಳು ರಾಗಿಣಿ, ಒಬ್ಬರನ್ನೊಬ್ಬರೊಲಿದು ಅವಳಿಗಾಗಿ ಏರ್ಪಾಟಾಗುತ್ತಿದ್ದ ಬೇರೆ ವಿವಾಹದಿಂದ ತಪ್ಪಿಸಿಕೊಂಡು ನೆರೆನಾಡಿಗೆ ಓಡಿಹೋಗುತ್ತಾರೆ. ಉತ್ಕ್ರಾಂತಿಕರವಾದ ಈ ಒಲ್ಮೆಯಲ್ಲಿ 'ಯಾವುದೋ ಬಲುಹಿಂದಿನ ನ್ಯಾಯಸುಲಾವಣೆಯಾಗುತ್ತದೋ ಏನೋ'. ಈ ಕಥೆಯಲ್ಲಿ ಶಂಭುಸ್ವಾಮಿಯ ಪಾತ್ರಪೋಷಣೆ ಸ್ವಾರಸ್ಯವಾಗಿದೆ. ಇವನಿಗೆ ಕೂಲಿಗಳಲ್ಲಿ ಆದರ. ಆದರೆ ಅದು ಕುರುಬನಿಗೆ ಕುರಿಗಳಲ್ಲಿರುವ ಆದರ. 'ಬಂಡೆಯ ಮೇಲಿನ ಮಣ್ಣಿನಂತೆ ಸಾಹುಕಾರ ರಾವ್‌ಸಾಹೇಬರ ಲೋಭದ ಮೇಲಿನ ಅಂತಃಕರಣ ಈ ಕೂಲಿಜನರ ಸಂಪೂರ್ಣವಾದ ಆತ್ಮವಿಕಾಸಕ್ಕೆ ಅವಕಾಶಕೊಡದು'.

'ನಿಂಗಿಯೋ ಲವಂಗಿಯೋ' ಒಂದು 'ರೊಮ್ಯಾಂಟಿಕ್' ಕಥೆ. ಆರ್ಡರ್ಲಿ ವಸಂತಯ್ಯ ನಿಂಗಿಯನ್ನು ಮದುವೆಯಾಗುತ್ತೇನೆಂದು ಹೇಳಿ ತನ್ನ ಲೈನಿಗೆ ಒಯ್ಯುತ್ತಾನೆ. ಅವನ ಕಣ್ಣಿಗೆ ಅವಳು ಲವಂಗಿ, ಅವಳ ಕಣ್ಣಿಗೆ ಅವನು ವಸಂತಕುಮಾರ್. ಆದರೆ ತನ್ನ ಆಫೀಸರ್ ಅವಳೊಡನೆ ಸಂಬಂಧ ಕಲ್ಪಿಸಿಕೊಂಡಿರುವನೆಂದು ಸಂಶಯಪಟ್ಟು ಅವನು ಅವಳನ್ನು ಚಿಂದಿಬಟ್ಟೆಯಲ್ಲಿ ಮಳೆಯೊಳಕ್ಕೆ ಹೊರದೂಡುತ್ತಾನೆ. ಸ್ವಲ್ಪಕಾಲದಲ್ಲಿಯೇ ಅವನ ಪಶ್ಚಾತ್ತಾಪವೂ ಅವಳ ಕ್ಷಮೆಯೂ ಅವರನ್ನು ಮರಳಿ ಒಂದುಗೂಡಿಸುವುವು. ಮಳೆಯಲ್ಲಿ ಅನಾಥೆಯಾಗಿ ಬಿದ್ದಿದ್ದವಳನ್ನು ಉಪಚರಿಸಿ ಅವಳಕ್ಕನ ಮನೆಗೆ ಕಳುಹಿಸಿಕೊಟ್ಟ ಅಂದಿನ ಡೇ ಆಫೀಸರ್ ಪೂರ್ಣಸಿಂಗನ 'ಷಿವಲ್ರಸ್' ಮನೋಭಾವವು ಕಥೆಯ ವಾತಾವರಣವನ್ನು ಕಲ್ಪಿಸುತ್ತದೆ. 'ಕಾಲದೊಡನೆ ಅಶ್ವತ್ಥನ ಸ್ಪರ್ಧೆ' ಅಶ್ವತ್ಥನ ಸೋಲಿನಲ್ಲಿ ಮುಗಿಯುತ್ತದೆ. ಅರ್ಧನಾರೀಶ್ವರ ಡಮರು ಬಾರಿಸಿದಾಗ ದಿಕ್ಕುಗಳು ದೂರಸರಿದು ದೇಶವಾಗಿ ಅವನು ಕುಣಿಯತೊಡಗಿದಾಗ ಕಾಲನ ತಾಳ ಕಾಲವಾಯಿತು. ಈ ಕುಣಿತಕ್ಕೆ ಮೂಲ ಅರ್ಧ ಗಂಡು ಅರ್ಧ ಹೆಣ್ಣಾದುದರಿಂದ ಕಾಲುತಪ್ಪಿ ಲಯ ಕೆಡುವುದು ಸಹಜ.' ಆಗ ದೇಶಕಾಲ ವಿಪರ್ಯಾಸ. ಈ ಗಾಢ ಕಲ್ಪನೆಯು ಕಥೆಯ ಹಾಸ್ಯಫಲದ ಬೀಜ. ಕಷ್ಟಪಟ್ಟು ರೈಲುಹತ್ತಿದ ಅಶ್ವತ್ಥ ಬೆಡಗಿಯೊಬ್ಬಳ ವಿಲಾಸ ಚೇಷ್ಟೆಗಳ ಮರುಳುನೋಟದಲ್ಲಿ ತನ್ನ ಸ್ಟೇಷನ್ನನ್ನು ದಾಟಿ ಮುಂದಿನ ಎರಡನೆ ಸ್ಟೇಷನ್ನಿನಲ್ಲಿ ಇಳಿಯುವುದು ಹೃದಯಂಗಮವಾಗಿ ವರ್ಣಿಸಲ್ಪಟ್ಟಿದೆ.

ಈ ಪಂಚಾಮೃತವನ್ನು ಸವಿದವನಿಗೆ ಉಳಿದ ಕಥೆಗಳು ಅತೃಪ್ತಿಕರವಾಗಿ ತೋರುವುದು ಆಶ್ಚರ್ಯಕರವಲ್ಲ. ಭಾವರಹಸ್ಯಗಳ ಭೇದನವನ್ನು ಮೇಲಿನ ಕಥೆಗಳಲ್ಲಿ ಸಹಜ ಜೀವನ ಚಿತ್ರಣದೊಂದಿಗೆ ಮೇಳವಿಸಿದಂತೆ ಇಲ್ಲಿ ಮೇಳವಿಸದಿರುವುದೇ ಇದಕ್ಕೆ ಕಾರಣ. ಇವುಗಳಲ್ಲಿ 'ಕೋಳಂದೆ' ಸ್ವಲ್ಪ ಸ್ವಾರಸ್ಯವಾಗಿದೆ. 'ಆಯಾ ಆಸೆಗೆ ತಕ್ಕಂತೆ ಆಯಾ ಅವತಾರಗಳನ್ನು ತಾಳಿ ಅವನ್ನು ಪರಿಹರಿಸಿಕೊಳ್ಳುವುದು ಕೋಳಂದೆಯ ಕಲೆಯ ಮರ್ಮ'. ಭಾರ ಹೊರುವಾಗ ಅವನು ಕತ್ತೆಯಂತೆ ನಟಿಸುತ್ತಾನೆ, ಗಿಣಿಗಳನ್ನು ನೋಡಿದಾಗ ತಾನೂ ಗಿಣಿಯಂತೆ ಅಭಿನಯಿಸುತ್ತಾನೆ. ಈ ಗುಣವನ್ನು ಕೀಟ್ಸ್ 'ನೆಗಟಿವ್ ಕೇಪಬಿಲಿಟಿ' ಎಂದು ಕರೆದು ಕವಿಯ ಮನೋಧರ್ಮದ ವಿಶಿಷ್ಟ ಗುಣವಿದೆಂದು ತನ್ನೊಂದು ಪತ್ರದಲ್ಲಿ ಹೇಳುತ್ತಾನೆ.

ಕನ್ನಡ ಸಣ್ಣಕತೆಯ ಸಂಪತ್ತನ್ನು ಶ್ರೀಮಾನ್ ನರಸಿಂಹಾಚಾರ್ಯರು, 'ರಾಮಾಚಾರಿಯ ನೆನಪು' ಎಂಬ ಸಂಕಲನದಿಂದ ಹಿಂದೆ ಹೆಚ್ಚಿಸಿದಂತೆ, 'ಧ್ವಜರಕ್ಷಣೆ' ಯಿಂದ ಇನ್ನಷ್ಟು ಹೆಚ್ಚಿಸಿದ್ದಾರೆ.

— ಕೆ. ನರಸಿಂಹಮೂರ್ತಿ

"ಗಳಗನಾಥ".—ಕ್ರೌನ್ ಅಷ್ಟಪತ್ರಾಕೃತಿಯ ೮+೫೯+೧೩ ಪುಟಗಳು. ಬೆಲೆ ರೂ. ೧-೮-೦. ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಿಂದ ಪ್ರಕಟವಾದುದು.

ಈ ಪುಸ್ತಕದಲ್ಲಿ ಕನ್ನಡ ನಾಡಿನ ಪ್ರಖ್ಯಾತ ಲೇಖಕರಾದ ಶ್ರೀ ಗಳಗನಾಥರ (ಶ್ರೀ ವೆಂಕಟೇಶ ತಿರಕೊ ಕುಲಕರ್ಣಿ ಗಳಗನಾಥರ) ಜೀವನ ವಾಙ್ಮಯಗಳನ್ನು ಕುರಿತು ಒಂದು ಕವಿತೆಯೂ, ನಾಲ್ಕು ಲೇಖನಗಳೂ ಪ್ರಕಟವಾಗಿವೆ. ಶ್ರೀ ಆರ್. ವಿ. ಜಾಗಿರದಾರರು ವಿಸ್ತಾರವಾದ ಮುನ್ನುಡಿಯನ್ನು ಬರೆದಿದ್ದಾರೆ. ಕವಿತೆಯನ್ನು ಶ್ರೀ ಕೃಷ್ಣಮೂರ್ತಿ ಪುರಾಣಿಕರು ಬರೆದಿದ್ದಾರೆ. ಶ್ರೀ ಗಳಗನಾಥರ ಕಾಲವನ್ನು ಕುರಿತು ಶ್ರೀ ವಿ. ಎಂ. ಇನಾಂದಾರರೂ, ಜೀವನ ವೃತ್ತಾಂತವನ್ನು ಕುರಿತು ನೆಗಳೂರ ರಂಗನಾಥರೂ, ಕೃತಿಗಳನ್ನು ಕುರಿತು ಶ್ರೀ ಎಚ್. ಎಸ್. ಪಾಟೀಲರೂ, ಮತ್ತು "ಕಾಣಿಕೆ" ಯನ್ನು ಕುರಿತು ಶ್ರೀ ಕೃಷ್ಣಕುಮಾರರೂ ಲೇಖನಗಳನ್ನು ಬರೆದಿದ್ದಾರೆ. ಇವರೆಲ್ಲರೂ ಅರಿತ ನುರಿತ ಬರೆಹಗಾರರಾಗಿ ಕನ್ನಡ ನಾಡಿನಲ್ಲಿ ಪ್ರಸಿದ್ಧರಾಗಿದ್ದಾರೆ. ಆದಕಾರಣ, ಕವಿತೆಯನ್ನೇ ನೋಡಲಿ, ಮುನ್ನುಡಿಯನ್ನೇ ನೋಡಲಿ ಅಥವಾ ಲೇಖನಗಳನ್ನೇ ನೋಡಲಿ, ಶ್ರೀ ಗಳಗನಾಥರ

ಹಿರಿಮೆಯು ಎದ್ದು ಕಾಣುವಂತಿದೆ; ಒಟ್ಟಿನ ಮೇಲೆ ಪುಸ್ತಕವು ಮೊದಲಿನಿಂದ ಕೊನೆಯವರೆಗೂ ಸ್ವಾರಸ್ಯವಾಗಿದೆ. ನಮ್ಮ ನಾಡಿನ ಹಿರಿಯ ಸಾಹಿತಿಗಳ ಸ್ಮಾರಕವನ್ನು ಈ ರೀತಿಯಲ್ಲಿ ನೆರವೇರಿಸಿರುವುದು ನಿಜವಾಗಿಯೂ ಸ್ತುತ್ಯವಾದ ವಿಚಾರ; ಶ್ರೇಷ್ಠವಾದ ಕಾರ್ಯ.

ಶ್ರೀ ಗಳಗನಾಥರ ಭಾಷಾಭಿಮಾನವನ್ನೂ, ಅವರ ಸ್ವತಂತ್ರ ಧೋರಣೆಯನ್ನೂ, ಅವರ ಲೇಖನ ಕಾರ್ಯವು ವಸ್ತುತಃ "ಕನ್ನಡ ಪುನರುಜ್ಜೀವನದ ಚಳವಳ"ವೆಂಬುದನ್ನೂ ಮುನ್ನುಡಿಕಾರರು ಸ್ವಾರಸ್ಯವಾಗಿ ನಿರೂಪಿಸಿದ್ದಾರೆ. ಶ್ರೀ ಇನಾಂದಾರರು ಶ್ರೀ ಗಳಗನಾಥರ ಕಾಲದ ಚಲನವಲನಗಳನ್ನು ಚಿತ್ರಿಸಿ, ಶ್ರೀ ಗಳಗನಾಥರ ಸಾಹಿತ್ಯಜೀವನದ ಸುವರ್ಣಕಾಲವನ್ನು ಸೂಚಿಸಿ, ಅವರು "ಕಾದಂಬರಿ ಪ್ರಪಂಚಕ್ಕೆ ಹೊಸಕಳೆಯನ್ನು ತಂದುಕೊಟ್ಟ"ವರೆಂಬುದನ್ನು ವಿವರಿಸಿ, ಕನ್ನಡ ಸಾಹಿತ್ಯದ ಇಪ್ಪತ್ತನೆಯ ಶತಮಾನದ ಪುರೋಭಿವೃದ್ಧಿ ಸಾಧನೆಗೆ ಹತ್ತೊಂಬತ್ತನೆಯ ಶತಮಾನದ ಪೂರ್ವಸಿದ್ಧತೆಯು ಕಾರಣವೆಂಬುದನ್ನು ಹೃದಯಂಗಮವಾಗಿ ತೋರಿಸಿ ಕೊಟ್ಟಿದ್ದಾರೆ. ಶ್ರೀ ನೆಗಳೂರು ರಂಗನಾಥರು, "ಕನ್ನಡ ಭಾಷೆಗಾಗಿ ತನುಮನಧನವನ್ನೆಲ್ಲ ಅರ್ಪಿಸಿದ ಗಳಗನಾಥರ ಸಾಹಸಜೀವವೇ ಧನ್ಯ" ವೆಂಬುದನ್ನು ಚೆನ್ನಾಗಿ ಸಮರ್ಥಿಸಿದಾರೆ; ಗಳಗನಾಥರು "ಮುಪ್ಪಿನ ವಯಸ್ಸಿನಲ್ಲಿಯೂ ವಿರೂಪಾಕ್ಷನ ಗೋಪುರದೆತ್ತರದಷ್ಟು ಪುಸ್ತಕದ ಗಂಟನ್ನು ಹೆಗಲಮೇಲೆ ಹೊತ್ತು ಕೈಯಲ್ಲಿ ಹಿಡಿದು ಬರಿಗಾಲಿನಿಂದ ದಾರಿ ತುಳಿದು ಸಾಲ ತೀರಿಸಿಯೆ ತೀರುವೆನೆಂಬ ಹಟದಿಂದ ಕನ್ನಡ ನಾಡಿನಲ್ಲಿ ಅಡ್ಡಾಡುವುದನ್ನು ನೋಡಿದಾಗ ಕರುಳುಕಿತ್ತಿ ಕೈಯಲ್ಲಿ ಕೊಟ್ಟಂತಾಗುತ್ತಿತ್ತು" ಎಂಬ ವಾಕ್ಯವನ್ನೋದಿದರೆ ಹೃದಯವೇ ಕಲಕಿಹೋಗುತ್ತದೆ. ಶ್ರೀ ಎಚ್. ಎಸ್. ಪಾಟೀಲರು, ಶ್ರೀ ಗಳಗನಾಥರು ಅನೇಕ ಕಥೆಗಳನ್ನೂ, ಕಾದಂಬರಿಗಳನ್ನೂ ಮತ್ತು ಲೇಖನಗಳನ್ನೂ ತಮ್ಮದೇ ಆದ ಗಂಡು ಶೈಲಿಯಲ್ಲಿ ಬರೆದಿರುವುದನ್ನು ನಿರೂಪಿಸಿ, ಅದರ ವಿಷಯವಾಗಿ ಕೆಲವು ನಿದರ್ಶನಗಳನ್ನು ಕೊಟ್ಟಿದ್ದಾರೆ. ಶ್ರೀ ಕೃಷ್ಣಕುಮಾರರು ಶ್ರೀ ಗಳಗನಾಥರ "ಕಾಣಿಕೆ" ಯೇನೆಂಬುದನ್ನು ಸ್ವಾರಸ್ಯವಾಗಿ ವಿವರಿಸಿದ್ದಾರೆ; ಅವರ ಗ್ರಂಥಗಳಲ್ಲಿ ಭಾಷಾಂತರಗಳೇ ಹೆಚ್ಚಾಗಿದ್ದರೂ, ಅವು "ಬರಿಯ ಭಾಷಾಂತರಗಳಾಗಿರದೆ ದೇಶಭಕ್ತಿಯ ಸಂದೇಶವಾಹಕಗಳೂ ಆಗಿವೆ" ಎಂಬುದನ್ನು ನಿರೂಪಿಸಿದ್ದಾರೆ. ಶ್ರೀ ಪುರಾಣಿಕರ ಕವಿತೆಯೂ ಹೃದಯಂಗಮವಾಗಿದೆ. ಪುಸ್ತಕವು ಬಹಳ ಸ್ವಾರಸ್ಯವಾಗಿ ಚೆನ್ನಾಗಿದೆ. ಇದನ್ನು ಪ್ರಕಟಿಸಿರುವುದು ಕನ್ನಡಿಗರಿಗೊಂದು ದೊಡ್ಡ ಉಪಕಾರ.

— ಸಿ. ಕೆ. ವೆಂಕಟರಾಮಯ್ಯ

# ಪ್ರಾಚ್ಯಲೇಖನ ಸೂಚಿಕೆ

**ಶಿವಾನುಭವ.** ಜನವರಿ: ೧೯೪೬. ಸಂ. XX, ಸಂಚಿಕೆ ೪.

೧. ಶಿವಶರಣರ ಚರಿತ್ರೆಗಳು.

— ಸಂಪಾದಕ: ರಾ|| ಬ|| ಪಿ. ಜಿ. ಹಳಕಟ್ಟಿ.

ಆಗಸ್ಟ್: ೧೯೪೬. ಸಂ. XX, ಸಂಚಿಕೆ ೧೦-೧೧.

(೧) ಶಿವಶರಣರ ಚರಿತ್ರೆ ಭಾಗ ೨.

(೨) ಶಿವಶರಣರ ಚರಿತ್ರೆ ಭಾಗ ೨. (ಮುಂದುವರಿದುದು)

ಸೆಪ್ಟೆಂಬರ್: ೧೯೪೬. ಸಂ. XX, ಸಂಚಿಕೆ ೧೨.

(೧) ಶಿವಶರಣರ ಚರಿತ್ರೆ ಭಾಗ ೩. (ಸಂಪೂರ್ಣ)

— ಸಂಪಾದಕ: ರಾ|| ಬ|| ಪಿ. ಜಿ. ಹಳಕಟ್ಟಿ.

**ಜೀವನ.** ಜನವರಿ: ೧೯೪೬. ಸಂ. VI, ಸಂಚಿಕೆ ೯.

೧. ವಿಚಾರಗೋಷ್ಠಿ–ಸಣ್ಣ ಕಥೆಯಲ್ಲಿ ವಾಸ್ತವಿಕತೆಯ ಸ್ಥಾನ.

(೧) ಶ್ರೀ. ತೀ. ನಂ. ಶ್ರೀಕಂಠಯ್ಯ,

(೨) ಶ್ರೀ. ವೈ. ಎಂ. ಷಣ್ಮುಖಯ್ಯ,

(೩) ಶ್ರೀ. ಕೆ. ನರಸಿಂಹಮೂರ್ತಿ,

(೪) ಶ್ರೀ. ಕೆ. ಎಸ್. ನಾಗರಾಜನ್,

(೫) ಶ್ರೀ. ಆರ್. ಎಸ್. ರಾಮರಾವ್.

ಮೇ: ೧೯೪೬. ಸಂ. VII, ಸಂಚಿಕೆ ೧.

೧. ನಮ್ಮಾಳ್ವಾರ್ ಮತ್ತು ಅವರ ಪ್ರಬಂಧಗಳು.

— ಶ್ರೀ. ಅಯ್ಯಂಗಾರ್ ನ. ಶ್ರೀನಿವಾಸ್ಯಂಗಾರ್.

ಜುಲೈ: ೧೯೪೬. ಸಂ. VII, ಸಂಚಿಕೆ ೩.

೧. ಶ್ರೀ. ಕುಲಶೇಖರ ಆಳ್ವಾರರು ರಚಿಸಿದ ಮುಕುಂದಮಾಲಾ ಸ್ತೋತ್ರ.

— ಅನುವಾದಕರು: ಶ್ರೀ. ಎಲ್. ಗುಂಡಪ್ಪ.

ಸೆಪ್ಟೆಂಬರ್: ೧೯೪೬. ಸಂ. VII, ಸಂಚಿಕೆ ೫.

೧. ಕನ್ನಡ ಕಾದಂಬರಿಯಲ್ಲಿ ಮದುವೆಯ ಸಮಸ್ಯೆ.

— ಶ್ರೀ. ನಿಗಳೂರು ರಂಗನಾಥ.

೨. ತಮಿಳು ಕವಿಶ್ರೇಷ್ಠ ಶ್ರೀ. ಶುದ್ಧಾನಂದ ಭಾರತಿಯವರು.

— ಶ್ರೀಮತಿ ಜಯಲಕ್ಷ್ಮಿ ಆರ್. ಶ್ರೀನಿವಾಸನ್.

ಅಕ್ಟೋಬರ್: ೧೯೪೬. ಸಂ. VII, ಸಂಚಿಕೆ ೬.

೧. ಭಾರತದಾಚೆ ಬೌದ್ಧಧರ್ಮ.

— ಶ್ರೀ. ರಾಮಚಂದ್ರರಾಯ ಶರ್ಮ.

**ವಾಗ್ಭೂಷಣ.** ಜನವರಿ: ೧೯೪೬. ಸಂ. III, ಸಂಚಿಕೆ ೭.

೧. ಕನ್ನಡ ಕಾವ್ಯಸಾಹಿತ್ಯದಲ್ಲಿ ಹೊಸತನ.

— ಶ್ರೀ. ಕೃಷ್ಣಮೂರ್ತಿ ಪುರಾಣಿಕ.

೩. ರೇವಣಸಿದ್ಧನ ಉತ್ಪತ್ತಿ ಮತ್ತು ಕಾಲ.
— ಶ್ರೀ. ಕೆ. ಕೃಷ್ಣರಾವ್.

೪. ರೇವಣಸಿದ್ಧನ ಕಥಾಸಾರ ೧.

ಜೂನ್ : ೧೯೪೬. ಸಂ. IX, ಸಂಚಿಕೆ ೪.

೧. ರೇವಣಸಿದ್ಧನ ಕಥಾಸಾರಾಂಶ. (ಮುಂದುವರಿಸುದು)
— ಶ್ರೀ. ಕೆ. ಕೃಷ್ಣರಾವ್.

೨. ಶೈವಮತವೂ ಹರಿಜನರೂ.
— ಶ್ರೀ. ಕೊಪ್ಪದ ರಾಮಸ್ವಾಮಿ ಅಯ್ಯಂಗಾರ್, ಅನೇಕಲ್.

೩. ಶ್ರೀ. ಷಡಕ್ಷರದೇವನ ವರ್ಣನೆಗಳು.
— ವೇ. ವಿದ್ವಾನ್ ಸಿದ್ಧವೀರ ಶಾಸ್ತ್ರೀ, ಕಾವ್ಯ, ಪುರಾಣತೀರ್ಥ,
ಹಾಲೇವಾಡಿಮಠ, ಹಿರೇವಡವಟ್ಟಿ.

೪. ಪಾಳೆಯಗಾರರು.
— ರಾಜಮಂತ್ರ ಪ್ರವೀಣ ಎಚ್. ಬಿ. ಗುಂಡಪ್ಪಗೌಡರು,
(ಪಾಳೆಯಗಾರರ ಎರಡನೆಯ ಸಮ್ಮೇಳನದ ಅಧ್ಯಕ್ಷ ಭಾಷಣ)

ಜಯಂತಿ. ಫೆಬ್ರುವರಿ : ೧೯೪೬. ಸಂ. VIII, ಸಂಚಿಕೆ ೯.

೧. ಸಾಹಿತ್ಯ ಮತ್ತು ಪ್ರಗತಿ.
— ಪ್ರೊ. ರಾ. ಯ. ಧಾರವಾಡಕರ, ಎಂ.ಎ.

೨. ಕರ್ನಾಟಕ ಚಳವಳಿಯಲ್ಲಿ ಧಾರವಾಡದ ಭಾಗ.
— ಶ್ರೀ. ಮುದವೀಡು ಕೃಷ್ಣರಾಯರು.

ಮೇ : ೧೯೪೬. ಸಂ. VIII, ಸಂಚಿಕೆ ೧೨.

೧. ಸಂಸ್ಕೃತಿ ಮತ್ತು ನಾಗರಿಕತೆ.
— ಶ್ರೀ. ಶಂ. ಬಾ. ಜೋಶಿ, ಧಾರವಾಡ.

ಜೂನ್ : ೧೯೪೬. ಸಂ. IX, ಸಂಚಿಕೆ ೧.

೧. ಸಂಸ್ಕೃತ ಭಾಷೆಯ ಅಭ್ಯಾಸ. (ಭಾಷಾ-ವಿಜ್ಞಾನ)
— ಶ್ರೀ. ಕೆ. ಎಸ್. ರಾವ್, ಬನಾರಸ.

ಜುಲೈ : ೧೯೪೬. ಸಂ. IX, ಸಂಚಿಕೆ ೨.

೧. ಸಾಹಿತ್ಯಿಕ ಮತ್ತು ಶೀಲ.
— ಶ್ರೀ. ವಿ. ಎಂ. ಇನಾಂದಾರ, ಎಂ.ಎ.

ಆಗಸ್ಟ್ : ೧೯೪೬. ಸಂ. IX, ಸಂಚಿಕೆ ೩.

೧. ಕನ್ನಡ, ಕಂನಾಡು. (ಶಬ್ದ ಶುದ್ಧ ವಿಚಾರ)
— ಶ್ರೀ. ಶಂ. ಬಾ. ಜೋಶಿ.

ಸೆಪ್ಟೆಂಬರ್ : ೧೯೪೬. ಸಂ. IX, ಸಂಚಿಕೆ. ೪.

೧. ಪ್ರಾಕೃತ ಭಾಷೆಗಳು. (ಭಾಷಾವಿಜ್ಞಾನ)
— ಶ್ರೀ. ಕೆ. ಟಿ. ಪಾಂಡುರಂಗಿ, ಪಿ. ಓ. ಎಲ್.

ಅಕ್ಟೋಬರ್ : ೧೯೪೬. ಸಂ. IX, ಸಂಚಿಕೆ ೫.

೧. ಸಾಹಿತಿಗೆ ಚಾರಿತ್ರ್ಯವೊ ವ್ಯಕ್ತಿತ್ವವೊ.
— ಶ್ರೀ. ಗೌರೀಶಕಾಯಕಿಣಿ, ಗೋಕರ್ಣ.

**ಜಯಕರ್ನಾಟಕ.** ಸೆಪ್ಟೆಂಬರ್: ೧೯೪೬. ಸಂ. XXIV, ಸಂಚಿಕೆ ೯.

೧. ಕಾಲಿದಾಸನ ವಾತ್ಸಲ್ಯರಸ.
— ಶ್ರೀ. ಕಾನೋಳಕರ ಶ್ರೀಧರರಾಯರು.

೨. ಕನ್ನಡ ಸಾಹಿತ್ಯದಲ್ಲಿ ಜೈನಯುಗ.
— ಶ್ರೀ. ಮಿರ್ಜಿ ಅಣ್ಣಾರಾಯರು.

**ಸುಬೋಧ.** ಜುಲೈ: ೧೯೪೬. ಸಂ. XXI, ಸಂಚಿಕೆ ೨೪೭.

೧. ಜೀವನ ಮತ್ತು ಸಾಹಿತ್ಯಾಭಿರುಚಿ.
— ಶ್ರೀ. ಬಿ. ಎಚ್. ಶ್ರೀಧರ, ಎಂ.ಎ.

ಆಗಸ್ಟ್: ೧೯೪೬. ಸಂ. XXI, ಸಂಚಿಕೆ ೨೪೮.

೨. ಶ್ರೀ. ವಿಜಯ ವೆಂಕಟರಮಣ ಕವಿವರ್ಯರ ಲಘುಪರಿಚಯ.
— ಶ್ರೀ. ಹೆಜ್ಜಾವಿ ವಿ. ಕೃಷ್ಣಮೂರ್ತಿ.

**ಧಾರವಾಡದ ಲಿಂಗಾಯಿತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಪತ್ರಿಕೆ.**
(ಇಂಗ್ಲಿಷ್-ಕನ್ನಡ ತ್ರೈಮಾಸಿಕ) ಫೆಬ್ರುವರಿ: ೧೯೪೬. ಸಂ. V. ಸಂಚಿಕೆ ೪.

೧. Why Mahādēvi is Great.
— Shrimati Sandhyadevi.

೨. ವಚನಕಾರರ ಶೈಲಿ.
— ಶ್ರೀ. ಸಿ. ಕ. ಪುರಾಣಿಕ.

೩. ಪೋತನನ ಬಾಳಿನ ಮೇಲೆ ಬೆಳಕು.
— ಶ್ರೀ. ಎಸ್. ಎಸ್. ಬಿ. ಚೆನ್ನಬಸವೇಶ್ವರ.

೪. 'ಶೃಂಗಾರಸಾರ'ದ ಹಂಪೆ.
— ಶ್ರೀ. ಚೆನ್ನಬಸವನಗೌಡ.

೫. ಶ್ರೀ. ಬಸವಣ್ಣನವರ ಶಿವಾನುಭವ ಶಾಸ್ತ್ರದ ರಹಸ್ಯವು.
— ಶ್ರೀ. ಹಾಲಯ್ಯನವರು.

**ಆಂಧ್ರಸಾಹಿತ್ಯ ಪರಿಷತ್ಪತ್ರಿಕ.** ಸಂ. XXXIV, ೩೪, ಸಂಚಿಕೆ ೩-೬.

೧. ಶ್ರೀನಾಥುಡು ಬಂಗಾರು ಮೊಲಕ.
— ಕುಂದೂರಿ ಈಶ್ವರದತ್ತುಗಾರು, ಬಿ.ಎ.

೨. ಕುಮಾರ ಸಂಭವ ವಿಮರ್ಶನಮು.
— ಭಕ್ತವತ್ಸಲಗಾರು, ಬಿ.ಎ.

೩. ದರ್ಶನ ಸಮೀಕ್ಷ.
— ಚಿಲಕೂರಿ ವೀರಭದ್ರ ಶಾಸ್ತ್ರಿಗಾರು.

೪. ಕಳಾಪೂರ್ಣೋದಯಮು.
— ದುವ್ವೂರಿ ಸೂರ್ಯನಾರಾಯಣ ಶಾಸ್ತ್ರಿಗಾರು.

೫. ನನ್ನೆ ಚೋಡುನಿ ವರ್ಣನಾ ನೈಪುಣಿ.
— ಚಿಲಕೂರಿ ಪಾಪಯ್ಯ ಶಾಸ್ತ್ರಿಗಾರು.

೬. ಶಿವಲೀಲಾ ವಿಲಾಸಮು – ಪ್ರಥಮಾಶ್ವಾಸಮು.
— ನಿಶ್ಶಂಕ ಕೊಮ್ಮನಾಮಾತ್ಯುಡು.

*The Poona Orientalist.* Vol. X, No. 3-4, July 45 - Oct. 45.

1. The Rise of Maurya Imperialism.
   —Sri Budha Prakash, M.A.
2. Story of King Bhōja and Ganga Teli in Sanskrit and its relation to a proverb current in the Marāthi Language.
   —Sri P. K. Gode.
3. Judicial Aspects of the Gāndharva Form of marriage.
   —Dr. Ludwick Srernback.
4. Bharōtthapana Yantra Nirmāṇa Vidhi of Dēvisimha.
   —Sri K. M. K. Sarma,
5. Lakṣmaṇa, the author of the Gūdārtha Kās'ikā on the Naishadhīya Çarita.
   —Sri K. M. K. Sarma.
6. S'rautakōs'a.
   —Sri C. G. Kashiker.
7. On the Vīṇā Vāsavadattam.
   —Prof. C. R. Devadhar, M.A.
8. The Ṛgvēdic Ballads.
   —Prof. P. S. Sastry, M.A.
9. Ṛta or the Zodiacal Belt.
   —Sri V. H. Vader, M.A.,LL.B.

Vol, XI, No, 1-2. Jan. & April 1946.

1. A New Approach to the Bhagavadgīta.
   —Sri S. N. Tadpatrikar, M.A.
2. Siddhāntasārasarvaswa - another work of Lakshmaṇa Pandita.
   —Sri K. Madhava Krishna Sarma.
3. Exact date of Raghunāthabhaṭṭa's Commentary on Trims'açÇhlōki—1588 A.D.
   —Sri Sadashiva & Katre, M.A., Ujjaini.
4. The Padyatarangiṇi of Vrajanātha - an Analysis & an Index.
   —Prof. N. A. Gore, M.A.
5. The Brahmanical Renaissance under the Guptas.
   —Sri Budha Prakash, M.A.
6. Were Kaniṣka and Çandragupta Vikramāditya contemporaries?
   —Prof. Jayan Nath, M.A., Oriental College, Lahore.
7. The second variety of Samuççaya in Mammata.
   —Prof. C. R. Devadhar, M.A.

*The Indian Historical Quarterly.* Vol. XXI. No. 3, Sept. 1945.

1. Some Royal Poets of the Vakataka Age.
   —Mm. Prof. V. V. Mirashi, M.A.
2. A Prakrit Tendency in Ṛgvēda.
   —Dr. A. M. Gatage, M.A., Ph.D,

Vol. XXII No. 1. March 1946.

1. An Ancient S'aka Dynasty of Mahismati.
   —Mm. Prof. V. V. Mirashi, M.A.
2. Bhāsa as a Prakrit Poet.
   —Sri K. Krishna Murthy, M.A.

*Journal of the University of Bombay.* Vol. XIV, Part 4, Jan. 1946.

1. Dolmens of Cairns of Karnātaka.
   --Sri R. S. Panchamukhi.
2. Some aspects of Administrative Institutions in Ancient Karnātak
   —Sri H. S. Neglur.

Vol. XV, Part I, July 1946.

1. Punishment and Penance in Manusmriti.
   —Sri I. P. Desai.

*Bharatiya Vidya.* Vol. VII. Nos. 3 & 4, March & April 1946.

1. S'aiva Sects and Devotees described in the Purāṇas.
   —Dr. A. P. Karmarkar.
2. Sāhitya Kalpadruma of Dinakarabhaṭṭa.
   —Sri K. Madhava Krishna Sarma.
3. On the Principal metres of Apabhrams'a Epic.
   —Prof. H. C. Bhayani.

Vol. VII, Nos. 7 & 8.

1. Purānic Culture and Tradition - Literature and Education.
   —Dr. A. P. Karmarkar.

*Journal of Indian History.* Vol. XXV. Part 3.

1. The marvels of Mōhen-Jo Daro.
   —Prof. K. N. Viswani, M.A., LL.B. (Bom) F.R.E.S.U.
2. The Krita Era.
   —Sri Dhirendra Nath Mukherjee.
3. History of the Vakātakas.
   —Late Y. M. Kale, B-A., LL.B,

*Journal of Sri Venkateswara Oriental Institute.* Vol. VII, Part I.
Jan.—June 1946.

1. The Philosophy of Religion of the Ālwārs.
—Dr. K. E. Varadachar, M.A., Ph.D.
2. Humour in Sanskrit Plays.
—Sri P. V. Ramanuja Swami, M.A.
3. Tamilian Cosmetics.
—Sri T. P. Paliniappa Pillai, B.O.L.

ಜೈನ ಸಿದ್ಧಾಂತ ಭಾಸ್ಕರ. ಸಂ. XII, ಸಂಚಿಕೆ ೧.

೧. ಗೊಮ್ಮಟೇಶ ಪ್ರತಿಷ್ಠಾಪಕ.
—ಶ್ರೀ. ಪ್ರೊ. ಗೋ. ಖುಶಾಲ ಜೈನ, ಎಂ.ಎ., ಸಾಹಿತ್ಯಾಚಾರ್ಯ.
೨. ವಿಶ್ವ-ಇತಿಹಾಸ್ ಔರ್ ಭೂಗೋಲ್‌ಕೆ ಲಿಯೆ: ಜೈನ ಸಾಹಿತ್ಯಕೀ ಮಹತ್ತ್ವ.
—ಶ್ರೀ. ಬಾ. ರಾಮಪ್ರಸಾದ್ ಜೈನ್, ಡಿ.ಎಲ್.ಎಂ.ಆರ್.ಎ.ಎಸ್.
೩. ವಿಜಯನಗರ್ ರಾಜ್ಯಕಾ ಜೈನ ಧರ್ಮಕೆ ಪ್ರತಿ ಸದ್ಭಾವ್.
—ಶ್ರೀ ಬಾ. ತ್ರಿವೇಣಿ ಪ್ರಸಾದ್, ಬಿ.ಎ.
೪. ಶ್ರವಣಬೆಳ್ಗೊಳ್‌ಕೆ ಶಿಲಾಲೇಖೋಂ ಮೆ ಜೈನ ಮಹಿಲಾಓಂ ಕೆ ನಾಮ್.
—ಶ್ರೀಮತಿ ಜೀ. ಕೆ. ಜೈನ್, ಬಿ.ಎ.

*The Quarterly Journal of the Mythic Society.* Vol. XXXVI, No. I.

1. Second Copper Inscription of Mahāśivagupta Balarjuna of Mahākośal.
—Sri Pandit L. P. Pandya Sarma.
2. Sources of Indian Art.
—Sri P. Sama Rao, B.A., B.L.
3. Ethnology for India.
—Indu Bhushan Ghatak, B.A., M.R.A.S.
4. A Historical Records Commission in Mysore.
—Rajacharitavisharada Rao Bahadur C. Hayavadana Rao, B.A., B.L.
5. India through the Ages.
—Sri S. Srikantaiya, B.A., B.L.

Vol. XXXVI. No. 2.

1. The Problem of Two Kopperunjingas.
—Sri K. S. Vaidyanathan, B.A.
2. The Velanāti Cōdas.
—Sri Y. Venkata Ramana, M.A., B.Ed.
3. Beḷaguṭṭi Arasus.
—Sri S. Ranganatha Rao, B.A. (Hons).

Vol. XXXVI, No. 3.

(1) Hebbata Grant of Durvinīta Ganga.
—Sri S. Srikantha Sastry, M.A.

# ಮಾರಾಟಕ್ಕಿರುವ ಪರಿಷತ್ತಿನ ಪ್ರಕಟನೆಗಳು

| | | ರೂ. | ಆ. | ಕಾ. |
|---|---|---|---|---|
| ೧. | ಕನ್ನಡದ ಬಾವುಟ (ಪ್ರತಿಗಳು ಮುಗಿದಿವೆ) .... | ೧ | ೪ | ೦ |
| ೨. | ಕನ್ನಡ ನಾಡಿನ ಚರಿತ್ರೆ ; | | | |
| | ಭಾಗ ೧ : (ರಾಜಕೀಯ, ಸಾಮಾಜಿಕ ಚರಿತ್ರೆ) | ೧ | ೪ | ೦ |
| | ಭಾಗ ೨ : (ಕರ್ನಾಟಕದ ಧರ್ಮಗಳು) .... | ೧ | ೧೪ | ೦ |
| ೩. | ಸೀತಾಪರಿತ್ಯಾಗ (ಜೈಮಿನಿ ಭಾರತದಿಂದ) .... | ೦ | ೧೨ | ೬ |
| ೪. | ಪಂಪ ರಾಮಾಯಣದ ನಿಘಂಟು .... | ೦ | ೮ | ೩ |
| ೫. | ಪಂಪ ಭಾರತದ ನಿಘಂಟು .... .... | ೧ | ೦ | ೩ |
| ೬. | ಪಂಪ ರಾಮಾಯಣದ ಕಥಾಸಂಗ್ರಹ (ವಚನ) .... | ೦ | ೧೨ | ೦ |
| ೭. | ಪಂಪ ಭಾರತದ ಕಥಾಸಂಗ್ರಹ (ವಚನ) .... | ೧ | ೪ | ೦ |
| ೮. | ಪಂಪ ಭಾರತದ ಉಪೋದ್ಘಾತ (ಪ್ರತಿಗಳು ಮುಗಿದಿವೆ) | ೦ | ೪ | ೦ |
| ೯. | ದೂತವಾಕ್ಯವು (ಭಾಸನ ರೂಪಕದ ಕನ್ನಡ ಪರಿವರ್ತನೆ) (ಪ್ರತಿಗಳು ಮುಗಿದಿವೆ) .... | ೦ | ೪ | ೦ |
| ೧೦. | ಜೇಮ್ಸ್ ಏಬ್ರಾಮ್ ಗಾರ್ಫೀಲ್ಡನ ಚರಿತ್ರೆ: ಕ್ಯಾಲಿಕೊ ಪ್ರತಿ ೧ ೪ ೦; ಸಾದಾ ಪ್ರತಿ .... | ೦ | ೧೫ | ೦ |
| ೧೧. | ಜ್ಯೋತಿರ್ವಿನೋದಿನಿ .... .... | ೨ | ೦ | ೦ |
| ೧೨. | ಪಂಪ ರಾಮಾಯಣ (೪ನೆಯ ಆಶ್ವಾಸ) (ಪ್ರತಿಗಳು ಮುಗಿದಿವೆ) .... .... | ೦ | ೮ | ೩ |
| ೧೩. | ತೊರವೆಯ ರಾಮಾಯಣ : (ಬಾಲಕಾಂಡ ಸಂಧಿ ೧೩-೧೬) (ಪ್ರತಿಗಳು ಮುಗಿದಿವೆ) | ೦ | ೩ | ೯ |
| ೧೪. | ಶ್ರೀ ಹರಿದಾಸರ ಕೃತಿಗಳು (ಸ್ವರಪ್ರಸ್ತಾರ ಸಹಿತ) | ೦ | ೧೫ | ೦ |
| ೧೫. | ಹೂಮಾಲೆ .... | ೦ | ೧೦ | ೦ |

## ಇತರ ಪ್ರಕಟನೆಗಳು

| | | |
|---|---|---|
| ೧. | ಕನ್ನಡ ನಾಡಿನ ಚರಿತ್ರೆ: (೩ನೆಯ ಭಾಗ) .... | (ಅಚ್ಚಿನಲ್ಲಿ) |
| ೨. | ವಡ್ಡಾರಾಧನೆ .... .... | ,, |
| ೩. | ಚಾವುಂಡರಾಯ ಪುರಾಣ .... .... | ,, |

**ಕನ್ನಡ ಸಾಹಿತ್ಯ ಪರಿಷತ್ತು**

**ಚಾಮರಾಜಪೇಟೆ :: ಬೆಂಗಳೂರು ನಗರ**

ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು ನಗರ

# ವಿನಿಮಯ ಪತ್ರಿಕೆಗಳು - ಪ್ರಕಟನೆಗಳು

**ತ್ರೈಮಾಸಿಕ ಪತ್ರಿಕೆಗಳು :**

೧. ಶ್ರೀಮನ್‌ಮಹಾರಾಜರವರ ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ. ೨. ಪ್ರಬುದ್ಧ ಕರ್ಣಾಟಕ. ೩. ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಪತ್ರಿಕೆ.

1. Journal of the Mythic Society. 2. Journal of the Annamalai. University. 3. Journal of the Bombay Branch of the Royal Asiatic Society. 4. Journal of the K. R. Cama Oriental Research Institute. 5. Journal of Indian History. 6. The Jaina Antiquary (ಜೈನ ಸಿದ್ಧಾಂತ ಭಾಸ್ಕರ). 7. Annals of the Bhandarkar Oriental Research Institute. 8. St. Aloysius College Annual. 9. Bulletin of the Deccan Colleges Research Institute.

**ದ್ವೈಮಾಸಿಕ ಪತ್ರಿಕೆಗಳು :**

೧. ಆಂಧ್ರ ಸಾಹಿತ್ಯ ಪರಿಷತ್ ಪತ್ರಿಕೆ

1. The Journal of Sri. Venkatesvara Oriental Institute, Tirupati. 2. Journal of the Bombay University. 3. Half - Yearly Journal of the Mysore University.

**ಮಾಸ ಪತ್ರಿಕೆಗಳು :**

೧. ಆಧ್ಯಾತ್ಮ ಪ್ರಕಾಶ. ೨. ಜಯಕರ್ನಾಟಕ. ೩. ಮೈಸೂರು ಸಹಕಾರ ಪತ್ರಿಕೆ. ೪. ದಿವ್ಯಜ್ಯೋತಿ ೫. ಸುಬೋಧ. ೬. ಸದ್ಬೋಧ ಚಂದ್ರಿಕೆ. ೭. ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ. ೮. ಕಾದಂಬರೀ ಸಂಗ್ರಹ. ೯. ಮೊಗವೀರ. ೧೦. ಸದ್ಧರ್ಮ ದೀಪಿಕೆ. ೧೧. ಶಿಕ್ಷಕಮಿತ್ರ. ೧೨. ಮಕ್ಕಳ ಪುಸ್ತಕ. ೧೩. ವಿವೇಕಾಭ್ಯುದಯ. ೧೪. ಕತೆಗಾರ. ೧೫. ಧುರೀಣ. ೧೬. ವೀರಶೈವ ಚಂದ್ರಿಕೆ. ೧೭. ಸಂಸ್ಕೃತ ಸಾಹಿತ್ಯ ಪರಿಷತ್ಪತ್ರಿಕೆ. ೧೮. ಸರಸ್ವತಿ. ೧೯. ವಿಮಾ ವಾಣಿಜ್ಯ. ೨೦. ವಿದ್ಯಾದಾಯಿನಿ. ೨೧. ಹೈದರಾಬಾದ್ ಸಮಾಚಾರ್. ೨೨. ಶರಣಸಾಹಿತ್ಯ. ೨೩. ಜಯಂತಿ. ೨೪. ಜೀವನ. ೨೫. ವಾಣಿ. ೨೬. ನಮ್ಮ ಪುಸ್ತಕ. ೨೭. ನಿಖಿಲ ಕರ್ನಾಟಕ ಆಯುರ್ವೇದ ಸಮ್ಮೇಳನ ಪತ್ರಿಕೆ. ೨೮. ಶಿವಾನುಭವ. ೨೯. ಉಷಾ. ೩೦. ಜನತ. ೩೧. ನರಸಿಂಹ. ೩೨. ಪುಸ್ತಕಪ್ರಪಂಚ.

1. The Mysore Economic Journal. 2. The Indian P.E.N. 3. Divine Life.

**ವಾರ ಪತ್ರಿಕೆಗಳು :**

೧. ಕರ್ನಾಟಕ ವೈಭವ. ೨. ಸ್ವದೇಶಾಭಿಮಾನಿ. ೩. ಕಂಠೀರವ. ೪. ರಾಷ್ಟ್ರಬಂಧು. ೫. ಶರಣಸಂದೇಶ. ೬. ಬಸವರಾಜ. ೭. ಕರ್ಮವೀರ. ೮. ಕರ್ನಾಟಕ ಬಂಧು. ೯. ವಿಶ್ವಕರ್ಣಾಟಕ. ೧೦. ತಾಯಿನಾಡು. ೧೧. ಪ್ರಭಾತ. ೧೨. ನವ ಸಂದೇಶ. ೧೩. ಸ್ವತಂತ್ರ ಭಾರತ. ೧೪. ದೇಶಬಂಧು. ೧೫. ಅಂತರಂಗ. ೧೬. ವಾಹಿನಿ. ೧೭. ಕೊಡಗು. ೧೮. ಕನ್ನಡವೃತ್ತ. ೧೯. ಕೇಸರಿ.

**ಇತರ ಪ್ರಕಟನೆಗಳು :**

೧. ಇಂಡಿಯಾ ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೨. ಮೈಸೂರು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೩. ಹೈದರಾಬಾದು ಸರ್ಕಾರದ ಶಾಸನದ ಇಲಾಖೆಯ ಪ್ರಕಟನೆಗಳು. ೪. ಮನೋಹರ ಗ್ರಂಥಮಾಲೆ. ೬. ಪ್ರತಿಭಾ ಗ್ರಂಥಮಾಲೆ. ೭. ಲಲಿತ ಸಾಹಿತ್ಯ ಗ್ರಂಥಮಾಲೆ. ೮. ಮಿಂಚಿನಬಳ್ಳಿ ಗ್ರಂಥಮಾಲೆ. ೯. ವಿಚಾರ ಸಾಹಿತ್ಯಮಾಲೆ. ೧೦. ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಪ್ರಕಟನೆಗಳು. ೧೧. ಕಾವ್ಯಾಲಯ. ೧೨. ಉಷಾ ಗ್ರಂಥಮಾಲೆ.

# ಕನ್ನಡ ಸಾಹಿತ್ಯ ಪರಿಷತ್ತು

**ಮಹಾಪೋಷಕರು**

ಮೈಸೂರು ಸಂಸ್ಥಾನದ ಶ್ರೀಮನ್ ಮಹಾರಾಜರವರಾದ
ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರು

**ಅಧ್ಯಕ್ಷರು**

ಒಂಟಮುರಿಯ ಶ್ರೀಮಂತ ಬಸವಪ್ರಭು
ರಾಜಾ ಲಖಮಗೌಡ ಸರದೇಸಾಯಿ, ಒ.ಬಿ.ಇ. ಅವರು

## ಕಾರ್ಯ ಸಮಿತಿ, ೧೯೪೬

**ಅಧಿಕಾರಿಗಳು**

**ಉಪಾಧ್ಯಕ್ಷರು**

ರಾಜಸೇವಾಪ್ರಸಕ್ತ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎಂ.ಎ. ಅವರು

**ಕಾರ್ಯದರ್ಶಿಗಳು**

ಶ್ರೀ. ಕ. ವೆಂ. ರಾಘವಾಚಾರ್ಯರು, ಎಂ.ಎ., ಬಿ.ಟಿ.

**ಕೋಶಾಧಿಕಾರಿಗಳು**

ಶ್ರೀ. ಕೆ. ರೇವಣ್ಣನವರು

**ಸದಸ್ಯರು**

**ಸಮ್ಮೇಳನಾಧ್ಯಕ್ಷರು**

ಶ್ರೀ. ತ್ಯಾಗರಾಜ ಪರಮಶಿವ ಕೈಲಾಸಂ ಅವರು

**ಅರಮನೆಯ ಪ್ರತಿನಿಧಿಗಳು**

ಡಾ॥ ಎ. ಎನ್. ನರಸಿಂಹಯ್ಯ, ಎಂ.ಎ., ಪಿಎಚ್.ಡಿ. ಅವರು

**ಪ್ರದೇಶ ಪ್ರತಿನಿಧಿಗಳು :**

ಬೆಂಗಳೂರು ನಗರ: ಶ್ರೀಮತಿ ಬಿ. ಎಲ್. ಸುಶೀಲಮ್ಮ, ಎಂ.ಎಸ್‌ಸಿ. ಅವರು, ಬೆಂಗಳೂರು ಜಿಲ್ಲೆ: ಆಸ್ಥಾನ ವಿದ್ವಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳು, ಮೈಸೂರು : ಎನ್. ಎಸ್. ನಾರಾಯಣಶಾಸ್ತ್ರಿಗಳು, ಎಂ.ಎ.,ಡಿ.ಲಿಟ್. ಶಿವಮೊಗ್ಗ : ಶ್ರೀ. ಎಸ್. ವಿ. ಕೃಷ್ಣಮೂರ್ತಿರಾಯರು, ಬಿ.ಎಸ್‌ಸಿ., ಎಲ್‌ಎಲ್.ಬಿ. ಧಾರವಾಡ ಜಿಲ್ಲೆ: ಶ್ರೀ. ತಮ್ಮಣ್ಣನಾಯ್ಕರು. ಬೆಳಗಾಂವಿ ಜಿಲ್ಲೆ : ಎಂ. ಪಿ. ವಾಲಿ, ಎಂ.ಎ. ಅವರು. ಬಿಜಾಪುರ ಜಿಲ್ಲೆ: ಶ್ರೀ. ದ. ರಾ. ಬೇಂದ್ರೆಯವರು, ಎಂ.ಎ. ಉತ್ತರ ಕನ್ನಡ: ಶ್ರೀ. ಎನ್.ಎಸ್. ನೆಜ್ಕೂರ್ ಅವರು. ಬಳ್ಳಾರಿ ಜಿಲ್ಲೆ: ಶ್ರೀ. ಎಂ. ವೆಂಕೋಬಶೆಟ್ಟರು, ಬಿ.ಎ.,ಬಿ.ಎಲ್. ಮಂಗಳೂರು: ಶ್ರೀ. ಕೆ. ಬಿ. ಜಿನರಾಜ ಹೆಗ್ಗಡೆ, ಬಿ.ಎಸ್‌ಸಿ., ಬಿ.ಎಲ್. ಅವರು. ಕೊಡಗು : ಶ್ರೀ. ಎಂ. ಎಸ್. ಅನಂತಪದ್ಮನಾಭರಾಯರು. ಮದರಾಸು : ಶ್ರೀ. ಪ. ರಮಾನಂದರಾಯರು, ಎಂ.ಎ., ಎಲ್.ಟಿ. ಬೊಂಬಾಯಿ: ಶ್ರೀ. ಎಚ್. ಎಸ್. ಪಾಟೀಲರು, ಎಂ.ಎ., ಬಿ.ಕಾಂ. ಹೈದರಾಬಾದು : ಶ್ರೀ. ಸಿ. ರಂಗಾಚಾರ್ಯ, ಎಂ.ಎ., ಎಲ್‌ಎಲ್.ಬಿ. ಅವರು. ಕಲಬುರ್ಗಿ: ದತ್ತಾತ್ರೇಯ ಅವಧಾದಿ ಅವರು. ಉ. ಕ. ಸಂಸ್ಥಾನಗಳು : ಶ್ರೀ. ಗು. ಮ. ಗುಣಕಿಯವರು.

---

ಕನ್ನಡ ಸಾಹಿತ್ಯ ಪರಿಷತ್ತಿನ ಅಚ್ಚುಕೂಟ, ಬೆಂಗಳೂರು ನಗರ
೧೯೪೬